ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೮

# ಶ್ರೀಮದ್ವಾಯುಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೩

ಅನುವಾದಕ :

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ, ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು.

ಮೈಸೂರು :

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

1947

# ಉಪೋದ್ಘಾತ

ಶ್ರೀಮದ್ವಾಯುಮಹಾಪುರಾಣದ ಮೂರನೆಯ ಸಂಪುಟವು ಈಗ ಮುಗಿದಿರುತ್ತದೆ. ಈ ಸಂಪುಟದಲ್ಲಿ ಮುಖ್ಯವಾಗಿ ಜ್ಯೋತಿರ್ಗಣಗಳ ಪ್ರಚಾರಾದಿಗಳು, ಲಿಂಗೋತ್ಪತ್ತಿ, ನೀಲಕಂಠಸ್ತವ, ಯಜ್ಞಯಾಗಾದಿಗಳು ಇವೇ ಮೊದಲಾದ ವಿಷಯಗಳು ವಿಶೇಷವಾಗಿ ವರ್ಣಿತವಾಗಿವೆ.

ಈ ಜಗತ್ತಿನಲ್ಲಿರುವ ಸರ್ವಜನರೂ ಮಾಡುವ ನಿತ್ಯನೈಮಿತ್ತಿಕಾದಿ ಸರ್ವಕರ್ಮಗಳಿಗೂ, ಲೌಕಿಕ ವೈದಿಕಾದಿ ಸರ್ವಕಾರ್ಯಗಳಿಗೂ ಕಾಲವೇ ಮುಖ್ಯಕಾರಣವಾಗಿದೆ. ಇಂತಹ ಮಹಾಕಾಲವು. ಕ್ಷಣ, ಲವ, ಮುಹೂರ್ತ, ಹಗಲು, ರಾತ್ರಿ, ದಿವಸ, ಪಕ್ಷ, ಮಾಸ, ಋತು, ಸಂವತ್ಸರ ಇವುಗಳ ಸ್ವರೂಪವಾಗಿದೆ. ಇಂತಹ ದಿವಸಾದಿಗಳು ಸೂರ್ಯಚಂದ್ರಾದಿಗಳ ಸಂಚಾರದಿಂದ ಸಿದ್ಧವಾಗುವುವು. ಅವರಲ್ಲಿ ಮುಖ್ಯನಾದ ಸೂರ್ಯನ ಗಮನವನ್ನು ಮಂದೇಹನಾಮಕ ಅಸಂಖ್ಯಾತರಾದ ರಾಕ್ಷಸರು ತಡೆಯುವರೆಂದು ಶಾಸ್ತ್ರದಲ್ಲಿ ನಿರೂಪಿತವಾಗಿದೆ. ಅಂತಹ ರಾಕ್ಷಸರನ್ನು ಸಂಹರಿಸಿ ಸೂರ್ಯನ ಸಂಚಾರಕ್ಕೆ ಅಡ್ಡಿಬಾರದ ಹಾಗೆ ಮಾಡುವ ಶಕ್ತಿಯು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಮಾಡುವ ಸಂಧ್ಯಾವಂದನೆಯ ಅಂಗವಾದ ಅರ್ಘ್ಯಪ್ರದಾನವೆಂಬ ಕಾರ್ಯದಲ್ಲಿರುತ್ತದೆ. ಅವರು ಮಾಡುವ ಅರ್ಘ್ಯದಾನವು, ವಜ್ರಾಯುಧರೂಪಗಳಾಗಿ ಆ ರಾಕ್ಷಸರನ್ನು ಸಂಹರಿಸುವುದರಿಂದ ಸೂರ್ಯನು ತಡೆಯಿಲ್ಲದೆ ಸುಖವಾಗಿ ಪ್ರತಿದಿನವೂ ಸಂಚರಿಸುವನು. ಆ ರಾಕ್ಷಸರು ಹೀಗೆ ಮೃತರಾದರೂ ಬ್ರಹ್ಮದೇವನ ವರದಿಂದ ಪ್ರತಿದಿನವೂ ಜನಿಸಿ, ಸೂರ್ಯಗತಿಯನ್ನು ತಡೆಯುವರು. ಆದುದರಿಂದ ಪ್ರತಿನಿತ್ಯವೂ, ಅರ್ಘ್ಯವನ್ನು ಕೊಡಬೇಕಾಗಿರುವುದು. ಈ ಅರ್ಘ್ಯಪ್ರದಾನದಂತೆ ಸಕಲ ವರ್ಣದವರೂ ಮಾಡುವ ಸಕಲ ಸತ್ಕರ್ಮಗಳೂ, ಮಹತ್ಪ್ರಯೋಜನಗಳಾಗಿರುತ್ತವೆ.

ಸೂರ್ಯನ ಗಮನಕ್ಕೆ ಪ್ರತಿಬಂಧಕರಾದ ರಾಕ್ಷಸರನ್ನು ತಡೆಯುವ ಅರ್ಘ್ಯಪ್ರದಾನವನ್ನು ಮಾಡದ, ಮತ್ತು ಜಾತಿಭೇದಗಳಿಲ್ಲದ ಇತರ ಖಂಡಗಳಲ್ಲಿ ಸೂರ್ಯ

ಸಂಚಾರಕ್ಕೆ ಅಡ್ಡಿಯಿದೆಯೇ ? ಎಂಬ ಶಂಕೆಯು ಉತ್ಪನ್ನವಾಗುತ್ತದೆ. ಆದರೆ "ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಾಃ" ಎಂಬ ನೀತಿಯಿಂದ ಒಬ್ಬನು ಮಾಡಿದ ಪುಣ್ಯಪಾಪಗಳಿಂದ ಅನೇಕರು ಆ ಫಲಗಳನ್ನು ಅನುಭವಿಸುವಂತೆ ಒಂದು ಖಂಡದಲ್ಲಿ ಮಾಡುವ ಧರ್ಮಾಚರಣೆಯಿಂದ ಇತರ ಖಂಡಗಳಿಗೂ ಆ ಫಲಗಳು ಸಂಭವಿಸುವುವು ಎಂದು ಹೇಳಿದರೆ ಆಶ್ಚರ್ಯವಾಗಲಾರದು.

ಇಂತಹ ಸೂರ್ಯನು ಭೂಮಿಗೆ ಎಷ್ಟು ಸಾವಿರ ಯೋಜನಗಳ ದೂರದಲ್ಲಿರುವನು ? ಅವನ ಮಂಡಲದ ವಿಸ್ತಾರವೆಷ್ಟು ? ಸೂರ್ಯನ ಮೇಲ್ಭಾಗದಲ್ಲಿ ಚಂದ್ರಮಂಡಲವೂ, ಅದರ ಮೇಲೆ ನಕ್ಷತ್ರಮಂಡಲವೂ ಅದರ ಮೇಲೆ ಧ್ರುವಮಂಡಲವೂ ಇರುವುವು. ಆ ಧ್ರುವನ ವಶದಲ್ಲಿ ಜ್ಯೋತಿರ್ಮಂಡಲವು ಇರುವುದು. ಎಂಬಿವೇ ಮೊದಲಾದ ವಿಷಯಗಳನ್ನು ಮಹರ್ಷಿಗಳು ಪ್ರತ್ಯಕ್ಷವಾಗಿ ಕಂಡಂತೆ ಪುರಾಣಗಳಲ್ಲಿ ವರ್ಣಿಸುತ್ತಾರೆ.

ಈ ವೈಜ್ಞಾನಿಕಯುಗದಲ್ಲಿ ವೈಜ್ಞಾನಿಕರು ಇನ್ನೂ ಸಾವಿರಾರು ವರ್ಷಗಳು ಶೋಧಿಸಿ ನೋಡಿದರೂ ಸೂರ್ಯಾದಿಗ್ರಹಗಳ ವಿಸ್ತೀರ್ಣತೆಯೇ ಮೊದಲಾದ ವಿಷಯಗಳಲ್ಲಿ ನಮ್ಮ ಮಹರ್ಷಿಗಳಂತೆ ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲವೆಂಬ ಅಂಶವನ್ನು ಧಾರಾಳವಾಗಿ ಹೇಳಬಹುದು. ಹೀಗೆ ನಮ್ಮ ಪ್ರಾಚೀನ ಮಹರ್ಷಿಗಳಲ್ಲಿ ಇಂತಹ ಮಹಾಶಕ್ತಿಗಳಿದ್ದುವೆಂಬುದಾಗಿ ಹಿಗ್ಗಬೇಕಾದ ಕಾರಣಗಳಿದ್ದರೂ, ಅಂತಹ ಶಕ್ತಿಯು ನಮ್ಮಗಳಲ್ಲಿಲ್ಲದೇ ಕಳೆದುಹೋಗಿವೆಯಲ್ಲಾ ಎಂದು ತಗ್ಗಿಕುಗ್ಗಿರಬೇಕಾದ ಕಾಲವು ಪ್ರಾಪ್ತವಾಗಿದೆ. ಅಂತಹ ಮಹಾಶಕ್ತಿಯನ್ನು ಪಡೆಯಲು ಈಗ ನಾವು ಯತ್ನವನ್ನಾದರೂ ಯೋಚಿಸಬೇಕು.

ಈ ನಮ್ಮ ಭರತಖಂಡದಲ್ಲಿ ಸರ್ವಮಾನ್ಯರೂ, ಸೃಷ್ಟ್ಯಾದಿಕರ್ತೃಗಳೆಂದು ಪ್ರಸಿದ್ಧರೂ ಆದ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂವರು ದೇವತೆಗಳು ಪ್ರಖ್ಯಾತರಾಗಿರುವರು. ಕೆಲವರು ಈಶ್ವರನಿಗೆ ಪ್ರಾಧಾನ್ಯವನ್ನೂ, ಮತ್ತೆ ಕೆಲವು ಪ್ರಜೆಗಳು ವಿಷ್ಣುವಿಗೆ ಪೂಜ್ಯತೆಯನ್ನೂ ಹೇಳುವರು. ಹೀಗಿದ್ದರೂ ಈ ವಾಯುಮಹಾಪುರಾಣದ

ಲಿಂಗೋತ್ಪತ್ತಿ ಪ್ರಕರಣದಲ್ಲಿ ಈಶ್ವರನ ಪ್ರಾಶಸ್ತ್ಯವು ವಿಶೇಷವಾಗಿ ವರ್ಣಿತವಾಗಿದೆ. ಶ್ರೀ ಹರಿಯು ಕ್ಷೀರಶಾಯಿಯಾಗಿರಲು ಬ್ರಹ್ಮದೇವನು ಅವನ ಬಳಿಗೆ ಹೋಗಿ ಅವನನ್ನು ಹೊಗಳಿ ಸಂಭಾಷಿಸುತ್ತಿರಲಾಗಿ, ಅವರಿಬ್ಬರಿಗೂ ತೇಜೋಮಯವಾದ ಒಂದು ಲಿಂಗವು ಗೋಚರವಾಯಿತು. ಅವರಿಬ್ಬರೂ ಆ ಲಿಂಗದ ಆದ್ಯಂತಗಳನ್ನು ನೋಡ ಬೇಕೆಂದು ಬಹುಕಾಲ ಪರೀಕ್ಷಿಸಿದರೂ ಆ ಲಿಂಗದ ತುದಿಮೊದಲು ಕಾಣದೇ ಹೋದವು. ತರುವಾಯ ಅವರು ಪುನಃ ಈಶ್ವರಲಿಂಗದ ಬಳಿಗೆ ಬಂದು ಪರಮೇಶ್ವರನನ್ನು ನಾನಾ ರೀತಿಯಾಗಿ ಹೊಗಳಿದರು. ಆಗ ಈಶ್ವರನು ಮೆಚ್ಚಿ ಅವರಿಗೆ ವರಗಳನ್ನು ಕೊಟ್ಟು ಮಾಯವಾದನೆಂಬ ವಿಷಯಗಳು ಉಕ್ತವಾಗಿವೆ.

ಮತ್ತು ಪುತ್ರರು ತಮ್ಮ ಪಿತೃಗಳ ಉದ್ದೇಶ್ಯವಾಗಿ ಶ್ರಾದ್ಧಕಾಲದಲ್ಲಿ ಮಾಡುವ ಅನ್ನದಾನಾದಿಗಳು ಆಯಾ ಪಿತೃಗಳು ಯಾವ ಲೋಕದಲ್ಲಿ ಯಾವ ಜನ್ಮವನ್ನು ಹೊಂದಿದ್ದರೂ, ಅವರಿಗೆ ಯೋಗ್ಯವಾದ ಆಹಾರರೂಪವಾಗಿ ಪರಿಣಮಿಸಿ ಅವರಿಗೆ ಸೇರುವಂತೆ ಪಿತೃದೇವತೆಗಳು ಮಾಡುವರೆಂಬ ಅಂಶವು ಯುಕ್ತಿಸಹಿತವಾಗಿ ವರ್ಣಿತವಾಗಿದೆ.

ಕೃತ, ತ್ರೇತಾ, ದ್ವಾಪರ, ಕಲಿಯುಗಗಳ ಕಾಲಪ್ರಮಾಣವು ಅವುಗಳಲ್ಲಿ ನಡೆಯುವ ಧರ್ಮಗಳು ವರ್ಣಿತವಾಗಿವೆ. ತ್ರಿಕಾಲಜ್ಞಾನರಾದ ಮಹರ್ಷಿಗಳು ಹಿಂದೆ ವರ್ಣಿಸಿರುವ ಕಲಿಯುಗದ ವಿಷಯಗಳನ್ನು ಈಗ ನಾವು ಪ್ರತ್ಯಕ್ಷವಾಗಿ ಕಾಣಬಹುದು.

ಮತ್ತು ಯುಗಭೇದದಿಂದ ವೇದಗಳು ವಿಭಾಗವಾಗುವ ಕ್ರಮವೂ, ವ್ಯಾಸರು ಕಲಿಯುಗದಲ್ಲಿ ಅವತರಿಸಿ ಅಖಂಡವಾದ ವೇದವನ್ನು ನಾಲ್ಕು ಭಾಗಮಾಡಿ ಜೈಮಿನಿ, ಸುಮಂತು, ವೈಶಂಪಾಯನ ಮತ್ತು ಪೈಲರೆಂಬ ನಾಲ್ವರು ಶಿಷ್ಯರಿಗೂ ಉಪದೇಶಿಸಿದ ರೀತಿಯೂ, ಉಕ್ತವಾಗಿವೆ. ಮತ್ತು ಐದನೆಯದಾದ ಪುರಾಣಗಳೆಂಬ ವೇದವನ್ನು ಸೂತಮಹಾಮುನಿಗೆ ಉಪದೇಶಮಾಡಿರುವರು. ಇಂತಹ ಪುರಾಣಗಳಲ್ಲಿ ವಾಯು ಮಹಾಪುರಾಣವು ಒಂದಾಗಿದೆ.

ಇಂತಹ ಪುರಾಣಗಳಲ್ಲಿರುವ ಅಮೂಲ್ಯವಾದ ವಿಷಯಗಳನ್ನು ಕನ್ನಡಿಗರಿಗೆ ಸುಲಭವಾಗಿ ತಿಳಿಯುವಂತೆ ಪರಿವರ್ತನೆಗೆ ಉತ್ತೇಜಕರೂ, ಧರ್ಮಜ್ಞರೂ, ಪುರಾಣ ಜೀರ್ಣೋದ್ಧಾರಕರೂ, ಪ್ರಭುಗಳೂ ಆದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಪ್ರಭುಗಳವರು ಪಾಲಿಸುವ ಈ ಕರ್ಣಾಟಕ ಸಾಮ್ರಾಜ್ಯವು ಧರ್ಮರಾಜ್ಯವನ್ನೂ, ರಾಮರಾಜ್ಯವನ್ನೂ ಮೀರಿಸಿ ಪೆರ್ಮೆಯಿಂದಲೂ, ಹೆಮ್ಮೆಯಿಂದಲೂ ಮೆರೆಯಲೆಂದು ಹಾರೈಸುವ.

ಅನುವಾದಕ

ತಾ॥ 1—8—1947.

ಆರ್. ಸೇತುಮಾಧವಾಚಾರ್,
ಆಸ್ಥಾನ ವಿದ್ವಾನ್.

# ವಿಷಯಾನುಕ್ರಮಣಿಕೆ

—|| ಹರಿಃ ಓಂ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣಂ

## ಪಂಚಾಶೋಽಧ್ಯಾಯಃ

|| ಸೂತ ಉವಾಚ ||

**ಅಧಃಪ್ರಮಾಣಮೂರ್ಧ್ವಂ ಚ ವರ್ಣ್ಯಮಾನಂ ನಿಬೋಧತ ।**
**ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಂ ॥**
**ಅನಂತಧಾತವೋ ಹ್ಯೇತೇ ವ್ಯಾಪಕಾಸ್ತು ಪ್ರಕೀರ್ತಿತಾಃ ॥ ೧ ॥**

**ಜನನೀ ಸರ್ವಭೂತಾನಾಂ ಸರ್ವಭೂತಧರಾ ಧರಾ**
**ನಾನಾಜನಪದಾಕೀರ್ಣಾ ನಾನಾಧಿಷ್ಠಾನಪತ್ತನಾ ॥ ೨ ॥**

**ನಾನಾನದನದೀಶೈಲಾ ನೈಕಜಾತಿಸಮಾಕುಲಾ ।**
**ಅನಂತಾ ಗೀಯತೇ ದೇವೀ ಪೃಥಿವೀ ಬಹುವಿಸ್ತರಾ ॥ ೩ ॥**

---

## ಐವತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು:—ಎಲೈ ಮಹರ್ಷಿಗಳಿರಾ, ಈಗ ಭೂಲೋಕಾದಿಗಳಿಗೂ ಊರ್ಧ್ವಲೋಕಾದಿಗಳಿಗೂ ಇರುವ ಪ್ರಮಾಣ ವಿಸ್ತಾರಗಳನ್ನು ವರ್ಣಿಸುವೆನು ಕೇಳಿರಿ. ಪೃಥಿವೀ, ವಾಯು, ಆಕಾಶ, ಜಲ, ಅಗ್ನಿ ಇವುಗಳನ್ನು ಅನಂತಧಾತುಗಳೆಂದೂ ವ್ಯಾಪಕಗಳೆಂದೂ ಕವಿಗಳು ಹೇಳುವರು.

೨–೩. ಭೂಮಾತೆಯು ಸರ್ವಭೂತಗಳಿಗೆ ತಾಯಿಯೂ ಸರ್ವಭೂತ ಧಾರಕಳೂ ನಾನಾದೇಶಗಳಿಂದಲೂ ವಿವಿಧ ನಗರಗಳಿಂದಲೂ ನಾನಾವಿಧ ನದನದೀ ಶೈಲಗಳಿಂದಲೂ ಅನೇಕ ಜಾತಿಯ ಮನುಷ್ಯಾದಿಗಳಿಂದಲೂ ಪೂರ್ಣಳೂ ಅಂತ ರಹಿತಳೂ ವಿಸ್ತಾರವಂತಳೂ ಆಗಿರುವಳೆಂದು ಜ್ಞಾನಿಗಳು ವರ್ಣಿಸುವರು.

ನದೀನದಸಮುದ್ರಸ್ಥಾಸ್ತಥಾ ಕ್ಷುದ್ರಾಶ್ರಯಾಃ ಸ್ಥಿತಾಃ ।
ಪರ್ವತಾಕಾಶಸಂಸ್ಥಾಶ್ಚ ಅಂತರ್ಭೂಮಿಗತಾಶ್ಚ ಯಾಃ ॥ ೪ ॥

ಆಪೋನಂತಾಶ್ಚ ವಿಜ್ಞೇಯಾಸ್ತಥಾಗ್ನಿಃ ಸರ್ವಲೌಕಿಕಃ ।
ಅನಂತಃ ಪಠ್ಯತೇ ಚೈವ ವ್ಯಾಪಕಃ ಸರ್ವಸಂಭವಃ ॥ ೫ ॥

ತಥಾಕಾಶಮನಾಲಂಬಂ ರಮ್ಯಂ ನಾನಾಶ್ರಯಂ ಸ್ಮೃತಂ ।
ಅನಂತಂ ಪ್ರಥಿತಂ ಸರ್ವಂ ವಾಯುಶ್ಚಾಕಾಶಸಂಭವಃ ॥ ೬ ॥

ಆಪಃ ಪೃಥಿವ್ಯಾಮುದಕೇ ಪೃಥಿವೀ ಚೋಪರಿಸ್ಥಿತಾ ।
ಆಕಾಶಂ ಚಾಪರಮಧಃ ಪುನರ್ಭೂಮಿಃ ಪುನರ್ಜಲಂ ॥ ೭ ॥

ಏವಮಂತಮನಂತಸ್ಯ ಭೌತಿಕಸ್ಯ ನ ವಿದ್ಯತೇ ।
ಪುರಾ ಸುರೈರಭಿಹಿತಂ ನಿಶ್ಚಿತಂ ತು ನಿಬೋಧತ ॥ ೮ ॥

---

೪-೫. ಅದರಂತೆಯೇ ಜಲವೂ ಸಹ, ನದೀನದ, ಸಮುದ್ರ, ಸಣ್ಣ, ದೊಡ್ಡ ಗುಂಡಿಗಳು, ಪರ್ವತ ಆಕಾಶ ಇವುಗಳಿಗೆ ಆಶ್ರಯವಾಗಿಯೂ ಭೂಮ್ಯಂತರ್ಗತವಾಗಿಯೂ ಅನೇಕ ಪ್ರಾಣಿಗಳಿಗೆ ಆಧಾರವಾಗಿಯೂ ಅನಂತನಾಮಕವಾಗಿಯೂ ಇರುತ್ತದೆ. ಅದರಂತೆಯೇ ಲೌಕಿಕಾಗ್ನಿಯೂ ಸಹ ಅನಂತನಾಮಕವೂ ವ್ಯಾಪಕವೂ ಸರ್ವಜನಕವೂ ಆಗಿರುವುದು.

೬. ಮತ್ತು ನಿರಾಲಂಬವಾದ ಆಕಾಶವು ರಮ್ಯವೂ ನಾನಾವಸ್ತುಗಳಿಗೆ ಆಶ್ರಯವೂ ಅನಂತನಾಮಕವೂ ಪ್ರಖ್ಯಾತವೂ ಆಗಿದೆ. ಇಂತಹ ಆಕಾಶದಿಂದ ವಾಯುವು ಜನ್ಯವಾಗಿದೆ.

೭-೮. ಜಲವು ಭೂಮಿಯಲ್ಲಿಯೂ ಆ ಭೂಮಿಯು ಜಲದಲ್ಲಿಯೂ ಇರುವುದು. ಅನಂತರ ಆಕಾಶವೂ ಅದರ ಕೆಳಗೆ ಭೂಮಿಯೂ ಅದರ ಕೆಳಗೆ ಜಲವೂ ಇರುವುದರಿಂದ ಭೌತಿಕವಸ್ತುಗಳಿಗೆ ಕೊನೆಯೇ ಇಲ್ಲ. ಅನಂತನಾಮಕಗಳಾದ ಭೂತಗಳ ವಿಷಯದಲ್ಲಿ ದೇವತೆಗಳು ಪೂರ್ವದಲ್ಲಿ ಹೇಳಿದ ಸಂಗತಿಗಳನ್ನು ತಿಳಿಸುವೆನು ಕೇಳಿರೆಂದು ಸೂತರು ಹೇಳಿದರು.

ಭೂಮಿರ್ಜಲಮಥಾಕಾಶಮಿತಿ ಜ್ಞೇಯಾ ಪರಂಪರಾ ।
ಸ್ಥಿತಿರೇಷಾ ತು ವಿಜ್ಞೇಯಾ ಸಪ್ತಮೇಽಸ್ಮಿನ್ ರಸಾತಲೇ ॥ ೯ ॥

ದಶಯೋಜನಸಾಹಸ್ರಮೇಕಭೌಮಂ ರಸಾತಲಂ ।
ಸಾಧುಭಿಃ ಪರಿವಿಖ್ಯಾತಮೇಕೈಕಂ ಬಹುವಿಸ್ತರಂ ॥ ೧೦ ॥

ಪ್ರಥಮಮತಲಂಚೈವ ಸುತಲಂ ತು ತತಃ ಪರಂ ।
ತತಃ ಪರತರಂ ವಿದ್ಯಾದ್ವಿತಲಂ ಬಹುವಿಸ್ತರಂ ॥ ೧೧ ॥

ತತೋ ಗಭಸ್ತಲಂ ನಾಮ ಪರತಶ್ಚ ಮಹಾತಲಂ ।
ಶ್ರೀತಲಂ ಚ ತತಃ ಪ್ರಾಹುಃ ಪಾತಾಲಂ ಸಪ್ತಮಂ ಸ್ಮೃತಂ ॥ ೧೨ ॥

ಕೃಷ್ಣಭೌಮಂ ಚ ಪ್ರಥಮಂ ಭೂಮಿಭಾಗಂ ಚ ಕೀರ್ತಿತಂ ।
ಪಾಂಡುಭೌಮಂ ದ್ವಿತೀಯಂ ತು ತೃತೀಯಂ ರಕ್ತಮೃತ್ತಿಕಂ ॥ ೧೩ ॥

---

೯-೧೦. ಮೊದಲು ಭೂಮಿಯು ಅನಂತರ ಜಲವು ತರುವಾಯ ಆಕಾಶವು ಆಮೇಲೆ ಮತ್ತು ಭೂಮಿಯು ಹೀಗೆ ಪರಂಪರೆಯಾಗಿರುವುವು. ಹೀಗೆ ಪರಂಪರೆಯಾಗಿರುವ ಏಳನೆಯ ಭೂತಳದ ಸಂಗತಿಗಳನ್ನು ತಿಳಿಸುವೆನು. ಒಂದೊಂದು ಭೂಮಿಯೂ ರಸಾತಲವೂ ಹತ್ತು ಯೋಜನ ವಿಸ್ತಾರವಾಗಿರುತ್ತವೆ. ಅವರಲ್ಲಿ ಪ್ರತಿಯೊಂದೂ ಅತಿ ವಿಸ್ತಾರವಾಗಿವೆಯೆಂದು ಸಾಧುಗಳು ಹೇಳುವರು.

೧೧-೧೨. ಕೆಳಗಿನ ಸಪ್ತಲೋಕಗಳಲ್ಲಿ ಮೊದಲನೆಯದು ಅತಲವು, ಅನಂತರ ಸುತಲವು, ಮೂರನೆಯದು ವಿತಲವು, ನಾಲ್ಕನೆಯದು ವಿಶಾಲವಾದ ಗಭಸ್ತಲವು, ಐದನೆಯದು ಮಹಾತಲವು, ಆರನೆಯದು ಶ್ರೀತಲವು, ಏಳನೆಯದು ಪಾತಾಲವೆಂದು ಜ್ಞಾನಿಗಳು ಹೇಳುವರು.

೧೩-೧೪. ಮೊದಲನೆಯದು ಕರೀಭೂಮಿಯಾಗಿಯೂ ಎರಡನೆಯ ಸುತಲವು ಬಿಳಿಯ ನೆಲವಾಗಿಯೂ, ಮೂರನೆಯದು ಕೆಮ್ಮಣ್ಣಿನ ಭೂಮಿಯಾಗಿಯೂ ನಾಲ್ಕನೆಯದು ಹೊಂಬಣ್ಣದ ಭೂಮಿಯಾಗಿಯೂ ಐದನೆಯ ಮಹಾತಲವು ಸಕ್ಕರೆಯ

ಪೀತಭೌಮಂ ಚತುರ್ಥಂ ತು ಪಂಚಮಂ ಶರ್ಕರಾತಲಂ ।
ಷಷ್ಠಂ ಶಿಲಾಮಯಂ ಚೈವ ಸೌವರ್ಣಂ ಸಪ್ತಮಂ ತಲಂ ॥ ೧೪ ॥

ಪ್ರಥಮೇ ತು ತಲೇ ಖ್ಯಾತಮಸುರೇಂದ್ರಸ್ಯ ಮಂದಿರಂ ।
ನಮುಚೇರಿಂದ್ರಶತ್ರೋರ್ಹಿ ಮಹಾನಾದಸ್ಯ ಚಾಲಯಂ ॥ ೧೫ ॥

ಪುರಂ ಚ ಶಂಕುಕರ್ಣಸ್ಯ ಕಬಂಧಸ್ಯ ಚ ಮಂದಿರಂ ।
ನಿಷ್ಕುಲಾದಸ್ಯ ಚ ಪುರಂ ಪ್ರಹೃಷ್ಟಜನಸಂಕುಲಂ ॥ ೧೬ ॥

ರಾಕ್ಷಸಸ್ಯ ಚ ಭೀಮಸ್ಯ ಶೂಲದಂತಸ್ಯ ಚಾಲಯಂ ।
ಲೋಹಿತಾಕ್ಷಕಲಿಂಗಾನಾಂ ನಗರಂ ಶಾಪದಸ್ಯ ತು ॥ ೧೭ ॥

ಧನಂಜಯಸ್ಯ ಚ ಪುರಂ ಮಾಹೇಂದ್ರಸ್ಯ ಮಹಾತ್ಮನಃ ।
ಕಾಲಿಯಸ್ಯ ಚ ನಾಗಸ್ಯ ನಗರಂ ಕಲಸಸ್ಯ ಚ ॥ ೧೮ ॥

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಂ ।
ತಲೇ ಜ್ಞೇಯಾನಿ ಪ್ರಥಮೇ ಕೃಷ್ಣಭೌಮೇ ನ ಸಂಶಯಃ ॥ ೧೯ ॥

---

ಭೂಮಿಯಾಗಿಯೂ ಆರನೆಯ ಶ್ರೀತಲವು ಶಿಲಾಮಯ ಭೂಮಿಯಾಗಿಯೂ ಏಳನೆಯ ಪಾತಾಲವು ಸುವರ್ಣಮಯ ಭೂಮಿಯಾಗಿಯೂ ಇರುತ್ತವೆ.

೧೫-೧೬. ಮೊದಲನೆಯ ಅತಲಲೋಕದಲ್ಲಿ ಅಸುರೇಂದ್ರನೂ ಇಂದ್ರಶತ್ರುವೂ ಆದ ನಮುಚಿ ಎಂಬ ರಾಕ್ಷಸನ ಮಂದಿರವೂ ಸುರದ್ವೇಷಿಯಾದ ಮಹಾನಾದನ ಆಲಯವೂ ಅತಿರಮ್ಯವಾಗಿವೆ.

೧೭. ಮತ್ತು ಇನ್ನೊಂದು ಕಡೆಯಲ್ಲಿ ಶಂಕುಕರ್ಣ, ಕಬಂಧಾಸುರರ ಗೃಹಗಳೂ ನಿಷ್ಕುಲಾದನ ಜನಭರಿತವಾದ ನಗರಿಯೂ ಬಹಳ ಮನೋಹರವಾಗಿದೆ.

೧೮. ಮತ್ತೊಂದು ಭಾಗದಲ್ಲಿ ಭೀಮ ಮತ್ತು ಶೂಲಿದಂತನೆಂಬ ರಾಕ್ಷಸರ ಹರ್ಮ್ಯಗಳೂ ಲೋಹಿತಾಕ್ಷ, ಕಲಿಂಗ, ಶ್ವಾಪದ, ಧನಂಜಯ, ಮಹಾತ್ಮನಾದ ಮಹೇಂದ್ರ, ಕಾಲಿಯನಾಗ, ಕಲಸ ಇವರ ನಗರಗಳೂ ಪ್ರತ್ಯೇಕಪ್ರತ್ಯೇಕವಾಗಿವೆ.

೧೯. ಹೀಗೆ ಮೊದಲನೆಯ ಕೃಷ್ಣಭೂಮಿಯಾದಅತಲಲೋಕದಲ್ಲಿ ನಾಗಗಳು, ದಾನವರು, ರಾಕ್ಷಸರು ಇವರ ಸಾವಿರಾರು ಸುಂದರವಾದ ನಗರಿಗಳು ಹೊಳೆಯುತ್ತಿವೆ.

ದ್ವಿತೀಯೇಽಪಿ ತಲೇ ವಿಪ್ರಾ ದೈತ್ಯೇಂದ್ರಸ್ಯ ಸುರಕ್ಷಸಃ ।
ಮಹಾಜಂಭಸ್ಯ ಚ ತಥಾ ನಗರಂ ಪ್ರಥಮಸ್ಯ ತು ॥ ೨೦ ॥

ಹಯಗ್ರೀವಸ್ಯ ಕೃಷ್ಣಸ್ಯ ನಿಕುಂಭಸ್ಯ ಚ ಮಂದಿರಂ ।
ಶಂಖಾಖ್ಯೇಯಸ್ಯ ಚ ಪುರಂ ನಗರಂ ಗೋಮುಖಸ್ಯ ಚ ॥ ೨೧ ॥

ರಾಕ್ಷಸಸ್ಯ ಚ ನೀಲಸ್ಯ ಮೇಘಸ್ಯ ಕ್ರಥನಸ್ಯ ಚ ।
ಪುರಂ ಚ ಕುರುಪಾದಸ್ಯ ಮಹೋಷ್ಣೀಷಸ್ಯ ಚಾಲಯಂ ॥ ೨೨ ॥

ಕಂಬಲಸ್ಯ ಚ ನಾಗಸ್ಯ ಪುರಮಶ್ವತರಸ್ಯ ಚ ।
ಕದ್ರುಪುತ್ರಸ್ಯ ಚ ಪುರಂ ತಕ್ಷಕಸ್ಯ ಮಹಾತ್ಮನಃ ॥ ೨೩ ॥

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಂ ।
ದ್ವಿತೀಯೇಽಸ್ಮಿನ್ ತಲೇ ವಿಪ್ರಾಃ ಪಾಂಡುಭೌಮೇ ನ ಸಂಶಯಃ ॥ ೨೪ ॥

---

೨೦. ಎಲೈ ವಿಪ್ರೋತ್ತಮರೇ, ಎರಡನೆಯ ಸುತಲಲೋಕದಲ್ಲಿ ದೈತ್ಯೇಂದ್ರನೂ ಮಹಾರಾಕ್ಷಸನೂ ಆದ ಮಹಾಜಂಭನ ಮತ್ತು ಸುರಕ್ಷಸನ ನಗರವು ಮೊದಲನೆಯದಾಗಿದೆ.

೨೧. ಎಲೈ ಮುನಿವರ್ಯರೇ, ಬಿಳಿಯ ಭೂಮಿಯಾದ ಎರಡನೆಯ ಸುತಲ ಲೋಕದಲ್ಲಿ ಹಯಗ್ರೀವ, ಕೃಷ್ಣ, ನಿಕುಂಭ, ಶಂಖ ಮತ್ತು ಗೋಮುಖ ಈ ಅಸುರರ ಮಹಾದಿವ್ಯನಗರಗಳು ಶೋಭಿಸುತ್ತವೆ.

೨೨-೨೪. ಮತ್ತು ನೀಲ, ಮೇಘ, ಕ್ರಥನ, ಕುರುಪಾದ, ಮಹೋಷ್ಣೀಷ, ಕಂಬಲ, ನಾಗ, ಅಶ್ವತರ, ಕದ್ರೂದೇವಿಯ ಪುತ್ರನೂ ಮಹಾತ್ಮನೂ ಆದ ತಕ್ಷಕ ಇವರೇ ಮೊದಲಾದ ನಾಗ, ದಾನವ, ರಾಕ್ಷಸ, ಇವರ ಸಹಸ್ರಾರು ಮಹಾ ದಿವ್ಯನಗರಗಳು ಕಂಗೊಳಿಸುತ್ತವೆ. ಈ ವಿಷಯದಲ್ಲಿ ನೀವು ಸಂದೇಹಪಡಬೇಕಾಗಿಲ್ಲ.

ತೃತೀಯೋ ತು ತಲೇ ಖ್ಯಾತಂ ಪ್ರಹ್ಲಾದಸ್ಯ ಮಹಾತ್ಮನಃ ।
ಅನುಹ್ಲಾದಸ್ಯ ಚ ಪುರಂ ದೈತ್ಯೇಂದ್ರಸ್ಯ ಮಹಾತ್ಮನಃ ॥ ೨೫ ॥

ತಾರಕಾಖ್ಯಸ್ಯ ಚ ಪುರಂ ಪುರಂ ತ್ರಿಶಿರಸಸ್ತಥಾ ।
ಶಿಶುಮಾರಸ್ಯ ಚ ಪುರಂ ಹೃಷ್ಟಪುಷ್ಟಜನಾಕುಲಂ ॥ ೨೬ ॥

ಚ್ಯವನಸ್ಯ ಚ ವಿಜ್ಞೇಯಂ ರಾಕ್ಷಸಸ್ಯ ಚ ಮಂದಿರಂ ।
ರಾಕ್ಷಸೇಂದ್ರಸ್ಯ ಚ ಪುರಂ ಕುಂಭಿಲಸ್ಯ ಖರಸ್ಯ ಚ ॥ ೨೭ ॥

ವಿರಾಧಸ್ಯ ಚ ಕ್ರೂರಸ್ಯ ಪುರಮುಲ್ಕಾಮುಖಸ್ಯ ಚ ।
ಹೇಮಕಸ್ಯ ಚ ನಾಗಸ್ಯ ತಥಾ ಪಾಂಡುರಕಸ್ಯ ಚ ॥ ೨೮ ॥

ಮಣಿಮಂತ್ರಸ್ಯ ಚ ಪುರಂ ಕಪಿಲಸ್ಯ ಚ ಮಂದಿರಂ ।
ನಂದಸ್ಯ ಚೋರಗಪತೇರ್ವಿಶಾಲಸ್ಯ ಚ ಮಂದಿರಂ ॥ ೨೯ ॥

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಂ ।
ತೃತೀಯೇಸ್ಮಿಂಸ್ತಲೇ ವಿಪ್ರಾಃ ಪೀತಭೌಮೇ ನ ಸಂಶಯಃ ॥ ೩೦ ॥

---

೨೫. ಮೂರನೆಯದಾದ ವಿತಲಲೋಕದಲ್ಲಿ ಮಹಾತ್ಮನಾದ ಪ್ರಹ್ಲಾದ ದೈತ್ಯೇಂದ್ರನೂ ಮಹಾತ್ಮನು ಆದ ಅನುಹ್ಲಾದ ಇವರ ದಿವ್ಯನಗರಗಳು ಪ್ರಖ್ಯಾತವಾಗಿವೆ.

೨೬-೨೯. ತಾರಕ, ತ್ರಿಶಿರಸ್ಸು, ಶಿಶುಮಾರ, ಚ್ಯವನ, ರಾಕ್ಷಸೇಂದ್ರನಾದ ನಿಕುಂಭಿಲ, ಖರ, ವಿರಾಧ, ಕ್ರೂರನಾದ ಉಲ್ಕಾಮುಖ, ಹೇಮಕ, ಪಾಂಡುರಕ, ಮಣಿಮಂತ್ರ, ಕಪಿಲ, ಉರಗಪತಿಯಾದ ನಂದ, ವಿಶಾಲ ಇವರೇ ಮೊದಲಾದ ನಾಗದಾನವರಾಕ್ಷಸರ ದಿವ್ಯಮಂದಿರಗಳೂ ಮಹಾನಗರಗಳೂ ಶೋಭಿಸುತ್ತಿರುತ್ತವೆ.

೩೦. ಮೂರನೆಯದು ಹಳದಿಯ ವರ್ಣವಿರುವ ವಿತಲದಲ್ಲಿ ಮೇಲೆ ನಿರೂಪಿಸಿದವರ ಸಾವಿರಾರು ಪುರಗಳಿವೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿಯಬೇಕು.

ಚತುರ್ಥೇ ದೈತ್ಯಸಿಂಹಸ್ಯ ಕಾಲನೇಮೇರ್ಮಹಾತ್ಮನಃ ।
ಗಜಕರ್ಣಸ್ಯ ಚ ಪುರಂ ನಗರಂ ಕುಂಜರಸ್ಯ ಚ ॥ ೩೧ ॥

ರಾಕ್ಷಸೇಂದ್ರಸ್ಯ ಚ ಪುರಂ ಸುಮಾಲೇರ್ಬಹುವಿಸ್ತರಂ ।
ಮುಂಜಸ್ಯ ಲೋಕನಾಥಸ್ಯ ವೃಕವಕ್ತ್ರಸ್ಯ ಚಾಲಯಂ ॥ ೩೨ ॥

ಬಹುಯೋಜನಸಾಹಸ್ರಂ ಬಹುಪಕ್ಷಿಸಮಾಕುಲಂ ।
ನಗರಂ ವೈನತೇಯಸ್ಯ ಚತುರ್ಥೇಸ್ಮಿನ್ ರಸಾತಲೇ ॥ ೩೩ ॥

ಪಂಚಮೇ ಶರ್ಕರಾಭೌಮೇ ಬಹುಯೋಜನವಿಸ್ತೃತೇ ।
ವಿರೋಚನಸ್ಯ ನಗರಂ ದೈತ್ಯಸಿಂಹಸ್ಯ ಧೀಮತಃ ॥ ೩೪ ॥

ವೈದೂರ್ಯಸ್ಯಾಗ್ನಿಜಿಹ್ವಸ್ಯ ಹಿರಣ್ಯಾಕ್ಷಸ್ಯ ಚಾಲಯಂ ।
ಪುರಂ ಚ ವಿದ್ಯುಜಿಹ್ವಸ್ಯ ರಾಕ್ಷಸಸ್ಯ ಚ ಧೀಮತಃ ॥ ೩೫ ॥

ಮಹಾಮೇಘಸ್ಯ ಚ ಪುರಂ ರಾಕ್ಷಸೇಂದ್ರಸ್ಯ ಶಾಲಿನಃ ।
ಕರ್ಮಾರಸ್ಯ ಚ ನಾಗಸ್ಯ ಸ್ವಸ್ತಿಕಸ್ಯ ಜಯಸ್ಯ ಚ ॥ ೩೬ ॥

---

೩೧-೩೩. ನಾಲ್ಕನೆಯ ಗಭಸ್ತಲದಲ್ಲಿ ದೈತ್ಯೋತ್ತಮನೂ, ಮಹಾತ್ಮನೂ ಆದ ಕಾಲನೇಮಿಯ ದಿವ್ಯನಗರವೂ, ಗಜಕರ್ಣ, ಕುಂಜರರ ಸುಂದರಪುರವರಗಳೂ ರಾಕ್ಷಸೇಂದ್ರನಾದ ಸುಮಾಲಿಯ ಬಹು ವಿಸ್ತಾರವಾದ ಪುರವೂ, ಲೋಕನಾಥನಾದ ಮುಂಜನ ಮಂದಿರವೂ, ವೃಕವಕ್ತ್ರನ ಪ್ರಾಸಾದವೂ ಪಕ್ಷಿರಾಜನಾದ ಗರುಡದೇವನ ದಿವ್ಯವೂ ಅನೇಕ ಯೋಜನ ವಿಸ್ತೀರ್ಣವೂ ಪಕ್ಷಿಸಮಾಕುಲವೂ ಆದ ದಿವ್ಯನಗರವೂ ಕೂಡ ಹೊಳೆಯುತ್ತವೆ. ಸಂದೇಹವಿಲ್ಲ.

೩೪-೩೭. ಐದನೆಯದಾದ ಶರ್ಕರಾಮಯವಾದ ಮಹಾತಲವಲ್ಲಿ ಜ್ಞಾನಿಯೂ ದೈತ್ಯಸಿಂಹನೂ ಆದ ವಿರೋಚನನ ವಿಸ್ತಾರವಾದ ದಿವ್ಯನಗರವು ಇರುವುದು. ಮತ್ತು ವೈಡೂರ್ಯ, ಅಗ್ನಿಜಿಹ್ವ, ಹಿರಣ್ಯಾಕ್ಷ, ಇವರ ಅರಮನೆಗಳೂ, ಬುದ್ಧಿವಂತನೂ, ರಾಕ್ಷಸಶ್ರೇಷ್ಠನೂ ಆದ ವಿದ್ಯುಜಿಹ್ವನ ಪಟ್ಟಣವೂ ಶೂಲಧಾರಿಯೂ ರಾಕ್ಷಸವರ್ಯನೂ ಆದ ಮಹಾಮೇಘನ ಪುರಿಯೂ, ಕರ್ಮಾರ, ನಾಗ, ಸ್ವಸ್ತಿಕ,

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಂ ।
ಪಂಚಮೇಽಪಿ ತಥಾ ಜ್ಞೇಯಂ ಶರ್ಕರಾನಿಲಯೇ ಸದಾ ॥ ೩೭ ॥

ಷಷ್ಠೇ ತಲೇ ದೈತ್ಯಪತೇಃ ಕೇಸರೇರ್ನಗರೋತ್ತಮಂ ।
ಸುಪರ್ವಣಃ ಸುಲೋಮ್ನಶ್ಚ ನಗರಂ ಮಹಿಷಸ್ಯ ಚ ॥
ರಾಕ್ಷಸೇಂದ್ರಸ್ಯ ಚ ಪುರಮುತ್ಕ್ರೋಶಸ್ಯ ಮಹಾತ್ಮನಃ ॥ ೩೮ ॥

ತತ್ರಾಸ್ತೇ ಸುರಸಾಪುತ್ರಃ ಶತಶೀರ್ಷೋ ಮುದಾ ಯುತಃ ।
ಕಶ್ಯಪಸ್ಯ ಸುತಃ ಶ್ರೀಮಾನ್ ವಾಸುಕಿರ್ನಾಮ ನಾಗರಾಟ್ ॥ ೩೯ ॥

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಂ ।
ಷಷ್ಠೇ ತಲೇಽಸ್ಮಿನ್ ವಿಖ್ಯಾತೇ ಶಿಲಾಭೌಮೇ ರಸಾತಲೇ ॥ ೪೦ ॥

---

ಜಯ ಇವರೇ ಮೊದಲಾದ ನಾಗದಾನವರಾಕ್ಷಸರ ದಿವ್ಯನಗರಗಳೂ ಐದನೆಯ ಲೋಕವಲ್ಲಿ ಪ್ರಕಾಶಿಸುವುವು.

೩೮. ಶಿಲಾಮಯವೂ ಆರನೆಯದೂ ಆದ ಶ್ರೀತಲದಲ್ಲಿ ದೈತ್ಯೇಂದ್ರನಾದ ಕೇಸರಿಯ ಮಹಾನಗರವೂ ಸುಪರ್ವಾಣ, ಸುಲೋಮಾನ, ಮಹಿಷ, ರಾಕ್ಷಸೋತ್ತಮನೂ ಮಹಾತ್ಮನೂ ಆದ ಉತ್ಕ್ರೋಶ ಇವರ ನಗರಿಗಳೂ ಕೂಡ ಇರುತ್ತವೆ.

೩೯. ಆ ಲೋಕದಲ್ಲಿ ಸುರಸಾದೇವಿಯ ಪುತ್ರನೂ ಸಾವಿರಹೆಡೆಯುಳ್ಳವನೂ ಸಂತೋಷಯುತನೂ ಕಶ್ಯಪನ ಪುತ್ರನೂ ಕಾಂತಿವಂತನೂ ನಾಗರಾಜನೂ ಆದ ವಾಸುಕಿಯು ವಾಸಮಾಡುವನು. ಮತ್ತು ಅವನ ಅರಮನೆಯಿರುವುದು.

೪೦. ಹೀಗೆ ನಾಗಗಳು, ದಾನವರು, ರಾಕ್ಷಸರು ಇವರ ನಾನಾವಿಧಗಳಾದ ದಿವ್ಯನಗರಗಳು ಆರನೆಯದೂ ಶಿಲಾಮಯವೂ ಆದ ಶ್ರೀತಲದಲ್ಲಿ ಅತಿಸುಂದರವಾಗಿ ಹೊಳೆಯುತ್ತಿವೆ

ಸಪ್ತಮೇ ತು ತಲೇ ಜ್ಞೇಯಾ ಪಾತಾಲೇ ಸರ್ವಸತ್ತಿನೇ ।
ಪುರಂ ಬಲೇಃ ಪ್ರಮುದಿತಂ ನರನಾರೀಸಮಾಕುಲಂ ॥ ೪೧ ॥

ಅಸುರಾಶೀವಿಷೈಃ ಪೂರ್ಣಮುದ್ಧೃತೈರ್ದೇವಶತ್ರುಭಿಃ ।
ಮುಚುಕುಂದಸ್ಯ ದೈತ್ಯಸ್ಯ ತತ್ರ ವೈ ನಗರಂ ಮಹತ್ ॥ ೪೨ ॥

ಅನೇಕೈರ್ದಿತಿಪುತ್ರಾಣಾಂ ಸಮುದೀರ್ಣೈರ್ಮಹಾಪುರೈಃ ।
ತಥೈವ ನಾಗನಗರೈರ್ಋದ್ಧಿಮದ್ಭಿಃ ಸಹಸ್ರಶಃ ॥ ೪೩ ॥

ದೈತ್ಯಾನಾಂ ದಾನವಾನಾಂ ಚ ಸಮುದೀರ್ಣೈರ್ಮಹಾಪುರೈಃ ।
ಉದೀರ್ಣೇ ರಾಕ್ಷಸಾವಾಸೈರನೇಕೈಶ್ಚ ಸಮಾಕುಲಂ ॥ ೪೪ ॥

ಪಾತಾಲಾಂತೇ ಚ ವಿಪ್ರೇಂದ್ರಾ ವಿಸ್ತೀರ್ಣೇ ಬಹುಯೋಜನೇ ।
ಆಸ್ತೇ ರಕ್ತಾರವಿಂದಾಕ್ಷೋ ಮಹಾತ್ಮಾ ಹ್ಯಜರಾಮರಃ ॥ ೪೫ ॥

---

೪೧. ಎಲ್ಲಕ್ಕಿಂತಲೂ ಕೊನೆಯದೂ ಏಳನೆಯದೂ ಆದ ಪಾತಾಲಲೋಕದಲ್ಲಿ ಬಲಿಚಕ್ರವರ್ತಿಯ ಸ್ತ್ರೀಪುರುಷರಿಂದ ಸಹಿತವೂ ಸಂತೋಷಜನಕವೂ ಆದ ನಗರವು ಅತಿ ಮನೋಹರವಾಗಿರುವುದು.

೪೨. ಮತ್ತು ದೇವಶತ್ರುಗಳಿಂದಲೂ ದೈತ್ಯರೂ, ಸರ್ಪಗಳೂ ಇವರಿಂದ ಪೂರ್ಣವೂ ಮಹತ್ತೂ ಆದ ಮುಚುಕುಂದನೆಂಬ ದೈತ್ಯವರ್ಯನ ದಿವ್ಯನಗರವೂ ಸಹ ಅಲ್ಲಿ ಇರುವುದು.

೪೩. ಮತ್ತು ದಿತೀದೇವಿಯ ಪುತ್ರರೂ ಅಸಂಖ್ಯಾತರೂ ಉದೀರ್ಣರೂ ಆದ ದೈತ್ಯರ ವಿಶಾಲವೂ ಪೂರ್ಣವೂ ಆದ ಸಾವಿರಾರು ನಗರಗಳು ಸುಂದರಗಳಾಗಿರುವುವು.

೪೪. ಹೀಗೆ ದೈತ್ಯದಾನವರಿಂದ ಪೂರ್ಣವೂ ಐಶ್ವರ್ಯಯುತವೂ ಅನೇಕ ಗೃಹಗಳಿಂದ ಮಂಡಿತವೂ ಆದ ಅನೇಕ ನಗರಗಳು ಶೋಭಿಸುತ್ತಿವೆ.

೪೫. ಎಲೈ ವಿಪ್ರೋತ್ತಮರೇ, ಪಾತಾಲಲೋಕದ ಆಚೆ ವಿಸ್ತೀರ್ಣವೂ ಬಹುಯೋಜನ ವಿಶಾಲವೂ ಆದ ನಗರದಲ್ಲಿ ಕೆಂಪುಕಮಲದಂತೆ ನೇತ್ರವುಳ್ಳವನೂ, ಮಹಾತ್ಮನೂ ಜರಾಮರಣರಹಿತನೂ ಆದ ಅದಿಶೇಷನು ಇರುವನು.

ಧೌತಶಂಖೋದರವಪುರ್ನೀಲವಾಸಾ ಮಹಾಭುಜಃ ।
ವಿಶಾಲಭೋಗೋ ದ್ಯುತಿಮಾಂಶ್ಚಿತ್ರಮಾಲಾಧರೋ ಬಲೀ ॥ ೪೬ ॥

ರುಕ್ಮಶೃಂಗಾವದಾತೇನ ದೀಪ್ತಸ್ಯೇವ ವಿರಾಜತಾ ।
ಪ್ರಭುರ್ಮುಖಸಹಸ್ರೇಣ ಶೋಭತೇ ವೈ ಸಕುಂಡಲೀ ॥ ೪೭ ॥

ಸ ಜಿಹ್ವಾಮಾಲಯಾ ದೇವೋ ಲೋಲಜ್ವಾಲಾನಲಾರ್ಚಿಷಾ ।
ಜ್ವಾಲಾಮಾಲಾಪರಿಕ್ಷಿಪ್ತಃ ಕೈಲಾಸ ಇವ ಲಕ್ಷ್ಯತೇ ॥ ೪೮ ॥

ಸ ತು ನೇತ್ರಸಹಸ್ರೇಣ ದ್ವಿಗುಣೇನ ವಿರಾಜತಾ ।
ಬಾಲಸೂರ್ಯಾಭಿತಾಮ್ರೇಣ ಶೋಭತೇ ಸ್ನಿಗ್ಧಮಂಡಲಃ ॥ ೪೯ ॥

ತಸ್ಯ ಕುಂದೇಂದುವರ್ಣಸ್ಯ ಅಕ್ಷಮಾಲಾ ವಿರಾಜತೇ ।
ತರುಣಾದಿತ್ಯಮಾಲೇವ ಶ್ವೇತಪರ್ವತಮೂರ್ಧನಿ ॥ ೫೦ ॥

---

೪೬-೪೮. ಆ ಆದಿಶೇಷನು ಶುಭ್ರವಾದ ಶಂಖದಂತೆ ಕಾಂತಿಯುಳ್ಳವನೂ, ನೀಲವಾಸನೂ, ದೀರ್ಘಬಾಹುವೂ, ವಿಶಾಲವಾದ ಶರೀರಿಯೂ, ಕಾಂತಿಯುತನೂ, ಚಿತ್ರಮಾಲಿಧಾರಿಯೂ, ಬಲಿಷ್ಠನೂ, ಸುವರ್ಣಶಿಖರಗಳಂತೆ ಪ್ರಕಾಶಿಸುವ ಸಹಸ್ರ ಫಣಾಮಂಡಿತನೂ, ಪ್ರಭುವೂ, ಕುಂಡಲಧಾರಿಯೂ, ಆಗಿರುವನು. ಅಂತಹ ಆದಿ ಶೇಷನು ಚಂಚಲವಾದ ಅಗ್ನಿಯ ಕಾಂತಿಯಿಂದ ಹೊಳೆಯುವ ಜಿಹ್ವಾಸಮೂಹದಿಂದ ಜ್ವಾಲಾಮಾಲಿಗಳಿಂದಲಂಕೃತವಾದ ಕೈಲಾಸಗಿರಿಯಂತೆ ಪ್ರಕಾಶಿಸುವನು.

೪೯-೫೦. ಅವನು ಅಧಿಕವಾಗಿ ಪ್ರಕಾಶಿಸುವ ಸಾವಿರ ನೇತ್ರಗಳಿಂದ ಮನೋಹರಮಂಡಲವುಳ್ಳ ಕೆಂಪಗಿರುವ ಬಾಲಸೂರ್ಯನಂತೆ ಮನೋಹರವಾಗಿ ಪ್ರಜ್ವಲಿಸುತ್ತಿರುವನು. ಜಾಜೀಪುಷ್ಪ ಮತ್ತು ಚಂದ್ರ ಇವುಗಳಂತೆ ಕಾಂತಿಯುಳ್ಳ ಆದಿಶೇಷನ ಜಪಮಾಲೆಯು ಬಿಳಿಯಪರ್ವತಶಿಖರದಲ್ಲಿ ಹೊಳೆಯುವ ತರುಣಸೂರ್ಯ ಮಂಡಲದಂತೆ ಶೋಭಿಸುತ್ತದೆ.

ಜಟಾಕರಾಲೋ ದ್ಯುತಿರ್ಮಾ ಲಕ್ಷ್ಯತೇ ಶಯನಾಸನೇ |
ವಿಸ್ತೀರ್ಣ ಇವ ಮೇದಿನ್ಯಾಂ ಸಹಸ್ರಶಿಖರೋ ಗಿರಿಃ || ೫೧ ||

ಮಹಾಭೋಗೈರ್ಮಹಾಭಾಗೈರ್ಮಹಾನಾಗೈರ್ಮಹಾಬಲೈಃ |
ಉಪಾಸ್ಯತೇ ಮಹಾತೇಜಾ ಮಹಾನಾಗಪತಿಃ ಸ್ವಯಂ || ೫೨ ||

ಸ ರಾಜಾ ಸರ್ವನಾಗಾನಾಂ ಶೇಷೋ ನಾಮ ಮಹಾದ್ಯುತಿಃ |
ಸಾ ವೈಷ್ಣವೀ ಹ್ಯಹಿತನುರ್ಮರ್ಯಾದಾಯಾಂ ವ್ಯವಸ್ಥಿತಾ || ೫೩ ||

ಸಪ್ತೈವಮೇತೇ ಕಥಿತಾ ವ್ಯವಹಾರ್ಯಾ ರಸಾತಲಾಃ |
ದೇವಾಸುರಮಹಾನಾಗರಾಕ್ಷಸಾಧ್ಯುಷಿತಾಃ ಸದಾ || ೫೪ ||

---

೫೧. ಜಟಾಮಂಡಲಗಳಿಂದ ಭಯಂಕರನೂ, ಕಾಂತಿಯುಕ್ತನೂ ಆದ ಆದಿ ಶೇಷನ ಶಯನಾಸನಗಳು ಭೂಮಂಡಲವಲ್ಲಿ ಅತಿ ವಿಶಾಲವೂ ಸಹಸ್ರ ಶಿಖರಗಳಿಂದ ಮಂಡಿತವೂ ಆದ ಪರ್ವತದಂತೆ ಪ್ರಕಾಶಿಸುವನು.

೫೨. ನಾಗಾಧಿಪತಿಯಾದ ಶೇಷನು ಮಹಾಶರೀರಿಗಳೂ, ಮಹಾನುಭಾವರೂ ಮಹಾಬಲಿಷ್ಠರೂ, ಮಹಾತೇಜಸ್ವಿಗಳೂ, ಆದ ಮಹಾನಾಗಗಳಿಂದ ಸರ್ವದಾ ಸೇವಿಸಲ್ಪಡುತ್ತಾನೆ.

೫೩. ಮಹಾತೇಜಸ್ವಿಯಾದ ಆದಿಶೇಷನು ಸಮಸ್ತನಾಗಾಧಿಪತಿಯೂ, ಮಹಾವಿಷ್ಣುವಿನ ಶಯನವೂ, ಸರ್ಪಾಕಾರಿಯೂ ಅಗಿ ಮರ್ಯಾದೆಯಲ್ಲಿ ವ್ಯವಸ್ಥಿತವಾಗಿರುವನು. ಅವನ ದೇಹವು ಮರ್ಯಾದೆಯನ್ನು ಮೀರದೇ ಸುವ್ಯವ ಸ್ಥಿತವಾಗಿದೆ.

೫೪. ವ್ಯವಹಾರಕ್ಕೆ ವಿಷಯವಾದ ರಸಾತಳಗಳು ಮೇಲೆ ಹೇಳಿದ ಏಳು ಲೋಕಗಳಾಗಿವೆ. ಅವುಗಳಲ್ಲಿ ಸರ್ವಕಾಲದಲ್ಲಿಯೂ ದೇವತೆಗಳು ಅಸುರರು ಮಹಾ ನಾಗಗಳು ರಾಕ್ಷಸರು ಇವರು ವಾಸಮಾಡುತ್ತಾರೆ.

ಅತಃ ಪರಮನಾಲೋಕ್ಯಮಗಮ್ಯಂ ಸಿದ್ಧಸಾಧುಭಿಃ ।
ದೇವಾನಾಮಪ್ಯವಿದಿತಂ ವ್ಯವಹಾರವಿವರ್ಜಿತಂ ॥ ೫೫ ॥

ಪೃಥಿವ್ಯಗ್ನ್ಯಂಬುವಾಯೂನಾಂ ನಭಸಶ್ಚ ದ್ವಿಜೋತ್ತಮಾಃ ।
ಮಹತ್ವಮೇವಮೃಷಿಭಿರ್ವರ್ಣ್ಯತೇ ನಾತ್ರ ಸಂಶಯಃ ॥ ೫೬ ॥

ಅಥ ಊರ್ಧ್ವಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಗತಿಂ ।
ಸೂರ್ಯಾಚಂದ್ರಮಸಾವೇತೌ ಭ್ರಮಂತೌ ಯಾವದೇವ ತು ॥
ಪ್ರಕಾಶತಃ ಸ್ವಭಾಭಿಸ್ತೌ ಮಂಡಲಾಭ್ಯಾಂ ಸಮಾಸ್ಥಿತೌ ॥ ೫೭ ॥

ಸಪ್ತಾನಾಂ ಚ ಸಮುದ್ರಾಣಾಂ ದ್ವೀಪಾನಾಂ ತು ಸ ವಿಸ್ತರಃ ।
ವಿಸ್ತರಾರ್ಧಂ ಪೃಥಿವ್ಯಾಸ್ತು ಭವೇದನ್ಯತ್ರ ಬಾಹ್ಯತಃ ॥ ೫೮ ॥

---

೫೫. ಆ ಪಾತಾಲಲೋಕಕ್ಕಿಂತಲೂ ಆಚೆಯಿರುವ ದೇಶವು ದರ್ಶನಾನರ್ಹವೂ, ಸಿದ್ಧಸಾಧುಗಳಿಗೂ ಅಗಮ್ಯವೂ, ದೇವತೆಗಳಿಗೆ ಅವಿದಿತವೂ, ವ್ಯವಹಾರರಹಿತವೂ ಆಗಿರುವುದು.

೫೬. ಎಲೈ ವಿಪ್ರವರ್ಯರೇ, ಮಹರ್ಷಿಗಳು ಭೂಮಿ, ಅಗ್ನಿ, ಜಲ, ವಾಯು ಆಕಾಶ, ಇವುಗಳ ಮಹತ್ವವನ್ನು ಈ ರೀತಿಯಲ್ಲಿ ವರ್ಣಿಸಿರುತ್ತಾರೆ. ಇದರ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೫೭. ಈಗ ಸೂರ್ಯಚಂದ್ರರ ಗತಿಯನ್ನು ನಿರೂಪಿಸುವೆನು. ಈ ಸೂರ್ಯಚಂದ್ರರಿಬ್ಬರೂ ತಮ್ಮ ಕಾಂತಿಯಿಂದ ಯುಕ್ತರೂ, ಸ್ವಮಂಡಲಗಳಲ್ಲಿ ವ್ಯವಸ್ಥಿತರೂ ಅಗಿ ಎಲ್ಲಿಯವರೆಗೂ ಸಂಚರಿಸುತ್ತಾ ಪ್ರಕಾಶಿಸುವರೋ ಆ ವಿಷಯಗಳನ್ನು ತಿಳಿಸುವೆನು ಕೇಳಿರೆಂದನು.

೫೮. ಸಪ್ತಸಮುದ್ರಗಳು ಸಪ್ತದ್ವೀಪಗಳು ಇವುಗಳ ವಿಸ್ತಾರವು ಯಾವುದಿವೆಯೋ ಅದು ಪೃಥಿವಿಯ ಅರ್ಧಭಾಗದ ವಿಸ್ತಾರವಾಗಿದೆ. ಮತ್ತೊಂದು ಭಾಗದ ವಿಸ್ತಾರವು ಭೂಮಿಯ ಹೊರಭಾಗದಲ್ಲಿದೆ.

**ಪರ್ಯಾಸಪಾರಿಮಾಣ್ಯಂ ತು ಚಂದ್ರಾದಿತ್ಯೌ ಪ್ರಕಾಶತಃ ।**
**ಪರ್ಯಾಸಪರಿಮಾಣ್ಯೇನ ಭೂಮೇಸ್ತುಲ್ಯಂ ದಿವಂ ಸ್ಮೃತಂ ॥ ೫೯ ॥**

**ಅವತಿ ತ್ರೀನಿಮಾ೯ ಲೋಕಾ೯ ಯಸ್ಮಾತ್ ಸೂರ್ಯಃ ಪರಿಭ್ರಮನ್ ।**
**ಅವಧಾತುಃ ಪ್ರಕಾಶಾಖ್ಯೋಹ್ಯವನತ್ಸ ರವಿಃ ಸ್ಮೃತಃ ॥ ೬೦ ॥**

**ಅತಃ ಪರಂ ಪ್ರವಕ್ಷ್ಯಾಮಿ ಪ್ರಮಾಣಂ ಚಂದ್ರಸೂರ್ಯಯೋಃ ।**
**ಮಹಿತತ್ವಾನ್ಮಹೀಶಬ್ದೋ ಹ್ಯಸ್ಮಿ೯ ವರ್ಷೇ ನಿಪಾತ್ಯತೇ ॥ ೬೧ ॥**

**ಅಸ್ಯ ಭಾರತವರ್ಷಸ್ಯ ವಿಷ್ಕಂಭಂ ತು ಸುವಿಸ್ತರಂ ।**
**ಮಂಡಲಂ ಭಾಸ್ಕರಸ್ಯಾಥ ಯೋಜನಾನಾಂ ನಿಬೋಧತ ॥ ೬೨ ॥**

---

೫೯. ಸೂರ್ಯಚಂದ್ರರಿಬ್ಬರೂ ತಮ್ಮ ತಮ್ಮ ಪ್ರಮಾಣಾನುಸಾರವಾಗಿ ಮಂಡಲಾಕಾರವಾಗಿ ಅಂದರೆ ಸುತ್ತಲೂ ಪ್ರಕಾಶಿಸುವರು. ಈ ಮಂಡಲದ ಸುತ್ತಳ ತೆಯ ವಿಷಯದಲ್ಲಿ ಅಂತರಿಕ್ಷವು ಭೂಮಿಗೆ ಸಮವಾಗಿರುತ್ತದೆ.

೬೦. ಸೂರ್ಯನು ಸಂಚರಿಸುತ್ತಾ ಮೂರು ಲೋಕಗಳನ್ನೂ ಪ್ರಕಾಶದ ಮೂಲಕ ರಕ್ಷಿಸುವನು. ಅವಧಾತುವಿಗೆ ಪ್ರಕಾಶರಕ್ಷಣೆಗಳೆಂಬ ಎರಡು ಅರ್ಥವೂ ಇರುವುದು. ಸೂರ್ಯನು ಮೂರು ಲೋಕಗಳನ್ನೂ ಪ್ರಕಾಶಗೊಳಿಸಿ ರಕ್ಷಿಸುವುದ ರಿಂದ ರವಿಯೆಂಬ ನಾಮವನ್ನು ಹೊಂದಿರುವನು.

೬೧. ಇದಾದ ತರುವಾಯ ಸೂರ್ಯಚಂದ್ರರ ಪ್ರಮಾಣವನ್ನು ತಿಳಿಸುವೆನು. ಮಹಿತಶಬ್ದವು ಪೂಜ್ಯವಾಚಕವಾಗಿದೆ. ಈ ಮಹಿತಶಬ್ದದಿಂದ ಮಹೀ ಎಂಬ ಶಬ್ದವು ಉಂಟಾಗಿದೆ. ಮಹೀ ಎಂದರೆ ಪೂಜ್ಯವಾದದ್ದು ಎಂಬ ಅರ್ಥವು ಸಿದ್ಧವಾಗಿದೆ ಇದನ್ನು ಈ ವರ್ಷದಲ್ಲಿ ಉಪಯೋಗಿಸಿರುತ್ತಾರೆ.

೬೨. ಈ ಭಾರತವರ್ಷದ ಸುತ್ತಳತೆಯ ವಿಸ್ತಾರವನ್ನೂ ಸೂರ್ಯಮಂಡಲದ ಯೋಜನಗಳ ವಿಸ್ತಾರವನ್ನೂ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

**ನವಯೋಜನಸಾಹಸ್ರೋ ವಿಸ್ತಾರೋ ಭಾಸ್ಕರಸ್ಯ ತು ।**
**ವಿಸ್ತಾರಾಂತ್ರಿಗುಣಶ್ಚಾಸ್ಯ ಪರಿಣಾಹೋಽಥ ಮಂಡಲಂ ॥**
**ವಿಷ್ಕಂಭೋ ಮಂಡಲಸ್ಯೈವ ಭಾಸ್ಕರಾದ್ವಿಗುಣಾಃ ಶಶೀ ॥ ೬೩ ॥**

**ಅತಃ ಪೃಥಿವ್ಯಾಂ ವಕ್ಷ್ಯಾಮಿ ಪ್ರಮಾಣಂ ಯೋಜನೈಃ ಸಹ ।**
**ಸಪ್ತದ್ವೀಪಸಮುದ್ರಾಯಾ ವಿಸ್ತಾರೋ ಮಂಡಲಂ ಚ ಯತ್ ॥ ೬೪ ॥**

**ಇತ್ಯೇತದಿಹ ಸಂಖ್ಯಾತಂ ಪುರಾಣಂ ಪರಿಮಾಣತಃ ।**
**ತದ್ವಕ್ಷ್ಯಾಮಿ ಪ್ರಸಂಖ್ಯಾಯ ಸಾಂಪ್ರತೈರಭಿಮಾನಿಭಿಃ ॥ ೬೫ ॥**

**ಅಭಿಮಾನಿವ್ಯತೀತಾ ಯೇ ತುಲ್ಯಾಸ್ತೇ ಸಾಂ ಪ್ರತೈರಿಹ ।**
**ದೇವಾ ಯೇ ವೈ ಹ್ಯತೀತಾಸ್ತೇ ರೂಪೈರ್ನಾಮಭಿರೇವ ಚ ॥ ೬೬ ॥**

---

೬೩. ಸೂರ್ಯನು ಒಂಭತ್ತು ಸಾವಿರಯೋಜನಗಳಷ್ಟು ವಿಸ್ತಾರವಾಗಿರುವನು. ಸೂರ್ಯನ ಸುತ್ತಳತೆಗಿಂತಲೂ ಮಂಡಳದ ಸುತ್ತಳತೆಯು ಮೂರರಷ್ಟು ಹೆಚ್ಚಾಗಿದೆ. ಅದರಂತೆ ಚಂದ್ರನ ವಿಸ್ತಾರಕ್ಕಿಂತಲೂ ಅವನ ಮಂಡಲದ ವಿಸ್ತಾರವು ದ್ವಿಗುಣಾಧಿಕವಾಗಿದೆ. ಸೂರ್ಯನಿಗಿಂತಲೂ ಚಂದ್ರನು ದ್ವಿಗುಣಾಧಿಕವಿಸ್ತಾರವಾಗಿರುವನು.

೬೪. ಆದುದರಿಂದ ಭೂಮಿಯ ವಿಸ್ತಾರವನ್ನು ಯೋಜನ ಸಂಖ್ಯೆಯಿಂದ ತಿಳಿಸುವೆನು ಕೇಳಿರಿ. ಸಪ್ತದ್ವೀಪಗಳು ಸಪ್ತಸಮುದ್ರಗಳು ಇವುಗಳಿಂದ ಕೂಡಿರುವ ಭೂಮಂಡಲದ ವಿಸ್ತಾರವನ್ನು ತಿಳಿಸುವೆನು.

೬೫. ಭೂಮಿಯ ಪರಿಮಾಣವೇ ಮೊದಲಾದ ವಿಷಯಗಳು ಪುರಾಣಗಳಲ್ಲಿ ಕ್ರಮವಾಗಿಯೂ ಅನ್ಯೂನಾನತಿರಿಕ್ತವಾಗಿಯೂ ನಿರೂಪಿತವಾಗಿವೆ. ಈ ವಿಷಯಗಳನ್ನು ಈಗಿನ ಅಭಿಮಾನಿಗಳೊಡನೆ ಪರಿಗಣಿಸಿ ಹೇಳುವೆನು ಎಂದನು.

೬೬. ಪೃಥಿವ್ಯಾದ್ಯಭಿಮಾನಿದೇವತೆಗಳು ಹಿಂದಿನ ಕಲ್ಪದಲ್ಲಿ ಯಾವ ನಾಮರೂಪಗಳಿಂದ ಪ್ರಖ್ಯಾತರಾಗಿದ್ದರೋ ಆ ದೇವತೆಗಳೇ ಅದೇ ನಾಮರೂಪಗಳಿಂದಲೇ ಈ ಕಲ್ಪದಲ್ಲಿಯೂ ಅಭಿಮಾನಿಗಳಾಗಿರುವರು.

ತಸ್ಮಾತ್ತು ಸಾಂಪ್ರತೈರ್ದೇವೈರ್ವಕ್ಷ್ಯಾಮಿ ವಸುಧಾತಲಂ |
ದಿವಸ್ತು ಸನ್ನಿವೇಶೋ ವೈ ಸಾಂಪ್ರತೈರೇವ ಕೃತ್ಸ್ನಶಃ || ೬೭ ||

ಶತಾರ್ಧಕೋಟಿವಿಸ್ತಾರಾ ಪೃಥಿವೀ ಕೃತ್ಸ್ನತಃ ಸ್ಮೃತಾ |
ತಸ್ಯಾ ವಾಧಪ್ರಮಾಣೇನ ಮೇರೋರ್ವೈ ಚಾತುರಂತರಂ || ೬೮ ||

ಪೃಥಿವ್ಯಾ ವಾಧವಿಸ್ತಾರೋ ಯೋಜನಾಗ್ರಾತ್ಪ್ರಕೀರ್ತಿತಃ |
ಮೇರುಮಧ್ಯಾತ್ ಪ್ರತಿದಿಶಂ ಕೋಟಿರೇಕಾದಶ ಸ್ಮೃತಾಃ || ೬೯ ||

ತಥಾ ಶತಸಹಸ್ರಾಣಿ ಏಕೋನನವತಿಃ ಪುನಃ |
ಪಂಚಾಶಚ್ಚ ಸಹಸ್ರಾಣಿ ಪೃಥಿವ್ಯಾಂ ವಾಧವಿಸ್ತರಃ || ೭೦ ||

---

೬೭. ಆದುವರಿಂದ ಈಗಿರುವ ದೇವತೆಗಳ ಸಹಿತವಾಗಿ ಈಗಿನ ಭೂಮಂಡಲವನ್ನು ತಿಳಿಸುವೆನು. ಸ್ವರ್ಗದ ಸನ್ನಿವೇಶವೂ ಕೂಡ ಈಗ ಇರುವಂತೆಯೇ ಹಿಂದಿನ ಕಲ್ಪಗಳಲ್ಲಿಯೂ ಇತ್ತು. ಮುಂದೆಯೂ ಹೀಗೆಯೇ ಇರುವುದು.

೬೮. ಪೃಥಿವಿಯು ಸಂಪೂರ್ಣವಾಗಿ ಐವತ್ತುಕೋಟಿಯೋಜನ ವಿಸ್ತಾರವಾಗಿರುತ್ತದೆ. ಭೂಮಿಯು ಸುತ್ತಳತೆಯು ಮೇರುವಿನ ನಾಲ್ಕು ದಿಕ್ಕುಗಳಲ್ಲಿಯೂ ಒಂದೇ ಸಮನಾಗಿರುತದೆ.

೬೯. ಭೂಮಿಯು ಸಂಪೂರ್ಣ ವಿಸ್ತಾರವನ್ನು ಯೋಜನಗಳ ಅಳತೆಯಿಂದ ತಿಳಿಯಬೇಕು. ಮಧ್ಯದಲ್ಲಿರುವ ಮೇರುವಿನಿಂದ ಪ್ರತಿಯೊಂದು ದಿಕ್ಕೂ ಹನ್ನೊಂದು ಕೋಟಿ ಯೋಜನಗಳಷ್ಟು ವಿಶಾಲವಾಗಿರುವುದು. ಮಹಾಮೇರುವಿನ ಪ್ರತಿಯೊಂದು ದಿಕ್ಕುಗಳಲ್ಲಿಯೂ ಹನ್ನೊಂದುಕೋಟಿಯೋಜನ ವಿಸ್ತಾರವಾದ ಭೂಮಿಯು ಇರುತ್ತದೆಯೆಂದು ತಿಳಿಯಬೇಕು.

೭೦. ಅದರಂತೆ ಮೇರುವಿನಿಂದ ಪ್ರತಿಭಾಗದಲ್ಲಿಯೂ ಪೃಥಿವಿಯ ಸಂಪೂರ್ಣ ವಿಸ್ತಾರವು ಹನ್ನೊಂದುಕೋಟಿಯ ಎಂಭತ್ತೊಂಭತ್ತುಲಕ್ಷದ ಐವತ್ತುಸಾವಿರದ ಯೋಜನಗಳಷ್ಟು ಇದೆ.

ಪೃಥಿವ್ಯಾ ವಿಸ್ತರಂ ಕೃತ್ಸ್ನಂ ಯೋಜನೈಸ್ತನ್ನಿಬೋಧತ।
ತಿಸ್ರಃ ಕೋಟ್ಯಸ್ತು ವಿಸ್ತಾರಃ ಸಂಖ್ಯಾತಃ ಸ ಚತುರ್ದಿಶಂ ॥ ೭೦ ॥

ತಥಾ ಶತಸಹಸ್ರಾಣಾಮೇಕೋನಾಶೀತಿರುಚ್ಯತೇ।
ಸಪ್ತದ್ವೀಪಸಮುದ್ರಾಯಾಃ ಪೃಥಿವ್ಯಾಸ್ತೇಷ ವಿಸ್ತರಃ ॥ ೭೨ ॥

ವಿಸ್ತಾರಾತ್ ತ್ರಿಗುಣಂ ಚೈವ ಪೃಥಿವ್ಯಂತಸ್ಯ ಮಂಡಲಂ।
ಗಣಿತಂ ಯೋಜನಾಗ್ರಂ ತು ಕೋಟ್ಯಸ್ತೇಕಾದಶ ಸ್ಮೃತಾಃ ॥ ೭೩ ॥

ತಥಾ ಶತಸಹಸ್ರಂ ತು ಸಪ್ತತ್ರಿಂಶಾಧಿಕಾನಿ ತು।
ಇತ್ಯೇತದ್ವೈ ಪ್ರಸಂಖ್ಯಾತಂ ಪೃಥಿವ್ಯಂತಸ್ಯ ಮಂಡಲಂ ॥ ೭೪ ॥

ತಾರಕಾಸನ್ನಿವೇಶಸ್ಯ ದಿವ ಯಾವಾದ್ಧಿ ಮಂಡಲಂ।
ಪರ್ಯಾಸಃ ಸನ್ನಿವೇಶಸ್ಯ ಭೂಮೇಸ್ತಾವತ್ತು ಮಂಡಲಂ ॥ ೭೫ ॥

---

೭೧-೭೨. ಪೃಥಿವಿಯ ಸಂಪೂರ್ಣ ವಿಸ್ತಾರವನ್ನು ಯೋಜನಗಳ ಅಳತೆಯಿಂದ ತಿಳಿಯಬೇಕು. ಪ್ರತಿ ದಿಕ್ಕುಗಳಲ್ಲಿಯೂ ಮೂರುಕೋಟಿಆರವತ್ತೊಂಬತ್ತು ಲಕ್ಷಗಳ ಯೋಜನಗಳಷ್ಟು ವಿಸ್ತಾರವಿರುತ್ತದೆ. ಹೀಗೆ ಸಪ್ತದ್ವೀಪಸಮುದ್ರಗಳಿಂದ ಸಹಿತವಾದ ಭೂಮಿಯ ಸಂಪೂರ್ಣ ಅಳತೆಯನ್ನು ಹೀಗೆ ತಿಳಿಯಬೇಕು.

೭೩. ಪೃಥಿವಿಯ ವಿಸ್ತಾರಕ್ಕಿಂತಲೂ ಅದರ ಕೊನೆಯ ಮಂಡಲದ ವಿಸ್ತಾರವು ಮೂರರಷ್ಟು ಅಧಿಕವಾಗಿರುತ್ತದೆ. ಹಾಗೆ ಗುಣಿತವಾದ ಯೋಜನಗಳಾದರೋ ಹನ್ನೊಂದುಕೋಟಿಮೂವತ್ತೇಳುಲಕ್ಷಗಳಾಗಿವೆ. ಹೀಗೆ ಪೃಥಿವಿಯ ಕೊನೆಯ ಮಂಡಲವನ್ನು ತಿಳಿಯಬೇಕು.

೭೫. ನಕ್ಷತ್ರಗಳ ಸನ್ನಿವೇಶವು ಅಂತರಿಕ್ಷದಲ್ಲಿ ಹೇಗೆ ಮಂಡಲಾಕಾರವಾಗಿದೆಯೋ ಹಾಗೆಯೇ ಭೂಮಿಯ ಮಂಡಲಾಕಾರವಾದ ಸನ್ನಿವೇಶವು ಇರುತ್ತದೆ.

**ಪರ್ಯಾಸಪರಿಮಾಣ್ಯೇನ ಭೂಮೇಸ್ತುಲ್ಯಂ ದಿವಿಂ ಸ್ಮೃತಂ।**
**ಸಪ್ತಾನಾಮಪಿ ಲೋಕಾನಾಮೇತನ್ಮಾನಂ ಪ್ರಕೀರ್ತಿತಂ ॥ ೭೬ ॥**

**ಪರ್ಯಾಸಪರಿಮಾಣ್ಯೇನ ಮಂಡಲಾನುಗತೇನ ಚ।**
**ಉಪರ್ಯುಪರಿ ಲೋಕಾನಾಂ ಛತ್ರವತ್ಪರಿಮಂಡಲಂ ॥ ೭೭ ॥**

**ಸಂಸ್ಥಿತಿರ್ವಿಹಿತಾ ಸರ್ವಾ ಯೇಷು ತಿಷ್ಠಂತಿ ಜಂತವಃ।**
**ಏತದಂಡಕಟಾಹಸ್ಯ ಪ್ರಮಾಣಂ ಪರಿಕೀರ್ತಿತಂ ॥ ೭೮ ॥**

**ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ।**
**ಭೂರ್ಲೋಕಶ್ಚ ಭುವಶ್ಚೈವ ತೃತೀಯಃ ಸ್ವರಿತಿ ಸ್ಮೃತಃ ॥**
**ಮಹರ್ಲೋಕೋ ಜನಶ್ಚೈವ ತಪಃ ಸತ್ಯಶ್ಚ ಸಪ್ತಮಃ ॥ ೭೯ ॥**

**ಏತೇ ಸಪ್ತ ಕೃತಾ ಲೋಕಾಶ್ಛತ್ರಾಕಾರಾ ವ್ಯವಸ್ಥಿತಾಃ।**
**ಸ್ವಕೈರಾವರಣೈಃ ಸೂಕ್ಷ್ಮೈರ್ಧಾರ್ಯಮಾಣಾಃ ಪೃಥಕ್ ಪೃಥಕ್ ॥ ೮೦ ॥**

---

೭೬. ಅಂತರಿಕ್ಷವು ಮಂಡಲಾಕಾರಸ್ಥಿತಿಯಲ್ಲಿ ಭೂಮಂಡಲಕ್ಕೆ ಸಮನಾಗಿಯೇ ಇರುತ್ತದೆ. ಇದೇ ರೀತಿಯಲ್ಲಿಯೇ ಸಪ್ತಲೋಕಗಳೂ ಇರುತ್ತವೆಯೆಂದು ತಿಳಿಯ ಬೇಕು.

೭೭. ಮಂಡಲಾಕಾರವಾದ ಸ್ಥಿತಿಗತಿಗಳಿಂದ ಭೂಮಂಡಲದ ಮೇಲಿರುವ ಸಪ್ತಲೋಕಗಳೂ ಒಂದಕ್ಕೆ ಮತ್ತೊಂದು ಛತ್ರಿಯಂತೆ ದುಂಡಗೆ ಮೇಲ್ಭಾಗದಲ್ಲಿವೆ.

೭೮. ಇವೆಲ್ಲಾ ಪ್ರಾಣಿಗಳೂ ಈ ಬ್ರಹ್ಮಾಂಡದ ಒಳಭಾಗದಲ್ಲಿವೆ. ಬ್ರಹ್ಮಾಂಡ ವನ್ನು ಅದರ ಪ್ರಮಾಣವನ್ನೂ ಯಥಾಸ್ಥಿತವಾಗಿ ನಿರೂಪಿಸಿರುವೆನು.

೭೯-೮೦. ಬ್ರಹ್ಮಾಂಡದ ಒಳಭಾಗದಲ್ಲಿ ಈ ಸಪ್ತಲೋಕಗಳೂ ಸಪ್ತದ್ವೀಪ ಗಳಿಂದ ಸಹಿತವಾದ ಭೂಮಂಡಲವೂ ಇರುವುವು. ಆ ಸಪ್ತಲೋಕಗಳು ಯಾವು ವೆಂದರೆ ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ, ಎಂಬವುಗಳಾಗಿವೆ. ಈ ಏಳುಲೋಕಗಳೂ ಬ್ರಹ್ಮಾಂಡದ ಒಳಭಾಗದಲ್ಲಿ ಒಂದಕ್ಕೊಂದು ಛತ್ರಿಯಂತೆ ಮಂಡಲಾಕಾರವಾಗಿ ಮೇಲೆಮೇಲಕ್ಕೆ ಸುವ್ಯವಸ್ಥಿತವಾಗಿವೆ. ತಮತಮಗೆ ಆವರಣಗಳಾದ ಸಮುದ್ರಾದಿಗಳಿಂದ ಆವೃತ ಗಳಾಗಿಯೂ ಸ್ಥಿರವಾಗಿಯೂ ನಿಂತಿವೆ.

ದಶಭಾಗಾಧಿಕಾಭಿಶ್ಚ ತಾಭಿಃ ಪ್ರಕೃತಿಭಿರ್ಬಹಿಃ ।
ಧಾರ್ಯಮಾಣಾ ವಿಶೇಷೈಶ್ಚ ಸಮುತ್ಪನ್ನೈಃ ಪರಸ್ಪರಂ ॥ ೮೧ ॥

ಅಸ್ಯಾಂಡಸ್ಯ ಸಮಂತಾಚ್ಚ ಸನ್ನಿವಿಷ್ಟೋ ಘನೋದಧಿಃ ।
ಪೃಥಿವೀಮಂಡಲಂ ಕೃತ್ಸ್ನಂ ಘನತೋಯೇನ ಧಾರ್ಯತೇ ॥ ೮೨ ॥

ಘನೋದಧಿ ಪರೇಣಾಥ ಧಾರ್ಯತೇ ಘನತೇಜಸಾ ।
ಬಾಹ್ಯತೋ ಘನತೇಜಸ್ತು ತಿರ್ಯಗೂರ್ಧ್ವಂ ತು ಮಂಡಲಂ ॥ ೮೩ ॥

ಸಮಂತಾದ್ಘನವಾತೇನ ಧಾರ್ಯಮಾಣಂ ಪ್ರತಿಷ್ಠಿತಂ ।
ಘನವಾತಾತ್ತಥಾಕಾಶಮಾಕಾಶಂಚ ಮಹಾತ್ಮನಾ ॥ ೮೪ ॥

ಭೂತಾದಿನಾ ವೃತಂ ಸರ್ವಂ ಭೂತಾದಿರ್ಮಹತಾ ವೃತಃ ।
ವೃತೋ ಮಹಾನನಂತೇನ ಪ್ರಧಾನೇನಾವ್ಯಯಾತ್ಮನಾ ॥ ೮೫ ॥

---

೮೧. ಅವು ಹೊರಭಾಗಗಳಲ್ಲಿ ತಮಗಿಂತಲೂ ಹತ್ತರಷ್ಟು ಅಧಿಕವಾದ ಜಲಾದಿಗಳಿಂದ ಆವೃತವೂ, ಸ್ಥಿರೀಕೃತಗಳೂ, ಆಗಿವೆ. ಮತ್ತು ಪರಸ್ಪರ ಸಮುತ್ಪನ್ನಗಳಾಗಿಯೂ ಇವೆ.

೮೨. ಈ ಬ್ರಹ್ಮಾಂಡದ ಸುತ್ತಲೂ ಘನೋದಕಸಮುದ್ರವಿರುವುದು. ಈ ಸಂಪೂರ್ಣವಾದ ಭೂಮಂಡಲವೆಲ್ಲವೂ ಘನೋದಸಮುದ್ರದಿಂದ ಧರಿಸಲ್ಪಟ್ಟು ಆಶ್ರಯವಾಗಿವೆ, (ಆಧಾರವಾಗಿದೆ.)

೮೩-೮೫. ಈ ಘನೋದಕಸಮುದ್ರವು ನಿಬಿಡವಾದ ತೇಜಸ್ಸಿನಿಂದ ಸುತ್ತಲ್ಪಟ್ಟಿದೆ. ಆ ತೇಜಸ್ಸು ಸುತ್ತಲೂ ಅಡ್ಡವಾಗಿಯೂ ಮಂಡಲಾಕಾರವಾಗಿಯೂ ವ್ಯಾಪಿಸಿಕೊಂಡಿದೆ. ಆ ಘನತೇಜಸ್ಸೂ ಕೂಡ ಘನವಾದ ವಾಯುವಿನಿಂದ ಧರಿಸಲ್ಪಟ್ಟು ಸ್ಥಾಪಿತವಾಗಿದೆ. ಆ ಘನವಾತವೂ ಕೂಡ ಆಕಾಶದಿಂದಾವೃತವಾಗಿ ನಿಂತಿದೆ. ಆ ಆಕಾಶವೂ ಕೂಡ ಮಹಾಭೂತಗಳಿಂದಾವೃತವಾಗಿ ಸ್ಥಿರವಾಗಿದೆ. ಈ ಭೂತಾದಿಗಳಿಂದ ಸರ್ವವೂ ಆವೃತವಾಗಿ ಸ್ಥಿರವಾಗಿ ನಿಂತಿವೆ. ಅಂತಹ ಭೂತಾದಿಗಳೂ ಕೂಡ ಮಹತ್ತತ್ವದಿಂದ ಆವೃತಗಳಾಗಿವೆ. ಆ ಮಹತ್ತತ್ವವೂ ಸಹ ಅನಂತ ನಾಮಕವೂ ಅವ್ಯಯವೂ ಪ್ರಧಾನವೂ ಆದ ಪ್ರಕೃತಿಯಿಂದ ಧರಿಸಲ್ಪಟ್ಟಿವೆ. ಎಲ್ಲಾ ಪ್ರಪಂಚಗಳಿಗೂ ಪ್ರಕೃತಿಯೇ ಮುಖ್ಯಕಾರಣವಾಗಿರುತ್ತದೆ.

**ಪುರಾಣಿ ಲೋಕಪಾಲಾನಾಂ ಪ್ರವಕ್ಷ್ಯಾಮಿ ಯಥಾಕ್ರಮಂ ।**
**ಜ್ಯೋತಿರ್ಗಣಪ್ರಚಾರಸ್ಯ ಪ್ರಮಾಣಂ ಪರಿವಕ್ಷ್ಯತೇ ॥ ೮೬ ॥**

**ಮೇರೋಃ ಪ್ರಾಚ್ಯಾಂ ದಿಶಿ ತಥಾ ಮಾನಸಸ್ಯೈವ ಮೂರ್ಧ್ದನಿ ।**
**ವಸ್ವೌಕಸಾರಾ ಮಾಹೇಂದ್ರೀ ಪುಣ್ಯಾ ಹೇಮಪರಿಷ್ಕೃತಾ ॥ ೮೭ ॥**

**ದಕ್ಷಿಣೇನ ಪುನರ್ಮೇರೋರ್ಮಾನಸಸ್ಯೈವ ಮೂರ್ಧ್ದನಿ ।**
**ವೈವಸ್ವತೋ ನಿವಸತಿ ಯಮಃ ಸಂಯಮನೇ ಪುರೇ ॥ ೮೮ ॥**

**ಪ್ರತೀಚ್ಯಾಂತು ಪುನರ್ಮೇರೋರ್ಮಾನಸಸ್ಯೈವ ಮೂರ್ಧ್ದನಿ ।**
**ಸುಖಾ ನಾಮ ಪುರೀ ರಮ್ಯಾ ವರುಣಸ್ಯಾಥ ಧೀಮತಃ ॥ ೮೯ ॥**

---

೮೬. ಈಗ ಅಷ್ಟದಿಕ್ಪಾಲಕರ ನಗರಗಳನ್ನು ಕ್ರಮವಾಗಿಯೂ ಯಥಾಸ್ಥಿತವಾಗಿಯೂ ನಿರೂಪಿಸುವೆನು. ಮತ್ತು ಜ್ಯೋತಿರ್ಗಣಗಳ ಪ್ರಚಾರಪ್ರಮಾಣಗಳನ್ನೂ ಸಹ ಹೇಳುವೆನು ಕೇಳಿರೆಂದನು.

೮೭. ಮಹಾಮೇರುವಿನ ಪೂರ್ವದಿಗ್ಭಾಗದಲ್ಲಿರುವ ಮಾನಸಪರ್ವತದ ಶಿಖರದಲ್ಲಿ ಮಹೇಂದ್ರ ಸಂಬಂಧಿಯೂ, ಸುವರ್ಣಾಲಂಕೃತವೂ, ಪವಿತ್ರವೂ ಆದ ವಸ್ವೌಕಸಾರವೆಂಬ ಪ್ರಸಿದ್ಧವಾದ ನಗರವು ಇರುತ್ತದೆ.

೮೮. ಮೇರುವಿನ ದಕ್ಷಿಣದಿಕ್ಕಿನಲ್ಲಿರುವ ಮಾನಸಪರ್ವತ ಶಿಖರದಲ್ಲಿ ಸಂಯಮನವೆಂಬ ನಗರವಿರುವುದು. ಅದರಲ್ಲಿ ವೈವಸ್ವತ ಯಮದೇವನು ರಾಜ್ಯವನ್ನು ಪರಿಪಾಲಿಸುತ್ತಿರುವನು.

೮೯. ಅದೇ ಮೇರುವಿನ ಪಶ್ಚಿಮದಲ್ಲಿರುವ ಮಾನಸಪರ್ವತದ ಶಿಖರದಲ್ಲಿ ಜ್ಞಾನಿಯಾದ ವರುಣದೇವನ ಸುಖಾನಾಮಕ ನಗರಿಯು ಅತಿಸುಂದರವಾಗಿ ಹೊಳೆಯುತ್ತಿರುವುದು.

ದಿಶ್ಯುತ್ತರಸ್ಯಾಂ ಮೇರೋಸ್ತು ಮಾನಸಸ್ಯೈವ ಮೂರ್ಧನಿ ।
ತುಲ್ಯಾಂ ಮಾಹೇಂದ್ರಪುರ್ಯಾ ತು ಸೋಮಸ್ಯಾಪಿ ವಿಭಾವರೀ ॥ ೯೦ ॥

ಮಾನಸೋತ್ತರಪೃಷ್ಠೇ ತು ಲೋಕಪಾಲಾಶ್ಚತುರ್ದಿಶಂ ।
ಸ್ಥಿತಾ ಧರ್ಮವ್ಯವಸ್ಥಾರ್ಯ್ಥೈ ಲೋಕಸಂರಕ್ಷಣಾಯ ಚ ॥ ೯೧ ॥

ಲೋಕಪಾಲೋಪರಿಷ್ಟಾತ್ತು ಸರ್ವತೋ ದಕ್ಷಿಣಾಯನೇ ।
ಕಾಷ್ಠಾಗತಸ್ಯ ಸೂರ್ಯಸ್ಯ ಗತಿರ್ಯಾ ತಾಂ ನಿಬೋಧತ ॥ ೯೨ ॥

ದಕ್ಷಿಣೇ ಪ್ರಕ್ರಮೇ ಸೂರ್ಯಃ ಕ್ಷಿಪ್ತೇಷುರಿವ ಸರ್ಪತಿ ।
ಜ್ಯೋತಿಷಾಂ ಚಕ್ರಮಾದಾಯ ಸತತಂ ಪರಿಗಚ್ಛತಿ ॥ ೯೩ ॥

ಮಧ್ಯಗಶ್ಚಾಮರಾವತ್ಯಾಂ ಯದಾ ಭವತಿ ಭಾಸ್ಕರಃ ।
ವೈವಸ್ವತೇ ಸಂಯಮನೇ ಉದಯಸ್ತತ್ರ ಉಚ್ಯತೇ ॥ ೯೪ ॥

---

೯೦. ಮೇರುವಿನ ಉತ್ತರಭಾಗದ ಮಾನಸಶಿಖರದಲ್ಲಿ ಇಂದ್ರನ ಅಮರಾವತೀ ನಗರಕ್ಕೆ ಸಮಾನವಾದ ವಿಭಾವರೀ ನಾಮಕ ದಿವ್ಯನಗರವಿರುತ್ತದೆ. ಅದಕ್ಕೆ ಸೋಮದೇವನು ಯಜಮಾನನಾಗಿರುವನು.

೯೧. ಮಾನಸಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಇಂದ್ರಾದಿ ಲೋಕಪಾಲಕರು ಧರ್ಮವ್ಯವಸ್ಥೆಗಾಗಿಯೂ ಲೋಕಸಂರಕ್ಷಣೆಗೋಸ್ಕರವೂ ವಾಸಮಾಡುವರು.

೯೨. ಅಷ್ಟದಿಕ್ಪಾಲಕರ ಮೇಲ್ಭಾಗದ ದಕ್ಷಿಣಾಯನದಲ್ಲಿ ದಕ್ಷಿಣದಿಗ್ಗತನಾದ ಸೂರ್ಯನ ಗತಿಯನ್ನು ಈಗ ಹೇಳುತ್ತೇನೆ ಕೇಳಿರೆಂದನು.

೯೩. ಸೂರ್ಯನು ದಕ್ಷಿಣದಿಕ್ಕಿಗೆ ಹೋಗುವಾಗ ಎಸೆಯಲ್ಪಟ್ಟ ಬಾಣದಂತೆ ವೇಗವಾಗಿ ಹೊರಡುವನು. ಸೂರ್ಯನು ಸಂಚರಿಸುವಾಗ ತನ್ನ ಜೊತೆಯಲ್ಲಿ ಜ್ಯೋತಿಶ್ಚಕ್ರವನ್ನೇ ತೆಗೆದುಕೊಂಡು ಹೋಗುವನು.

೯೪. ಸೂರ್ಯನು ಅಮರಾವತೀನದಿಯ ಮಧ್ಯದಲ್ಲಿರುವಾಗ ವೈವಸ್ವತ ಯಮನ ಸಂಯಮನ ನಗರದಲ್ಲಿ ಸೂರ್ಯನ ಉದಯವಾಗುವುದು. ಅಂದರೆ ಅಮರಾವತಿಯಲ್ಲಿ ಮಧ್ಯಾಹ್ನವಾದಾಗ ಸಂಯಮನ ನಗರಿಯಲ್ಲಿ ಪ್ರಾತಃಕಾಲವಾಗುವುದು.

ಸುಖಾಯಾಮರ್ಧರಾತ್ರಂ ಚ ಮಧ್ಯಗಃ ಸ್ಯಾದ್ರವಿರ್ಯದಾ ।
ಸುಖಾಯಾಮಥ ವಾರುಣ್ಯಾಮುತ್ತಿಷ್ಠನ್ ಸ ತು ದೃಶ್ಯತೇ ॥ ೯೫ ॥

ವಿಭಾಯಾಮರ್ಧರಾತ್ರಂ ಸ್ಯಾನ್ಮಾಹೇಂದ್ರ್ಯಾಮಸ್ತಮೇತಿ ಚ ।
ತದಾ ದಕ್ಷಿಣಪೂರ್ವೇಷಾಮಪರಾಹ್ಣೋ ವಿಧೀಯತೇ ॥ ೯೬ ॥

ದಕ್ಷಿಣಾಪರದೇಶ್ಯಾನಾಂ ಪೂರ್ವಾಹ್ಣಾಂ ಪರಿಕೀರ್ತ್ಯತೇ ।
ತೇಷಾಮಪರರಾತ್ರಂ ಚ ಯೇ ಜನಾ ಉತ್ತರಾಪಥೇ ॥ ೯೭ ॥

ದೇಶಾ ಉತ್ತರಪೂರ್ವಾ ಯೇ ಪೂರ್ವರಾತ್ರಂ ತು ತಾನ್ ಪ್ರತಿ ।
ಏವಮೇವೋತ್ತರೇಷ್ವರ್ಕೋ ಭವನೇಷು ವಿರಾಜತೇ ॥ ೯೮ ॥

ಸುಖಾಯಾಮಥ ವಾರುಣ್ಯಾಂ ಮಧ್ಯಾಹ್ನೇ ಚಾರ್ಯಮಾ ಯದಾ ।
ವಿಭಾವರ್ಯಾಂ ಸೋಮಪುರ್ಯಾಮುತ್ತಿಷ್ಠತಿ ವಿಭಾವಸುಃ ॥ ೯೯ ॥

---

೯೫-೯೬. ಆಗ ವರುಣಪಟ್ಟಣದ ಸುಖಾನಗರಿಯಲ್ಲಿ ಅರ್ಧರಾತ್ರಿಯಾಗುವುದು. ಸೂರ್ಯನು ಸುಖಾನಗರದ ಮಧ್ಯದಲ್ಲಿರುವಾಗ ವಾರುಣೀನಗರಿಯಲ್ಲಿ ಪ್ರಾತಃಕಾಲವಾಗುವುದು. ವಿಭಾವರೀನಗರದಲ್ಲಿ ಅರ್ಧರಾತ್ರಿಯೂ ಮಹೇಂದ್ರನ ವಸ್ವೋಕಸಾಪುರದಲ್ಲಿ ಸಾಯಂಕಾಲವೂ ಆಗುವುದು. ಆಗ ದಕ್ಷಿಣ ಪೂರ್ವದಿಗ್ಭಾಗದ ದೇಶದವರಿಗೆ ಅಂದರೆ ಆಗ್ನೇಯ ದಿಗ್ಭಾಗದವರಿಗೆ ಅಪರಾಹ್ಣವಾಗುವುದು, (ಸಾಯಂಕಾಲವಾಗುವುದು.)

೯೭-೧೦೦. ದಕ್ಷಿಣಪಶ್ಚಿಮಗಳ ಮಧ್ಯಭಾಗದ ನೈರುತ್ಯದೇಶಗಳಿಗೆ ಪೂರ್ವಾಹ್ಣವಾಗುವುದು. ಉತ್ತರ ಪಶ್ಚಿಮದ ವಾಯುವ್ಯದಿಕ್ಕಿನ ದೇಶಕ್ಕೆ ಮಧ್ಯರಾತ್ರಿಯಾಗುವುದು. ಉತ್ತರ ಪೂರ್ವದ ಈಶಾನ್ಯಭಾಗದಲ್ಲಿರುವ ದೇಶಗಳಿಗೆ ಪೂರ್ವರಾತ್ರಿಯೂ ಆಗುವುದು. ಇದರಂತೆಯೇ ಸೂರ್ಯನು ಉತ್ತರದಿಕ್ಕಿನಲ್ಲಿ ಸೋಮನ ವಿಭಾವರೀ ನಗರಿಯಲ್ಲಿ ಉದಯಿಸಿದರೆ ವರುಣದೇವತಾಕವಾದ ಸುಖಾಪುರಿಯಲ್ಲಿ ಮಧ್ಯಾಹ್ನವಾಗುವುದು. ಸೋಮಪುರಿಯಾದ ವಿಭಾವರಿಯಲ್ಲಿ ಪ್ರಾತಃಕಾಲವಾಗುವುದು. ಆಗ

ರಾತ್ರ್ಯರ್ಧಂ ಚಾಮರಾವತ್ಯಾಮಸ್ತಮೇತಿ ಯಮಸ್ಯ ಚ ।
ಸೋಮಪುರ್ಯಾಂ ವಿಭಾಯಾಂತು ಮಧ್ಯಾಹ್ನೇ ಸ್ಯಾದ್ದಿವಾಕರಂ ॥೧೦೦॥

ಮಹೇಂದ್ರಸ್ಯಾಮರಾವತ್ಯಾಮುತ್ತಿಷ್ಠತಿ ಯದಾ ರವಿಃ ।
ಅರ್ಧರಾತ್ರಂ ಸಂಯಮನೇ ವಾರುಣ್ಯಾಮಸ್ತಮೇತಿ ಚ ॥ ೧೦೧ ॥

ಸ ಶೀಘ್ರಮೇತಿ ಪರ್ಯೇತಿ ಭಾಸ್ಕರೋಽಲಾತಚಕ್ರವತ್ ।
ಭ್ರಮನ್ ವೈ ಭ್ರಮಮಾಣಾನಿ ಋಕ್ಷಾಣಿ ಗಗನೇ ರವಿಃ ॥ ೧೦೨ ॥

ಏವಂ ಚತುರ್ಷು ದ್ವೀಪೇಷು ದಕ್ಷಿಣಾಂತೇನ ಸರ್ಪತಿ ।
ಉದಯಾಸ್ತಮನೇನಾಸಾವುತ್ತಿಷ್ಠತಿ ಪುನಃ ಪುನಃ ॥ ೧೦೩ ॥

ಪೂರ್ವಾಹ್ಣೇ ಚಾಪರಾಹ್ಣೇ ತು ದ್ವೌ ದ್ವೌ ದೇವಾಲಯೌ ತು ಸಃ ।
ತಪತ್ಯೇಕಂ ತು ಮಧ್ಯಾಹ್ನೇ ತೈರೇವ ತು ಸರಶ್ಮಿಭಿಃ ॥ ೧೦೪ ॥

---

ಅಮರಾವತೀನಗರಿಯಲ್ಲಿ ಅರ್ಧರಾತ್ರಿಯೂ ಸೋಮಪುರಿಯಾದ ವಿಭಾವರಿಯಲ್ಲಿ ಸೂರ್ಯನು ಮಧ್ಯಭಾಗದಲ್ಲಿಯೂ ಇರುವನು. ಅಲ್ಲಿ ಮಧ್ಯಾಹ್ನವಾಗುವುದು.

೧೦೧. ಸೂರ್ಯನು ದೇವೇಂದ್ರನ ಅಮರಾವತಿಯಲ್ಲಿ ಯಾವಾಗ ಉದಯಿಸುವನೋ ಆಗ ಯಮನ ಸಂಯಮನಗರಿಯಲ್ಲಿ ಅರ್ಧರಾತ್ರಿಯೂ ವರುಣನ ಸುಖಾನಗರಿಯಲ್ಲಿ ಸಾಯಂಕಾಲವೂ ಆಗುವುವು.

೧೦೨. ಸೂರ್ಯನು ಅಲಾತಚಕ್ರದಂತೆ ಉದಯಿಸಿ ಅತಿಶೀಘ್ರವಾಗಿ ಮುಂದಕ್ಕೆ ಸಂಚರಿಸುವನು. ಮತ್ತು ಅದೇ ಸೂರ್ಯನೇ ಆಕಾಶದಲ್ಲಿ ತಿರುಗುತ್ತಿರುವ ನಕ್ಷತ್ರಗಳ ಮಂಡಲವನ್ನು ಸುತ್ತುವನು.

೧೦೩. ಹೀಗೆ ಸೂರ್ಯನು ದಕ್ಷಿಣಾಯನದಲ್ಲಿ ನಾಲ್ಕು ದ್ವೀಪಗಳಲ್ಲಿಯೂ ಸಂಚರಿಸುವನು. ಹೀಗೆ ಸೂರ್ಯನು ಪದೇಪದೇ ಉದಯಾಸ್ತಮಯಗಳನ್ನು ಹೊಂದುವನು.

೧೦೪. ಸೂರ್ಯದೇವನು ಪ್ರಾತಃಕಾಲ ಸಾಯಂಕಾಲಗಳಲ್ಲಿ ಎರಡೆರಡು ದೇವಾಲಯಗಳನ್ನೂ ಮಧ್ಯಾಹ್ನದಲ್ಲಿ ಒಂದು ದೇವಾಲಯವನ್ನೂ ತನ್ನ ಕಿರಣಗಳಿಂದ ತಾಪಗೊಳಿಸುವನು.

**ಉದಿತೋ ವರ್ಧಮಾನಾಭಿರಾಮಧ್ಯಾಹ್ನಂ ತಪರ್ನ ರವಿಃ।**
**ಅತಃ ಪರಂ ಹ್ರಸಂತೀಭಿರ್ಗೋಭಿರಸ್ತಂ ಸ ಗಚ್ಛತಿ ॥ ೧೦೫ ॥**

**ಉದಯಾಸ್ತಮಯಾಭ್ಯಾಂ ಹಿ ಸ್ಮೃತೇ ಪೂರ್ವಾಪರೇ ದಿಶೌ।**
**ಯಾವತ್ಪುರಸ್ತಾತ್ತಪತಿ ತಾವತ್ ಪೃಷ್ಠೇ ತು ಪಾರ್ಶ್ವಯೋಃ ॥ ೧೦೬ ॥**

**ಯತ್ರೋದ್ಯನ್ ದೃಶ್ಯತೇ ಸೂರ್ಯಸ್ತೇಷಾಂ ಸ ಉದಯಃ ಸ್ಮೃತಃ।**
**ಯತ್ರ ಪ್ರಣಾಶಮಾಯಾತಿ ತೇಷಾಮಸ್ತಃ ಸ ಉಚ್ಯತೇ ॥ ೧೦೭ ॥**

**ಸರ್ವೇಷಾಮುತ್ತರೇ ಮೇರುರ್ಲೋಕಾಲೋಕಸ್ತು ದಕ್ಷಿಣೇ।**
**ವಿದೂರಭಾವಾದರ್ಕಸ್ಯ ಭೂಮೇರ್ಲೋಕಾವೃತಸ್ಯ ಚ।**
**ಹ್ರಿಯಂತೇ ರಶ್ಮಯೋ ಯಸ್ಮಾತ್ತೇನ ರಾತ್ರೌ ನ ದೃಶ್ಯತೇ ॥ ೧೦೮ ॥**

---

೧೦೫. ಸೂರ್ಯನು ಪ್ರಾತಃಕಾಲದಲ್ಲಿ ಉದಯಿಸಿ ಮಧ್ಯಾಹ್ನದವರೆಗೂ ವೃದ್ಧಿಯಾಗುವ ಕಿರಣಗಳಿಂದ ತಾಪಗೊಳಿಸುವನು. ಮಧ್ಯಾಹ್ನದಿಂದ ಸಾಯಂಕಾಲದ ವರೆಗೂ ಅವನ ರಶ್ಮಿಗಳು ಹ್ರಾಸವನ್ನು ಹೊಂದುವುವು.

೧೦೬. ಸೂರ್ಯನು ಉದಯಿಸುವ ದಿಕ್ಕಿಗೆ ಪೂರ್ವವೆಂದೂ, ಅಸ್ತಮಯ ವಾಗುವ ದಿಕ್ಕಿಗೆ ಪಶ್ಚಿಮವೆಂದೂ ನಾಮಗಳು ಬಂದಿವೆ. ಯಾವಾಗ ಸೂರ್ಯನು ಪೂರ್ವದಲ್ಲಿ ಹೊಳೆಯುವನೋ ಆಗ ಹಿಂಭಾಗದಲ್ಲಿಯೂ ಪಕ್ಕಗಳಲ್ಲಿಯೂ ಅಂಧಕಾರ ವಿರುವುದು.

೧೦೭. ಸೂರ್ಯನು ಯಾವ ದೇಶದಲ್ಲಿ ಹುಟ್ಟಿ ಪ್ರಕಾಶಿಸುವನೋ ಆ ದೇಶಕ್ಕೆ ಅದು ಉದಯವಾಗುವುದು. ಎಲ್ಲಿ ಅಸ್ತಮಯವಾಗುವನೋ (ಮುಳುಗುವನೋ) ಅದೇ ಅಸ್ತಮಯವೆಂದು ತಿಳಿಯಬೇಕು.

೧೦೮. ಮೇರುಗಿರಿಯು ಎಲ್ಲಾ ದೇಶಗಳಿಗೂ ಉತ್ತರಭಾಗದಲ್ಲಿದೆ. ಲೋಕಾ ಲೋಕಪರ್ವತವು ದಕ್ಷಿಣಭಾಗದಲ್ಲಿರುತ್ತದೆ. ಸೂರ್ಯನು ಬಹಳ ದೂರದಲ್ಲಿರುವುದ ರಿಂದಲೂ, ಭೂಭಾರದಿಂದ ಕಿರಣಗಳು ಆವೃತವಾಗಿರುವುದರಿಂದಲೂ ರಶ್ಮಿಗಳು ಅಪಹರಿಸುವುದರಿಂದಲೂ ರಾತ್ರಿಯಾಗುವುದು. ಅಂದರೆ ಆಗ ಸೂರ್ಯನು ಕಾಣುವುದಿಲ್ಲ.

ಗ್ರಹನಕ್ಷತ್ರತಾರಾಣಾಂ ದರ್ಶನಂ ಭಾಸ್ಕರಸ್ಯ ಚ ।
ಉಚ್ಛ್ರಾಯಸ್ಯ ಪ್ರಮಾಣೇನ ಜ್ಞೇಯಮಸ್ತಮನೋದಯಂ ॥ ೧೮೯ ॥

ಶುಕ್ಲಚ್ಛಾಯೋಽಗ್ನಿರಾಪಶ್ಚ ಕೃಷ್ಣಚ್ಛಾಯಾ ಚ ಮೇದಿನೀ ।
ವಿದೂರಭಾವಾದರ್ಕಸ್ಯ ಉದ್ಯತಸ್ಯ ವಿರಶ್ಮಿತಾ ।
ರಕ್ತಭಾವೋ ವಿರಶ್ಮಿತ್ವಾದ್ರಕ್ತತ್ವಾಚ್ಚಾಪ್ಯನುಷ್ಣತಾ ॥ ೧೧೦ ॥

ಲೇಖಯಾವಸ್ಥಿತಃ ಸೂರ್ಯೋ ಯತ್ರ ಯತ್ರ ತು ದೃಶ್ಯತೇ ।
ಊರ್ಧ್ವಂ ಗತಃ ಸಹಸ್ರಂತು ಯೋಜನಾನಾಂ ಸ ದೃಶ್ಯತೇ ॥ ೧೧೧ ॥

ಪ್ರಭಾ ಹಿ ಸೌರೀ ಪಾದೇನ ಅಸ್ತಂ ಗಚ್ಛತಿ ಭಾಸ್ಕರೇ ।
ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ ಪ್ರಕಾಶತೇ ॥ ೧೧೨ ॥

---

೧೦೯. ಸೂರ್ಯ, ಗ್ರಹ, ನಕ್ಷತ್ರ, ತಾರ ಇವುಗಳು ಏಳಿಗೆಯನ್ನು ಹೊಂದಿದಾಗ ಅವುಗಳ ದರ್ಶನವಾಗುವುದು. ಅವುಗಳು ಏಳಿಗೆಯನ್ನು ಹೊಂದದೇ ಕ್ಷಯಿಸುವಾಗ ಅಸ್ತವೂ ಆಗುವುದೆಂದು ತಿಳಿಯಬೇಕು.

೧೧೦. ಅಗ್ನಿ ಮತ್ತು ಜಲವು ಶುಭ್ರವರ್ಣವಾಗಿರುವುವು. ಭೂಮಿಯು ಕಪ್ಪುಬಣ್ಣವುಳ್ಳದ್ದಾಗಿದೆ. ಸೂರ್ಯನು ಉದಯಿಸುವಾಗ ಬಹಳ ದೂರವಾಗಿರುವುದರಿಂದ ಸೂರ್ಯರಶ್ಮಿಗಳು ವಿಶೇಷವಿಲ್ಲದೆ ಕೆಂಪಗೆ ಕಾಣುವುದು. ರಶ್ಮಿಗಳಿಲ್ಲದಿರುವುದರಿಂದ ಕೆಂಪಗಿರುವುದು. ಕೆಂಪಗಿರುವುದರಿಂದಲೇ ಉಷ್ಣತೆಯಿಲ್ಲದೇ ಇರುವುದು.

೧೧೧. ಸೂರ್ಯನು ಎಲ್ಲೆಲ್ಲಿ ಕಾಣುವನೋ ಅಲ್ಲಲ್ಲಿ ಕಿರಣಗಳಿಂದ ಯುಕ್ತನಾಗಿರುವನು. ನೆತ್ತಿಯ ಮೇಲಕ್ಕೆ ಬಂದಾಗ ಸೂರ್ಯನಿಗೂ ನಮಗೂ ಒಂದು ಸಹಸ್ರ ಯೋಜನಗಳ ದೂರವಿರುವುದು.

೧೧೨. ಸೂರ್ಯನು ಮುಳುಗಲಾಗಿ ಅವನ ಒಂದು ಪಾದದಷ್ಟು ಕಾಂತಿಯು ರಾತ್ರಿಯ ವೇಳೆಯಲ್ಲಿ ಅಗ್ನಿಯನ್ನು ಸೇರುತ್ತದೆ. ಆದುದರಿಂದ ದೂರವಾಗಿ ಹೊಳೆಯುವನು.

ಉದಿತಸ್ತು ಪುನಃ ಸೂರ್ಯಃ ಅಸ್ತಮಾಗ್ನೇಯಮಾವಿಶತ್ ।
ಸಂಯುಕ್ತೋ ವಹ್ನಿನಾ ಸೂರ್ಯಸ್ತತಃ ಸ ತಪತೇ ದಿವಾ ॥ ೧೧೩ ॥

ಪ್ರಕಾಶ್ಯಂ ಚ ತಥೌಷ್ಣ್ಯಂ ಚ ಸೂರ್ಯಾಗ್ನೇಯಂ ಚ ತೇಜಸೀ ।
ಪರಸ್ಪರಾನುಪ್ರವೇಶಾದಾಪ್ಯಾಯೇತೇ ದಿವಾನಿಶಂ ॥ ೧೧೪ ॥

ಉತ್ತರೇ ಚೈವ ಭೂಮ್ಯರ್ಧೇ ತಥಾ ತಸ್ಮಿಂಚ ದಕ್ಷಿಣೇ ।
ಉತ್ತಿಷ್ಠತಿ ತಥಾ ಸೂರ್ಯೇ ರಾತ್ರಿರಾವಿಶತೇ ತ್ವಪಃ ।
ತಸ್ಮಾತ್ತಾಮಾ ಭವಂತ್ಯಾಪೋ ದಿವಾರಾತ್ರಿ ಪ್ರವೇಶನಾತ್ ॥ ೧೧೫ ॥

ಅಸ್ತಂ ಯಾತಿ ಪುನಃ ಸೂರ್ಯೇ ದಿನಂ ವೈ ಪ್ರವಿಶತ್ಯಪಃ ।
ತಸ್ಮಾಚ್ಛುಕ್ಲಾ ಭವಂತ್ಯಾಪೋ ನಕ್ತಮಹ್ನಃ ಪ್ರವೇಶನಾತ್ ॥ ೧೧೬ ॥

---

೧೧೩. ಸೂರ್ಯನು ಹಗಲಲ್ಲಿ ಉದಯಿಸುವಾಗ ಅಗ್ನಿಯಲ್ಲಿರುವ ತನ್ನ ಕಿರಣವನ್ನು ಪುನಃ ಪಡೆಯುವನು. ಹೀಗೆ ಅಗ್ನಿಯಿಂದ ಸಹಿತನಾದ ಸೂರ್ಯನು ಹಗಲಲ್ಲಿ ಹೊಳೆಯುವನು. ಅಗ್ನಿಯಲ್ಲಿರುವ ರಶ್ಮಿಗಳೆಲ್ಲ ಸೂರ್ಯನನ್ನು ಹೊಂದಿರುವುದರಿಂದ ಅಗ್ನಿಯ ಕಾಂತಿಯು ಕುಂದಿಹೋಗಿರುವುದು.

೧೧೪. ಪ್ರಕಾಶ ಮತ್ತು ಉಷ್ಣತೆ ಇವೆರಡೂ ಸೂರ್ಯಾಗ್ನಿಗಳ ತೇಜಸ್ಸಾಗಿವೆ. ಪರಸ್ಪರಾನು ಪ್ರವೇಶದಿಂದ ಸೂರ್ಯನು ಹಗಲಲ್ಲಿಯೂ ಅಗ್ನಿಯು ರಾತ್ರಿಯಲ್ಲಿಯೂ ಪ್ರಕಾಶಿಸುವುದು.

೧೧೫. ಸೂರ್ಯನು ಭೂಮ್ಯರ್ಧದ ಉತ್ತರ ಮತ್ತು ದಕ್ಷಿಣಗಳಲ್ಲಿ ಉದಯಿಸುವ ಕಾಲದಲ್ಲಿ ರಾತ್ರಿಯು ಜಲವನ್ನು ಪ್ರವೇಶಿಸುವುದು. ಆದುದರಿಂದ ಆ ಸಮಯದಲ್ಲ ನೀರು ಕೆಂಪಾಗಿರುವುದು. ಹಗಲು ರಾತ್ರಿಯನ್ನು ಪ್ರವೇಶಮಾಡುವುದರಿಂದಲೂ ಕೆಂಪಾಗಿ ತೋರುವುದು.

೧೧೬. ಪುನಃ ಸೂರ್ಯನು ಅಸ್ತವನ್ನು ಹೊಂದಲು ಹಗಲು ಜಲವನ್ನೂ, ರಾತ್ರಿಯು ಹಗಲನ್ನು ಪ್ರವೇಶಮಾಡುವುದರಿಂದಲೂ, ಜಲವು ಶುಕ್ಲವರ್ಣ ಅಂದರೆ ಶುಭ್ರವರ್ಣವಾಗುವುವು.

ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ।
ಉದಯಾಸ್ತಮನೇಽರ್ಕಸ್ಯ ಅಹೋರಾತ್ರಂ ವಿಶತ್ಯಪಃ ॥ ೧೧೭ ॥

ದಿನಂ ಸೂರ್ಯಪ್ರಕಾಶಾಖ್ಯಂ ತಾಮಸೀ ರಾತ್ರಿರುಚ್ಯತೇ ।
ತಸ್ಮಾದ್ವ್ಯವಸ್ಥಿತಾ ರಾತ್ರಿಃ ಸೂರ್ಯಾವೇಕ್ಷ್ಯಮಹಃ ಸ್ಮೃತಂ ॥ ೧೧೮ ॥

ಏವಂ ಪುಷ್ಕರಮಧ್ಯೇನ ಯದಾ ಸರ್ಪತಿ ಭಾಸ್ಕರಃ ।
ತ್ರಿಂಶಾಂಶಕಂ ತು ಮೇದಿನ್ಯಾ ಮುಹೂರ್ತೇನೈವ ಗಚ್ಛತಿ ॥ ೧೧೯ ॥

ಯೋಜನಾಗ್ರಾನ್ಮುಹೂರ್ತಸ್ಯ ಇಮಾಂ ಸಂಖ್ಯಾಂ ನಿಬೋಧತ ।
ಪೂರ್ಣಂ ಶತಸಹಸ್ರಾಣಾಮೇಕತ್ರಿಂಶತ್ತು ಸಾ ಸ್ಮೃತಾ ॥ ೧೨೦ ॥

ಪಂಚಾಶತ್ತು ತಥಾನ್ಯಾನಿ ಸಹಸ್ರಾಣ್ಯಧಿಕಾನಿ ತು ।
ಮೌಹೂರ್ತಿಕೀ ಗತಿರ್ಹ್ಯೇಷಾ ಸೂರ್ಯಸ್ಯ ತು ವಿಧೀಯತೇ ॥ ೧೨೧ ॥

---

೧೧೭. ಇವೇ ಕ್ರಮದಿಂದಲೇ ಸೂರ್ಯನು ಭೂಮ್ಯರ್ಧದ ದಕ್ಷಿಣೋತ್ತರದಲ್ಲಿರುವಾಗ ಉದಯಾಸ್ತಮಯಗಳಾಗಿ ಅಹೋರಾತ್ರಿಗಳೆರಡೂ ಜಲವನ್ನು ಪ್ರವೇಶಿಸುವುವು.

೧೧೮. ಸೂರ್ಯನ ಪ್ರಕಾಶಕ್ಕೆ ಹಗಲೆಂತಲೂ ಅಂಧಕಾರಕ್ಕೆ ರಾತ್ರಿಯೆಂತಲೂ ಸಂಜ್ಞೆಯು ಉಂಟಾಗಿರುವುದು. ಆದುದರಿಂದ ರಾತ್ರಿಯು ವ್ಯವಸ್ಥಿತವಾಗಿರುವುದು. ಸೂರ್ಯದರ್ಶನಾರ್ಹವಾದುದೇ ಅಹಸ್ಸೆಂದೂ ಸಿದ್ಧವಾಗಿರುವುದು.

೧೧೯. ಹೀಗೆ ಸೂರ್ಯನು ಯಾವಾಗ ಪುಷ್ಕರದ್ವೀಪದ ಮಧ್ಯಭಾಗದಿಂದ ಸಂಚರಿಸುವನೋ, ಆಗ ಮೂವತ್ತು ಕಲೆಗಳಿಂದ ಮೂವತ್ತು ಮುಹೂರ್ತಗಳಿಗೆಯಿಂದ ಭೂಮಿಯಲ್ಲಿ ಸೂರ್ಯಸಂಬಂಧವಿರುವುದು.

೧೨೦-೧೨೧. ಒಂದು ಮುಹೂರ್ತಕ್ಕೆ ಕೆಲವು ಯೋಜನಗಮನದಿಂದ ಈ ವಕ್ಷ್ಯಮಾಣಸಂಖ್ಯೆಯನ್ನು ತಿಳಿಯಬೇಕು. ಆ ಸಂಖ್ಯೆಯು ಮೂವತ್ತೊಂದು ಲಕ್ಷದ ಐವತ್ತು ಸಾವಿರ ಯೋಜನಗಳೆಂದು ತಿಳಿಯಬೇಕಾಗಿರುವುದು. ಸೂರ್ಯನು ಒಂದು ಮುಹೂರ್ತಕ್ಕೆ ಮೇಲೆ ಹೇಳಿದ ಯೋಜನಗಳಷ್ಟು ದೂರ ಸಂಚರಿಸುವನು.

ಏತೇನ ಗತಿಯೋಗೇನ ಯದಾ ಕಾಷ್ಠಾಂ ತು ದಕ್ಷಿಣಾಂ ।
ಪರ್ಯಾಗಚ್ಛೇತ್ತದಾದಿತ್ಯೋ ಮಾಘೇ ಕಾಷ್ಠಾಂತಮೇವ ಹಿ ॥ ೧೨೨ ॥

ಸರ್ಪತೇ ದಕ್ಷಿಣಾಯಾಂ ತು ಕಾಷ್ಠಾಯಾಂ ತನ್ನಿಬೋಧತ ।
ನವಕೋಟ್ಯಃ ಪ್ರಸಂಖ್ಯಾತಾ ಯೋಜನೈಃ ಪರಿಮಂಡಲಂ ॥ ೧೨೩ ॥

ತಥಾ ಶತಸಹಸ್ರಾಣಿ ಚತ್ವಾರಿಂಶಚ್ಚ ಪಂಚ ಚ ।
ಅಹೋರಾತ್ರಾತ್ಪತಂಗಸ್ಯ ಗತಿರೇಷಾ ವಿಧೀಯತೇ ॥ ೧೨೪ ॥

ದಕ್ಷಿಣಾದ್ವಿನಿವೃತ್ತೋಽಸೌ ವಿಷುವಸ್ಥೋ ಯದಾ ರವಿಃ ।
ಕ್ಷೀರೋದಸ್ಯ ಸಮುದ್ರಸ್ಯ ಉತ್ತರಾಂತಾ ದಿಶಶ್ಚರ‍್ ॥ ೧೨೫ ॥

ಮಂಡಲಂ ವಿಷುವದ್ಯಾಪಿ ಯೋಜನೈಸ್ತನ್ನಿಬೋಧತ ।
ಸಸ್ರಃ ಕೋಟ್ಯಸ್ತು ವಿಸ್ತೀರ್ಣಾ ವಿಷುವದ್ಯಾಪಿ ಸಾ ಸ್ಮೃತಾ ॥ ೧೨೬ ॥

---

೧೨೨. ಸೂರ್ಯನು ಈ ವಿಧವಾದ ಗತಿವಿಶೇಷದಿಂದ ದಕ್ಷಿಣದಿಕ್ಕನ್ನು ಕುರಿತು ಯಾವಾಗ ಹೋಗುವನೋ ಆಗ ಮಾಘಮಾಸವು ಅಂತ್ಯವಾಗುವುದು. ಆಗ ಸೂರ್ಯನು ದಕ್ಷಿಣಧ್ರುವದ ಕೊನೆಯಲ್ಲಿರುವನು.

೧೨೩-೧೨೪. ಸೂರ್ಯನು ದಕ್ಷಿಣಾಯನದಲ್ಲಿ ದಕ್ಷಿಣದಿಗ್ಭಾಗದಲ್ಲಿ ಎಷ್ಟು ದೂರ ಹೋಗುವನೆಂಬುದನ್ನು ಹೇಳುವೆನು ಕೇಳಿ. ಸೂರ್ಯನು ಒಂದು ಅಹೋ ರಾತ್ರಿಯಲ್ಲಿ ಅಂದರೆ ಒಂದು ದಿನದಲ್ಲಿ ಒಂಭತ್ತು ಕೋಟಿ ನಲವತ್ತೈದುಲಕ್ಷದ ಯೋಜನಗಳಷ್ಟು ದೂರ ಸಂಚಾರಮಾಡುವನು.

೧೨೫. ಸೂರ್ಯನು ದಕ್ಷಿಣದಿಕ್ಕಿನಿಂದ ಹೊರಟು ವಿಷುವತ್‌ಸ್ಥಾನಕ್ಕೆ ಬಂದಾಗ ಕ್ಷೀರಸಮುದ್ರದ ಉತ್ತರದಿಕ್ಕಿನಲ್ಲಿ ಸಂಚರಿಸುವನು.

೧೨೬-೧೨೭. ವಿಷುವದ್ವೃತ್ತದ ಮಂಡಲಪ್ರಮಾಣವನ್ನು ಯೋಜನಗಳಿಂದ ತಿಳಿಯಬೇಕು. ಆ ಪ್ರಮಾಣವು ಮೂರುಕೋಟಿ ಎಂಭತ್ತೊಂದುಲಕ್ಷದ ಯೋಜನ

ತಥಾ ಶತಸಹಸ್ರಾಣಾಮಶೀತ್ಯೇಕಾಧಿಕಾ ಪುನಃ ।
ಶ್ರವಣೇ ಚೋತ್ತರಾಃ ಕಾಷ್ಠಾಂಚಿತ್ರಭಾನುರ್ಯದಾ ಭವೇತ್ ॥ ೧೨೭ ॥

ಉತ್ತರಾಯಾಂ ಚ ಕಾಷ್ಠಾಯಾಂ ಪ್ರಮಾಣಂ ಮಂಡಲಸ್ಯ ಚ ।
ಯೋಜನಾಗ್ರಾತ್ಪ್ರಸಂಖ್ಯಾತಾ ಕೋಟಿರೇಕಾ ತು ಸಾ ದ್ವಿಜೈಃ ॥ ೧೨೮ ॥

ಅಶೀತಿನಿಯುರ್ತಾನೀಹ ಯೋಜನಾನಾಂ ತಥೈವ ಚ ।
ಅಷ್ಟಪಂಚಾಶತಂ ಚೈವ ಯೋಜನಾನ್ಯಧಿಕಾನಿ ತು ॥ ೧೨೯ ॥

ನಾಗವೀಥ್ಯುತ್ತರಾವೀಥೀ ಅಜವೀಥೀ ಚ ದಕ್ಷಿಣಾ ।
ಮೂಲಂಚೈವ ತಥಾಷಾಢೋ ಹ್ಯಜವೀಥ್ಯುದಯಾಸ್ತ್ರಯಃ ।
ಅಭಿಜಿತ್ಪೂರ್ವಕಃ ಸ್ವಾತಿರ್ನಾಗವೀಥ್ಯುದಯಾಸ್ತ್ರಯಃ ॥ ೧೩೦ ॥

ಕಾಷ್ಠಯೋರಂತರಂ ಯಚ್ಚ ತದ್ವಕ್ಷ್ಯೇ ಯೋಜನೈಃ ಪುನಃ।
ಏತಚ್ಛತಸಹಸ್ರಾಣಾಮೇಕತ್ರಿಂಶೋತ್ತರಂ ಶತಂ ॥ ೧೩೧ ॥

---

ಗಳೆಂದು ತಿಳಿಯಬೇಕು. ಸೂರ್ಯನು ಶ್ರಾವಣಮಾಸದಲ್ಲಿ ಉತ್ತರದಿಕ್ಕಿನ ಕೊನೆಯಲ್ಲಿ ಸಂಚರಿಸುವನು. ಅದು ಆರನೆಯ ಶಾಕದ್ವೀಪದ ಉತ್ತರದಿಕ್ಕಿನ ಕೊನೆಯ ಭಾಗವಾಗಿದೆ. ಸೂರ್ಯನು ಶಾಕದ್ವೀಪದ ಕೊನೆಯಲ್ಲಿ ಸಂಚರಿಸುವನು.

೧೨೮-೧೨೯. ಉತ್ತರದಿಕ್ಕಿನ ಮಂಡಲಾಕಾರಪ್ರಮಾಣವನ್ನು ಯೋಜನಗಳ ಸಂಖ್ಯೆಯಿಂದ ತಿಳಿಯಬೇಕು. ವಿಪ್ರರು ಹೀಗೆ ಆ ಸಂಖ್ಯೆಯನ್ನು ಹೇಳುವರು. ಅದು ಒಂದು ಕೋಟಿಯ ಎಂಬತ್ತುಲಕ್ಷದ ಐವತ್ತಾರು ಸಹಸ್ರ ಯೋಜನಗಳಷ್ಟು ವಿಸ್ತಾರವೆಂದು ಮುನಿಗಳು ಹೇಳುವರು.

೧೩೦. ಸೂರ್ಯನು ದಕ್ಷಿಣದಿಗ್ಭಾಗದಲ್ಲಿರುವಾಗ ಮೂಲಾನಕ್ಷತ್ರದ ಆದಿಯಲ್ಲಿಯೂ ಆಶ್ಲೇಷಾಂತ್ಯದಲ್ಲಿಯೂ ಅಜವೀಥೀ, ನಾಗವೀಥೀ ಉತ್ತರಾವೀಥಿಯೆಂಬ ಮೂರು ವೀಥಿಗಳು ಉತ್ಪನ್ನವಾಗುವುವು. ಅಭಿಜನ್ಮುಹೂರ್ತದ ಪೂರ್ವದಲ್ಲಿ ಸ್ವಾತೀನಕ್ಷತ್ರವಿದ್ದಾಗ ನಾಗವೀಥಿ, ಅಜವೀಥಿ, ಉತ್ತರಾವೀಥಿಯೆಂಬ ಮೂರು ವೀಥಿಗಳು ಉಂಟಾಗುವುವು.

೧೩೧-೧೩೨. ಈಗ ಎರಡು ದಿಕ್ಕುಗಳಿರುವ ಅಂತರವನ್ನು ಯೋಜನಪ್ರಮಾಣದಿಂದ ನಿರೂಪಿಸುವೆನು. ಆ ಪ್ರಮಾಣವು ಮೂವತ್ತೊಂದುಲಕ್ಷದ ಮೂರುಸಾವಿರದ

ತ್ರಯಸ್ತ್ರಿಂಶಾಧಿಕಾಶ್ಚಾನ್ಯೇ ತ್ರಯಸ್ತ್ರಿಂಶಚ್ಚ ಯೋಜನೈಃ ।
ಕಾಷ್ಠಯೋರಂತರಂ ಹ್ಯೇತದ್ಯೋಜನಾಗ್ರಾತ್ ಪ್ರತಿಷ್ಠಿತಂ ॥ ೧೩೨ ॥

ಕಾಷ್ಠಯೋರ್ಲೇಖಯೋಶ್ಚೈವ ಅಂತರೇ ದಕ್ಷಿಣೋತ್ತರೇ ।
ತೇ ತು ವಕ್ಷ್ಯಾಮಿ ಸಂಖ್ಯಾಯ ಯೋಜನೈಸ್ತನ್ನಿಬೋಧತ ॥ ೧೩೩ ॥

ಏಕೈಕಮಂತರಂ ತಸ್ಯಾ ನಿಯುತಾನ್ಯೇಕಸಪ್ತತಿಃ ।
ಸಹಸ್ರಾಣ್ಯತಿರಿಕ್ತಾಶ್ಚ ತತೋನ್ಯಾ ಪಂಚಸಪ್ತತಿಃ ॥ ೧೩೪ ॥

ಲೇಖಯೋಃ ಕಾಷ್ಠಯೋಶ್ಚೈವ ಬಾಹ್ಯಾಭ್ಯಂತರಯೋಃ ಸ್ಮೃತಂ ।
ಅಭ್ಯಂತರಂ ತು ಪರ್ಯೇತಿ ಮಂಡಲಾನ್ಯುತ್ತರಾಯಣೇ ॥ ೧೩೫ ॥

ಬಾಹ್ಯತೋ ದಕ್ಷಿಣೇ ಚೈವ ಸತತಂ ತು ಯಥಾಕ್ರಮಂ ।
ಮಂಡಲಾನಾಂ ಶತಂ ಪೂರ್ಣಮಶೀತ್ಯಧಿಕಮುತ್ತರಂ ॥ ೧೩೬ ॥

---

ಮುನ್ನೂರ ಮೂವತ್ತಮೂರು ಯೋಜನಗಳಾಗಿವೆ. ಈ ಪ್ರಮಾಣವೇ ದಿಕ್ಕುಗಳಿಗೆ ಯೋಜನಾಗ್ರದಿಂದ ಸಿದ್ಧವಾದ ಅಂತರವಾಗಿದೆ.

೧೩೩. ಈಗ ಎರಡು ದಿಕ್ಕುಗಳಿಗೂ ವಿಷುವದ್ವೃತ್ತ ಕ್ರಾಂತ ವೃತ್ತಗಳಿಗೂ ಯಾವ ದಕ್ಷಿಣೋತ್ತರ ಅಂತರವಿದೆಯೋ ಯೋಜನಕ್ರಮದಿಂದ ಅದನ್ನು ನಿರೂಪಿಸುವೆನು ಕೇಳಿರೆಂದನು.

೧೩೪. ಪರಸ್ಪರ ದಿಕ್ಕುಗಳಿಗೂ ವಿಷುವತ್ಕ್ರಾಂತ ವೃತ್ತಗಳಿಗೂ ಇರುವ ಅಂತರವು, ಎಪ್ಪತ್ತೊಂದುಲಕ್ಷದ ಎಪ್ಪತ್ತೈದುಸಾವಿರ ಯೋಜನಗಳಷ್ಟು ದೂರವಾಗಿದೆ.

೧೩೫. ಸೂರ್ಯನು ಉತ್ತರಾಯಣದಲ್ಲಿ ಉಭಯದಿಕ್ಕುಗಳು ವಿಷುವದ್ವೃತ್ತ ಕ್ರಾಂತವೃತ್ತಗಳು ಇವುಗಳ ಹೊರಗೂ ಮತ್ತು ಒಳಗೂ ಮಂಡಲಾಕಾರವಾಗಿ ಸಂಚರಿಸುವನು.

೧೩೬. ಸೂರ್ಯನು ದಕ್ಷಿಣದ ಹೊರಭಾಗದಲ್ಲಿ ಕ್ರಮವಾಗಿ ಎಂಟುನೂರು ಸುತ್ತನ್ನು ಸತತವಾಗಿಯೂ ಮಂಡಲಾಕಾರವಾಗಿಯೂ ತಿರುಗುವನೆಂದು ತಿಳಿಯಬೇಕು.

ಚರಕೇ ದಕ್ಷಿಣೇ ಚಾಪಿ ತಾವದೇವ ವಿಭಾವಸುಃ ।
ಪ್ರಮಾಣಂ ಮಂಡಲಸ್ಯಾಥ ಯೋಜನಾಗ್ರಾನ್ನಿಬೋಧತ ॥ ೧೩೭ ॥

ಏಕವಿಂಶದ್ಯೋಜನಾನಾಂ ಸಹಸ್ರಾಣಿ ಸಮಾಸತಃ ।
ಶತೇ ದ್ವೇ ಪುನರಪ್ಯನ್ಯೇ ಯೋಜನಾನಾಂ ಪ್ರಕೀರ್ತಿತೇ ॥ ೧೩೮ ॥

ಏಕವಿಂಶತಿಭಿಶ್ಚೈವ ಯೋಜನೈರಧಿಕೈರ್ಹಿ ತೇ ।
ಏತತ್ಪ್ರಮಾಣಮಾಖ್ಯಾತಂ ಯೋಜನೈರ್ಮಂಡಲಂ ಹಿ ತತ್ ॥ ೧೩೯ ॥

ವಿಷ್ಕಂಭೋ ಮಂಡಲಸ್ಯೈಷ ತಿರ್ಯಕ್ ಸ ತು ವಿಧೀಯತೇ ।
ಪ್ರತ್ಯಹಂ ಚರತೇ ತಾನಿ ಸೂರ್ಯೋ ವೈ ಮಂಡಲಕ್ರಮಂ ॥ ೧೪೦ ॥

ಕುಲಾಲಚಕ್ರಪರ್ಯಂತೋ ಯಥಾ ಶೀಘ್ರಂ ನಿವರ್ತತೇ ।
ದಕ್ಷಿಣೋ ಪಕ್ರಮೇ ಸೂರ್ಯಸ್ತಥಾ ಶೀಘ್ರಂ ನಿವರ್ತತೇ ॥ ೧೪೧ ॥

---

೧೩೭. ಸೂರ್ಯನು ದಕ್ಷಿಣಾಯನದಲ್ಲಿಯೂ ಕೂಡ ಅಷ್ಟೇ ಮಂಡಲಾಕಾರ ಪ್ರಮಾಣದಲ್ಲಿ ಸಂಚರಿಸುವನು. ಅವನು ಸುತ್ತುವ ಯೋಜನಪ್ರಮಾಣವನ್ನು ತಿಳಿಸುವೆನು ಕೇಳಿರಿ.

೧೩೮. ಸೂರ್ಯನು ಇಪ್ಪತ್ತೊಂದುಸಹಸ್ರದ ಇನ್ನೂರುಯೋಜನಗಳಷ್ಟು ಸಂಚರಿಸುವನೆಂದು ಸಂಕ್ಷೇಪವಾಗಿ ತಿಳಿಯಬಹುದು.

೧೩೯. ದಿಕ್ಕುಗಳು ವೃತ್ತಗಳ ಮಂಡಲವು ಇಪ್ಪತ್ತೊಂದು ಸಹಸ್ರಯೋಜನ ವಿಸ್ತಾರವಾಗಿದೆ. ಇನ್ನೂ ಸ್ವಲ್ಪ ಅಧಿಕವೂ ಆಗಿದೆಯೆಂದು ತಿಳಿಯಬೇಕು. ಈ ಮಂಡಲಾಕಾರವಾದ ಪ್ರಮಾಣವನ್ನು ಯೋಜನಳಿಂದ ತಿಳಿಸಿರುತ್ತದೆ.

೧೪೦. ಮಂಡಲದ ಸುತ್ತಳತೆಯೂ ಅಡ್ಡಳತೆಯೂ ಸಹ ಈರೀತಿಯಾಗಿದೆ ಯೆಂದು ತಿಳಿಯಬೇಕು. ಸೂರ್ಯನು ಪ್ರತಿನಿತ್ಯವೂ ಅವನ್ನು ಮಂಡಲಾಕಾರವಾಗಿ ತಿರುಗುವನು.

೧೪೧. ಕುಂಬಾರನ ಚಕ್ರದ ಅಂಚು ಅಂದರೆ ಅದರ ತುದಿಯ ಭಾಗವು ತಿರುಗುತ್ತಾ ಬೇಗನೆ ಹೇಗೆ ಸಮೀಪಕ್ಕೆ ಬರುತ್ತದೆಯೋ ಅದರಂತೆ ದಕ್ಷಿಣದಿಕ್ಕಿಗೆ ಹೋದಂತಹ ಸೂರ್ಯನು ಬೇಗನೇ ಹಿಂತಿರುಗಿ ಬರುವನು.

ತಸ್ಮಾತ್ ಪ್ರಕೃಷ್ಟಾಂ ಭೂಮಿಂ ಚ ಕಾಲೇನಾಲ್ಪೇನ ಗಚ್ಛತಿ ।
ಸೂರ್ಯೋ ದ್ವಾದಶಭಿಃ ಶೀಘ್ರಂ ಮುಹೂರ್ತೈರ್ದಕ್ಷಿಣೋತ್ತರೇ ॥ ೧೪೨ ॥

ತ್ರಯೋದಶಾರ್ಧಮೃಕ್ಷಾಣಾಮಹ್ನಾನುಚರತೇ ರವಿಃ ।
ಮುಹೂರ್ತೈಸ್ತಾವದೃಕ್ಷಾಣಿ ನಕ್ತಮಷ್ಟಾದಶೈಶ್ಚರ ॥ ೧೪೩ ॥

ಕುಲಾಲಚಕ್ರಮಧ್ಯಸ್ತು ಯಥಾ ಮಂದಂ ಪ್ರಸರ್ಪತಿ ।
ತಥೋದಗಯನೇ ಸೂರ್ಯಃ ಸರ್ಪತೇ ಮಂದವಿಕ್ರಮಃ ॥ ೧೪೪ ॥

ತ್ರಯೋದಶಾರ್ಧಮರ್ಧೇನ ಋಕ್ಷಾಣಾಂ ಚರತೇ ರವಿಃ ।
ತಸ್ಮಾದ್ದೀರ್ಘೇಣ ಕಾಲೇನ‡ಭೂಮಿಮಲ್ಪಾನಿ ಗಚ್ಛತಿ ॥ ೧೪೫ ॥

---

೧೪೨. ಆದುದರಿಂದ ಸೂರ್ಯನು ಅಲ್ಪಕಾಲದಲ್ಲಿಯೇ ಉತ್ತಮವಾದ ಭೂಮಿಯನ್ನು ಹೊಂದುವನು. ಸೂರ್ಯನು ಹನ್ನೆರಡುಮುಹೂರ್ತಗಳಲ್ಲಿಯೇ ದಕ್ಷಿಣದಿಂದ ಉತ್ತರಕ್ಕೂ ಉತ್ತರದಿಂದ ದಕ್ಷಿಣಕ್ಕೂ ಶೀಘ್ರವಾಗಿಯೇ ತಿರುಗಿ ಬರುವನು.

೧೪೩. ರವಿಯು ಹಗಲಲ್ಲಿ ಹದಿಮೂರೂವರೆ ನಕ್ಷತ್ರಗಳ ಪರ್ಯಂತವಾಗಿ ಸಂಚರಿಸುತ್ತಾನೆ. ರಾತ್ರಿಯ ವೇಳೆಯುಲ್ಲಿ ಹದಿನೆಂಟು ಮುಹೂರ್ತಗಳಲ್ಲಿ ಉಳಿದ ಹದಿಮೂರೂವರೆ ನಕ್ಷತ್ರಗಳವರೆಗೂ ಸಂಚರಿಸುವನು.

೧೪೪. ಕುಂಬಾರನ ಚಕ್ರವು ವೇಗವಾಗಿ ತಿರುಗಿದರೂಕೂಡ ಚಕ್ರದ ಮಧ್ಯ ಭಾಗವು ಮಾತ್ರ ನಿಧಾನವಾಗಿಯೇ ಚಲಿಸುವುದು. ಅದರಂತೆ ಉತ್ತರಾಯಣದಲ್ಲಿ ಅಲ್ಪ ಪರಿಕ್ರಮಿಯಾಗಿ ಮೆಲ್ಲಗೆ ಸಂಚರಿಸುವನು.

೧೪೫. ಸೂರ್ಯನು ಹದಿಮೂರೂವರೆ ನಕ್ಷತ್ರಗಳವರೆಗೂ ದೀರ್ಘಕಾಲದಿಂದ ಅಲ್ಪಭೂಮಿಯನ್ನು ಮೆಲ್ಲಗೆ ಸಂಚರಿಸುವನು. ಉತ್ತರಾಯಣದಲ್ಲಿ ಮಂದಗಾಮಿ ಯಾಗುವನು.

ಅಷ್ಟಾದಶಮುಹೂರ್ತೈಸ್ತು ಉತ್ತರಾಯಣಪಶ್ಚಿಮಂ ।
ಅಹರ್ಭವತಿ ತಚ್ಚಾಪಿ ಚರತೇ ಮಂದವಿಕ್ರಮಃ ॥ ೧೪೬ ॥

ತ್ರಯೋದಶಾರ್ಧಮರ್ಘೇನ ಋಕ್ಷಾಣಾಂ ಚರತೇ ರವಿಃ ।
ಮುಹೂರ್ತೈಸ್ತಾವದೃಕ್ಷಾಣಿ ನಕ್ತಾಮಷ್ಟಾದಶೈಶ್ಚರ‌ ॥ ೧೪೭ ॥

ತತೋ ಮಂದತರಂ ತಾಭ್ಯಾಂ ಚಕ್ರಂ ಭ್ರಮತಿ ವೈ ಯಥಾ ।
ಮೃತ್ಪಿಂಡ ಇವ ಮಧ್ಯಸ್ಥೋ ಧ್ರುವೋ ಭ್ರಮತಿ ವೈ ಯಥಾ ॥ ೧೪೮ ॥

ತ್ರಿಂಶನ್ಮುಹೂರ್ತಾನೇವಾಹುರಹೋರಾತ್ರಂ ಧ್ರುವೋ ಭ್ರಮನ್ ।
ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೋ ಮಂಡಲಾನಿ ಸಃ ॥ ೧೪೯ ॥

---

೧೪೬. ಉತ್ತರಾಯಣದಲ್ಲಿ ಸೂರ್ಯನು ಮಂದಪರಾಕ್ರಮಿಯಾಗಿ ಹದಿನೆಂಟು ಮುಹೂರ್ತಗಳವರೆಗೂ ಪೂರ್ವದಿಂದ ಪಶ್ಚಿಮಕ್ಕೆ ಹಗಲಲ್ಲಿ ನಿಧಾನವಾಗಿ ಸಂಚರಿಸುವನು ಉತ್ತರಾಯಣದಲ್ಲಿ ಅಹಸ್ಸು ಜಾಸ್ತಿಯಾಗಿರುವುದು.

೧೪೭. ಅದರಂತೆ ದಕ್ಷಿಣಾಯಣದ ರಾತ್ರಿಯ ಕಾಲದಲ್ಲಿ ಹದಿಮೂರೂವರೆ ನಕ್ಷತ್ರಗಳವರೆಗೂ ಹದಿನೆಂಟು ಮುಹೂರ್ತಗಳು ನಿಧಾನವಾಗಿ ಸೂರ್ಯನು ಸಂಚರಿಸುವನು.

೧೪೮. ಚಕ್ರದ ಅಂಚು ಮತ್ತು ಮಧ್ಯಭಾಗ ಇವೆರಡರಗಿಂತಲೂ ಚಕ್ರದ ಮಧ್ಯದಲ್ಲಿರುವ ಮಣ್ಣಿನ ಮುದ್ದೆಯು ಹೇಗೆ ಮೆಲ್ಲನೆ ಸುತ್ತುವದೋ ಅದರಂತೆಯೇ ಧ್ರುವಗತಿಯು ನಿಧಾನವಾಗಿರುವುದು.

೧೪೯. ಧ್ರುವನು ಅಹೋರಾತ್ರಿಗಳೆರಡರಲ್ಲಿಯೂ ಮೂವತ್ತು (ಮುಹೂರ್ತ) ಘಳಿಗೆಗಳವರೆಗೂ ಸಂಚರಿಸುವನು. ಉಭಯದಿಕ್ಕುಗಳ ಮಧ್ಯದಲ್ಲಿ ಮಂಡಲಾಕಾರವಾಗಿ ಸಂಚರಿಸುವನು.

ಕುಲಾಲಚಕ್ರನಾಭಿಸ್ತು ಯಥಾ ತತ್ರೈವ ವರ್ತತೇ ।
ಧ್ರುವಸ್ತಥಾ ಹಿ ವಿಜ್ಞೇಯಸ್ತತ್ರೈವ ಪರಿವರ್ತತೇ ॥ ೧೫೦ ॥

ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೇ ಮಂಡಲಾನಿ ತು ।
ದಿವಾ ನಕ್ತಂ ಚ ಸೂರ್ಯಸ್ಯ ಮಂದಾ ಶೀಘ್ರಾ ಚ ವೈ ಗತಿಃ ॥ ೧೫೧ ॥

ಉತ್ತರೇ ಪ್ರಕ್ರಮೇ ತ್ವಿಂದೋರ್ದಿವಾ ಮಂದಾ ಗತಿಃ ಸ್ಮೃತಾ ।
ತಥೈವ ಚ ಪುನರ್ನಕ್ತಂ ಶೀಘ್ರಾ ಸೂರ್ಯಸ್ಯ ವೈ ಗತಿಃ ॥ ೧೫೨ ॥

ದಕ್ಷಿಣೇ ಪ್ರಕ್ರಮೇ ಚೈವ ದಿವಾ ಶೀಘ್ರಂ ವಿಧೀಯತೇ ।
ಗತಿಃ ಸೂರ್ಯಸ್ಯ ನಕ್ತಂ ವೈ ಮಂದಾ ಚಾಪಿ ತಥಾ ಸ್ಮೃತಾ ॥ ೧೫೩ ॥

---

೧೫೦. ಕುಂಬಾರನ ಚಕ್ರದ ನಾಭಿದೇಶವು, ರಂಧ್ರಭಾಗವು ಅಲ್ಲಿಯೇ ಇದ್ದು ಹೇಗೆ ನಿಧಾನವಾಗಿ ಚಲಿಸುವುದೋ ಅದರಂತೆ ಜ್ಯೋತಿರ್ಗಣಗಳ ಮಧ್ಯಗತನಾದ ಧ್ರುವನು ತಾನಿದ್ದ ಜಾಗದಲ್ಲಿಯೇ ಮೆಲ್ಲಗೆ ಸಂಚರಿಸುವನು.

೧೫೧. ಉಭಯದಿಕ್ಕುಗಳ ಮಧ್ಯಭಾಗದಲ್ಲಿ ಮಂಡಲಾಕಾರವಾಗಿ ಸಂಚರಿಸುವ ಸೂರ್ಯನ ಗತಿಯು ಹಗಲಲ್ಲಿ ಮಂದವಾಗಿಯೂ ರಾತ್ರಿಯಲ್ಲಿ ಶೀಘ್ರವಾಗಿಯೂ ಇರುತ್ತದೆ.

೧೫೨. ಅದರ ಹಾಗೆಯೇ ಉತ್ತರಾಯಣದಲ್ಲಿ ಸಂಚರಿಸುವ ಚಂದ್ರನ ಸಂಚಾರವು, ಸೂರ್ಯನ ಹಾಗೆಯೇ ಹಗಲಿನಲ್ಲಿ ಮಂದವಾಗಿಯೂ ರಾತ್ರಿಯಲ್ಲಿ ಶೀಘ್ರವಾಗಿಯೂ ಇರುತ್ತದೆ.

೧೫೩. ದಕ್ಷಿಣಾಯನದಲ್ಲಿ ದಕ್ಷಿಣದಿಕ್ಕಿನಲ್ಲಿ ಸಂಚರಿಸುವ ಸೂರ್ಯನ ಗತಿಯು, ಹಗಲಿನಲ್ಲಿ ಬಹಳ ವೇಗವಾಗಿಯೂ ರಾತ್ರಿಯ ಕಾಲದಲ್ಲಿ ನಿಧಾನವಾಗಿಯೂ ಇರುತ್ತದೆಯೆಂದು ಕಾಲಜ್ಞರು ಹೇಳುವರು.

ಏವಂ ಗತಿವಿಶೇಷೇಣ ವಿಭಜನ್ ರಾತ್ರ್ಯಹಾನಿ ತು ।
ತಥಾ ವಿಚರತೇ ಮಾರ್ಗಂ ಸಮೇನ ವಿಷಮೇಣ ಚ ॥ ೧೫೪ ॥

ಲೋಕಾಲೋಕೇ ಸ್ಥಿತಾ ಯೇ ತೇ ಲೋಕಪಾಲಾಶ್ಚತುರ್ದಿಶಂ ।
ಅಗಸ್ತ್ಯಶ್ಚರತೇ ತೇಷಾಮುಪರಿಷ್ಟಾಜ್ಜವೇನ ತು ।
ಭಜನ್ನಸಾವಹೋರಾತ್ರಮೇವಂಗತಿವಿಶೇಷಣೈಃ ॥ ೧೫೫ ॥

ದಕ್ಷಿಣೇ ನಾಗವೀಥ್ಯಾಯಾಂ ಲೋಕಾಲೋಕಸ್ಯ ಚೋತ್ತರಂ ।
ಲೋಕಸಂತಾರಕೋ ಹ್ಯೇಷ ವೈಶ್ವಾನರಪಥಾದ್ಬಹಿಃ ॥ ೧೫೬ ॥

ಪೃಷ್ಠೇ ಯಾವತ್ ಪ್ರಭಾ ಸೌರೀ ಪುರಸ್ತಾತ್ ಸಂಪ್ರಕಾಶತೇ ।
ಪಾರ್ಶ್ವಯೋಃ ಪೃಷ್ಠತಸ್ತಾವಲ್ಲೋಕಾಲೋಕಸ್ಯ ಸರ್ವತಃ ॥ ೧೫೭ ॥

---

೧೫೪. ಹೀಗೆ ಸೂರ್ಯನು ಗತಿವಿಶೇಷದಿಂದ ರಾತ್ರಿಹಗಲುಗಳನ್ನು ವಿಭಾಗಿಸುತ್ತಾ ಸಮವಿಷಮಮಾರ್ಗವಾಗಿ ಸಂಚರಿಸುವನು. ಸಮವಿಷಮಮಾರ್ಗಗಳಿಂದ ಉತ್ತರಾಯಣ ದಕ್ಷಿಣಾಯನಗಳಾಗುವುವು.

೧೫೫. ಲೋಕಾಲೋಕಪರ್ವತದ ನಾಲ್ಕುದಿಕ್ಕುಗಳಲ್ಲಿಯೂ ಯಾವ ಲೋಕಪಾಲಕರು ವಾಸಮಾಡುತ್ತಾರೆಯೋ, ಅವರ ಮೇಲ್ಭಾಗದಲ್ಲಿ ಅಗಸ್ತ್ಯನು ಅತಿವೇಗವಾಗಿ ಸಂಚರಿಸುತ್ತಾನೆ. ಆ ಅಗಸ್ತ್ಯನೂ ಸಹ ತನ್ನ ಗಮನವಿಶೇಷದಿಂದ ಅಹೋರಾತ್ರಿಗಳನ್ನು ಏರ್ಪಡಿಸುತ್ತಾ ಸಂಚರಿಸುವನು.

೧೫೬. ಈ ಅಗಸ್ತ್ಯಮಹರ್ಷಿಯು ನಾಗವೀಥಿಯ ದಕ್ಷಿಣದಿಗ್ಭಾಗದಲ್ಲಿಯೂ ಲೋಕಾಲೋಕಪರ್ವತದ ಉತ್ತರದಲ್ಲಿಯೂ, ಅಗ್ನಿವೀಥಿಯ ಹೊರಭಾಗದಲ್ಲಿಯೂ ಇರುವ ಲೋಕಗಳನ್ನು ಸಂರಕ್ಷಿಸುತ್ತಾ ಇರುವನು.

೧೫೭. ಸೂರ್ಯನ ಪ್ರಭೆಯು, ಲೋಕಾಲೋಕಪರ್ವತದ ಹಿಂಭಾಗದಲ್ಲಿಯೂ, ಮುಂಭಾಗದಲ್ಲಿಯೂ, ಎರಡು ಪಕ್ಕಗಳಲ್ಲಿಯೂ, ಮತ್ತು ಸರ್ವತ್ರವೂ ಯಾವಾಗ ಬೀಳುವುದೋ ಆಗ ಆ ಪರ್ವತದ ಕೆಳಭಾಗವೆಲ್ಲವೂ ಪ್ರಕಾಶವಾನವಾಗಿರುವುದು.

**ಯೋಜನಾನಾಂ ಸಹಸ್ರಾಣಿ ದಶೋರ್ಧ್ವಂತೂಚ್ಛ್ರಿತೋ ಗಿರಿಃ ।**
**ಪ್ರಕಾಶಶ್ಚಾಪ್ರಕಾಶಶ್ಚ ಸರ್ವತಃ ಪರಿಮಂಡಲಃ ॥ ೧೫೮ ॥**

**ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹಾಸ್ತಾರಾಗಣೈಃ ಸಹ ।**
**ಅಭ್ಯಂತರಂ ಪ್ರಕಾಶಂತೇ ಲೋಕಾಲೋಕಸ್ಯ ವೈ ಗಿರೇಃ ॥ ೧೫೯ ॥**

**ಏತಾವಾನೇವ ಲೋಕಸ್ತು ನಿರಾಲೋಕಸ್ತ್ವತಃ ಪರಂ ।**
**ಲೋಕಾಲೋಕ ಏಕಧಾ ತು ನಿರಾಲೋಕಸ್ತ್ವನೇಕಧಾ ॥ ೧೬೦ ॥**

**ಲೋಕಾಲೋಕಂ ತು ಸಂಧತ್ತೇ ಯಸ್ಮಾತ್ ಸೂರ್ಯಃ ಪರಿಗ್ರಹಂ ।**
**ತಸ್ಮಾತ್ಸಂಧ್ಯೇತಿ ತಾಮಾಹುರುಷಾವ್ಯುಷ್ಟ್ಯೋರ್ಯದಂತರಂ ।**
**ಉಷಾ ರಾತ್ರಿಃ ಸ್ಮೃತಾ ವಿಪ್ರೈರ್ವ್ಯುಷ್ಟಿಶ್ಚಾಪಿ ತ್ವಹಃ ಸ್ಮೃತಂ ॥ ೧೬೧ ॥**

---

೧೫೮. ಆ ಲೋಕಾಲೋಕಪರ್ವತವು ಭೂಮಂಡಲಕ್ಕಿಂತಲೂ ಹತ್ತು ಸಾವಿರ ಯೋಜನಗಳಷ್ಟು ಎತ್ತರವಾಗಿರುತ್ತದೆ. ಆ ಪರ್ವತವು ಮಂಡಲದ ಸುತ್ತಲೂ ಪ್ರಕಾಶಾಪ್ರಕಾಶಕವಾಗಿಯೂ ಇರುತ್ತದೆ. ಕೆಲವು ಭಾಗ ಪ್ರಕಾಶಕವಾಗಿಯೂ ಕೆಲವು ಭಾಗ ಅಪ್ರಕಾಶಕವಾಗಿಯೂ ಇರುತ್ತದೆ.

೧೫೯. ಆ ಲೋಕಾಲೋಕಪರ್ವತದ ಮಧ್ಯಭಾಗದಲ್ಲಿ ನಕ್ಷತ್ರಗಳೂ ಸೂರ್ಯ ಚಂದ್ರರೂ, ಗ್ರಹಗಳೂ ಸಹ ಪ್ರಕಾಶಿಸುತ್ತವೆ. ಜ್ಯೋತಿರ್ಮಂಡಲಕ್ಕಿಂತಲೂ, ಆ ಗಿರಿಯು ಅತ್ಯುನ್ನತವಾಗಿದೆ.

೧೬೦. ಆ ಗಿರಿಯಲ್ಲಿ ಪ್ರಕಾಶಬೀಳುವ ಪ್ರದೇಶವೆಲ್ಲವೂ ಲೋಕವಾಗಿಯೂ ಪ್ರಕಾಶ ಬೀಳದ ಪ್ರದೇಶವೆಲ್ಲವೂ ಅಲೋಕವಾಗಿಯೂ, ಇರುತ್ತವೆ. ಲೋಕಾಲೋಕ ಪರ್ವತದ ಒಂದುಭಾಗವು ಲೋಕಾಲೋಕವಾಗಿಯೂ, ಅನೇಕ ಭಾಗಗಳು ನಿರಾಲೋಕ ವಾಗಿಯೂ ಇರುತ್ತವೆ.

೧೬೧. ಸೂರ್ಯನು ಪ್ರಾತಃಕಾಲ, ಸಾಯಂಕಾಲವೆಂಬ ಎರಡು ಕಾಲ ಗಳಲ್ಲಿಯೂ ಲೋಕಾಲೋಕಪರ್ವತವನ್ನು ಸಂಧಿಸುತ್ತಾನೆ. ಅಂತಹ ಹಗಲು ರಾತ್ರಿಯ ಸಂಧಿಕಾಲಕ್ಕೆ ಸಂಧ್ಯಾಕಾಲವೆಂದು ಹೆಸರು. ಉಷಾ ಎಂದರೆ ರಾತ್ರಿಯು. ವ್ಯುಷ್ಟಿ ಯೆಂದರೆ ಹಗಲು. ಇವುಗಳ ಸಂಬಂಧವೇ ಸಂಧ್ಯಾಕಾಲವು.

ಸೂರ್ಯಂ ಹಿ ಗ್ರಸಮಾನಾನಾಂ ಸಂಧ್ಯಾಕಾಲೇ ಹಿ ರಕ್ಷಸಾಂ ।
ಪ್ರಜಾಪತಿನಿಯೋಗೇನ ಶಾಪಸ್ತೇಷಾಂ ದುರಾತ್ಮನಾಂ ।
ಅಕ್ಷಯತ್ವಂ ಚ ದೇಹಸ್ಯ ಪ್ರಾಪಿತಾ ಮರಣಂ ತಥಾ ॥ ೧೬೨ ॥

ತಿಸ್ರಃ ಕೋಟ್ಯಸ್ತು ವಿಖ್ಯಾತಾ ಮಂದೇಹಾ ನಾಮ ರಾಕ್ಷಸಾಃ ।
ಪ್ರಾರ್ಥಯಂತಿ ಸಹಸ್ರಾಂಶುಮುದಯಂತಿ ದಿನೇ ದಿನೇ ।
ತಾಪಯಂತೋ ದುರಾತ್ಮಾನಃ ಸೂರ್ಯಮಿಚ್ಛಂತಿ ಖಾದಿತುಂ ॥ ೧೬೩ ॥

ಅಥ ಸೂರ್ಯಸ್ಯ ತೇಷಾಂ ಚ ಯುದ್ಧಸ್ಯಾಸೀತ್ ಸುದಾರುಣಂ ।
ತತೋ ಬ್ರಹ್ಮಾ ಚ ದೇವಾಶ್ಚ ಬ್ರಾಹ್ಮಣಾಶ್ಚೈವ ಸತ್ತಮಾಃ ।
ಸಂಧ್ಯೇತಿ ಸಮುಪಾಸಂತಃ ಕ್ಷೇಪಯಂತಿ ಮಹಾಜಲಂ ॥ ೧೬೪ ॥

ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಂ ।
ತೇನ ದಹ್ಯಂತಿ ತೇ ದೈತ್ಯಾ ವಜ್ರಭೂತೇನ ವಾರಿಣಾ ॥ ೧೬೫ ॥

---

೧೬೨. ಸೂರ್ಯನನ್ನು ಸಂಧ್ಯಾಕಾಲಗಳಲ್ಲಿ ನುಂಗಲು ಬಂದಂಥ ದುರಾತ್ಮರೂ ಮಂದೇಹನಾಮಕರೂ ಆದ ರಾಕ್ಷಸರಿಗೆ ಬ್ರಹ್ಮದೇವನು ಈ ರೀತಿಯಾಗಿ ಶಾಪವನ್ನು ಕೊಟ್ಟಿರುವನು. "ನಿಮ್ಮ ಶರೀರವು ಅಕ್ಷಯವನ್ನೂ ನಾಶವನ್ನೂ ಹೊಂದಲಿ." ಅಂದರೆ ನೀವು ಸಾಯಿರಿ ಮತ್ತು ಬದುಕಿರಿ ಎಂಬ ಶಾಪವನ್ನು ಕೊಟ್ಟನು.

೧೬೩. ಆ ಮಂದೇಹನಾಮಕರಾದ ರಾಕ್ಷಸರು ಮೂರು ಕೋಟಿಗಳಿರುವರು. ಅವರು ದುರಾತ್ಮರೂ ಪ್ರಖ್ಯಾತರೂ ಆಗಿರುವರು. ಅವರು ಸೂರ್ಯದೇವನನ್ನು ಪ್ರತಿದಿವಸದಲ್ಲಿಯೂ ಉದಯಿಸುವಂತೆ ಪ್ರಾರ್ಥಿಸುವರು. ಮತ್ತು ಲೋಕವನ್ನು ತಾಪಗೊಳಿಸುವರು. ಸೂರ್ಯನನ್ನು ನುಂಗಲು ಇಚ್ಛಿಸುವರು.

೧೬೪-೧೬೫. ಅನಂತರ ಸೂರ್ಯನಿಗೂ ಆ ರಾಕ್ಷಸರಿಗೂ ಅತಿಭಯಂಕರವಾದ ಯುದ್ಧವು ಸಂಭವಿಸುವುದು. ಅನಂತರ ಬ್ರಹ್ಮದೇವನು ದೇವೋತ್ತಮರಿಂದಲೂ ಬ್ರಾಹ್ಮಣೋತ್ತಮರಿಂದಲೂ, ಕೂಡಿ ಸಂಧ್ಯಾವಂದನೆಯನ್ನು ಮಾಡುವಾಗ ಮಹಾ ಜಲವನ್ನು ಅರ್ಘ್ಯಪ್ರದಾನ ಮಾಡುವರು. ಆ ಅರ್ಘ್ಯವನ್ನು ಕೊಡುವಾಗ ಓಂಕಾರ ನಾಮಕ ಬ್ರಹ್ಮನನ್ನು ಸ್ಮರಿಸಿ ಗಾಯಿತ್ರೀದೇವಿಯನ್ನು ಅಭಿಮಂತ್ರಿಸಿ ಅರ್ಘ್ಯವನ್ನು ಕೊಡುವರು. ಅರ್ಘ್ಯೋದಕವು ವಜ್ರಭೂತವಾಗಿ ಆ ರಾಕ್ಷಸರನ್ನು ದಹಿಸುವದು.

ತತಃ ಪುನರ್ಮಹಾತೇಜಾ ಮಹಾದ್ಯುತಿಪರಾಕ್ರಮಃ ।
ಯೋಜನಾನಾಂ ಸಹಸ್ರಾಣಿ ಊರ್ಧ್ವಮುತ್ತಿಷ್ಠತೇ ಶತಂ ॥ ೧೬೬ ॥

ತತಃ ಪ್ರಯಾತಿ ಭಗವಾನ್ ಬ್ರಾಹ್ಮಣೈಃ ಪರಿವಾರಿತಃ ।
ವಾಲಖಿಲ್ಯೈಶ್ಚ ಮುನಿಭಿಃ ಕೃತಾರ್ಥೈಃ ಸಮರೀಚಿಭಿಃ ॥ ೧೬೭ ॥

ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶಚ್ಚ ಕಾಷ್ಠಾ ಗಣಯೇತ್ ಕಲಾಂತಂ ।
ತ್ರಿಂಶತ್ ಕಲಾಶ್ಚೈವ ಭವೇನ್ಮುಹೂರ್ತ-
ಸ್ತೈಸ್ತ್ರಿಂಶತಾ ರಾತ್ರ್ಯಹನೀ ಸಮೇತೇ ॥ ೧೬೮ ॥

ಹ್ರಾಸವೃದ್ಧೀ ತ್ವಹರ್ಭಾಗೈರ್ದಿವಸಾನಾಂ ಯಥಾಕ್ರಮಂ ।
ಸಂಧ್ಯಾ ಮುಹೂರ್ತಮಾನಂ ತು ಹ್ರಾಸೇ ವೃದ್ಧೌ ಸಮಾ ಸ್ಮೃತಾ ॥ ೧೬೯ ॥

---

೧೬೬. ಅನಂತರ ಮಹಾತೇಜಸ್ವಿಯೂ ಮಹಾಕಾಂತಿ ಪರಾಕ್ರಮ ಇವುಗಳುಳ್ಳವನೂ ಆದ ಸೂರ್ಯದೇವನು ಪುನಃ ಉದಯಿಸಿ, ಒಂದುಲಕ್ಷ ಯೋಜನಗಳಷ್ಟು ಮೇಲಕ್ಕೆ ಎದ್ದು ವೃದ್ಧಿಯನ್ನು ಹೊಂದಿ ಪ್ರಜ್ವಲಿಸುವನು.

೧೬೭. ಸೂರ್ಯದೇವನು ಆ ದಿನ ಮೊದಲುಗೊಂಡು ಪ್ರತಿದಿನವಲ್ಲಿಯೂ, ಬ್ರಾಹ್ಮಣರಿಂದಲೂ, ವಾಲಖಿಲ್ಯರೇ ಮೊದಲಾದ ಮುನಿಗಳಿಂದಲೂ, ಕೃತಾರ್ಥರಾದ ಮರೀಚಿ ಮಹರ್ಷಿಗಳಿಂದಲೂ, ಕೂಡಿ ಹೊರಡುವನು.

೧೬೮. ಹದಿನೈದು ನಿಮಿಷಗಳು ಒಂದು ಕಾಷ್ಠೆಯಾಗುವುದು. ಅಂತಹ ಮೂವತ್ತು ಕಾಷ್ಠಗಳು ಒಂದು ಕಲೆಯಾಗುವುದು. ಮೂವತ್ತು ಕಲೆಗಳು ಒಂದು ಮುಹೂರ್ತವೂ, ಆ ಮೂವತ್ತು ಮುಹೂರ್ತಗಳು ಒಂದು ರಾತ್ರಿಹಗಲೂ ಅಂದರೆ ಒಂದು ದಿವಸವೂ ಆಗುತ್ತವೆ.

೧೬೯. ದಿವಸಗಳು, ಅಹೋರಾತ್ರಿಗಳ ಭಾಗಗಳಿಂದ ಯಥಾಕ್ರಮವಾಗಿ ಹ್ರಾಸವೃದ್ಧಿಗಳನ್ನು ಹೊಂದುತ್ತವೆ. ಹೀಗೆ ಅಹೋರಾತ್ರಿಗಳು ಹ್ರಾಸವೃದ್ಧಿಯಾದರೂ ಕೂಡ ಸಂಧ್ಯಾ ಮುಹೂರ್ತಕಾಲವು ಮಾತ್ರ ಒಂದೇ ಸಮವಾಗಿರುತ್ತದೆ. ಅದು ಮಾತ್ರ ಹೆಚ್ಚುಕಡಿಮೆಯಾಗುವುದಿಲ್ಲ.

ಲೇಖಾಪ್ರಭೃತ್ಯಥಾದಿತ್ಯೇ ತ್ರಿಮುಹೂರ್ತಾ ಗತೇ ತು ವೈ ।
ಪ್ರಾತಸ್ತನಃ ಸ್ಮೃತಾ ಕಾಲೋ ಭಾಗಸ್ತ್ವಹ್ನಃ ಸ ಪಂಚಮಃ ॥ ೧೭೦ ॥

ತಸ್ಮಾತ್ ಪ್ರಾತಸ್ತನಾತ್ಕಾಲಾತ್ ತ್ರಿಮುಹೂರ್ತಸ್ತು ಸಂಗವಃ ।
ಮಧ್ಯಾಹ್ನಸ್ತ್ರಿಮುಹೂರ್ತಸ್ತು ತಸ್ಮಾತ್ಕಾಲಾಚ್ಚ ಸಂಗವಾತ್ ॥ ೧೭೧ ॥

ತಸ್ಮಾನ್ಮಧ್ಯಂದಿನಾತ್ ಕಾಲಾದಪರಾಹ್ಣ ಇತಿ ಸ್ಮೃತಃ ।
ತ್ರಯ ಏವ ಮುಹೂರ್ತಾಸ್ತು ತಸ್ಮಾತ್ ಕಾಲಾಚ್ಚ ಮಧ್ಯಮಾತ್ ॥ ೧೭೨ ॥

ಅಪರಾಹ್ಣೇ ವ್ಯತೀಪಾತೇ ಕಾಲಃ ಸಾಯಾಹ್ನ ಉಚ್ಯತೇ ।
ದಶ ಪಂಚಮುಹೂರ್ತಾದ್ವೈ ಮುಹೂರ್ತಾಸ್ತ್ರಯ ಏವ ಚ ॥ ೧೭೩ ॥

ದಶ ಪಂಚಮುಹೂರ್ತಂ ವೈ ಅಹರ್ವಿಷುವತಿ ಸ್ಮೃತಂ ।
ದಶ ಪಂಚಮುಹೂರ್ತಾ ದ್ವೈ ರಾತ್ರಿಂದಿವಮಿತಿ ಸ್ಮೃತಂ ॥ ೧೭೪ ॥

---

೧೭೦. ಸೂರ್ಯನು ಕ್ರಾಂತವೃತ್ತದಿಂದ ಮೂರು ಮುಹೂರ್ತಗಳಲ್ಲಿದ್ದರೆ ಪ್ರಾತಃಕಾಲವಾಗುವುದು. ಅಂತಹ ಭಾಗಗಳು ಒಂದು ಅಹಸ್ಸಿನಲ್ಲಿ ಐದು ಇರುತ್ತದೆ. ಹದಿನೈದು ಮುಹೂರ್ತಗಳಾದರೆ ಒಂದು ಹಗಲಾಗುವುದು.

೧೭೧-೧೭೩. ಅಂತಹ ಪ್ರಾತಃಕಾಲದಿಂದ ಮೂರು ಮುಹೂರ್ತವಾದರೆ ಸಂಗವಕಾಲವೂ ಅದರಿಂದ ಮೂರು ಮುಹೂರ್ತಗಳು ಕಳೆದರೆ ಮಧ್ಯಾಹ್ನವೂ, ಆ ಮಧ್ಯಾಹ್ನದ ಮೂರು ಮುಹೂರ್ತಗಳು ಅತಿಕ್ರಾಂತವಾದರೆ ಅಪರಾಹ್ಣವೂ ಅದೂ ಕಳೆದರೆ ಸಾಯಾಹ್ನವೂ, ಆಗುವುವು. ಹೀಗೆ ಹದಿನೈದು ಮುಹೂರ್ತಗಳಿಂದ ಒಂದು ಹಗಲಾಗುವುದು.

೧೭೪. ಹದಿನೈದು ಮುಹೂರ್ತಗಳು ಹಗಲಲ್ಲಿದ್ದರೆ ಆ ಅಹಸ್ಸಿಗೆ ವಿಷುವದಹಸ್ಸೆಂದು ನಾಮವು ಪ್ರಾಪ್ತವಾಗುವುದು. ಹೀಗೆ ಹದಿನೈದು ಮುಹೂರ್ತಗಳಿಂದ ಹಗಲೂ, ಹದಿನೈದು ಮುಹೂರ್ತಗಳಿಂದ ರಾತ್ರಿಯೂ ಆಗುತ್ತವೆ.

**ವರ್ಧತೇ ಹ್ರಸತೇ ಚೈವ ಅಯನೇ ದಕ್ಷಿಣೋತ್ತರೇ ।**
**ಅಹಸ್ತು ಗ್ರಸತೇ ರಾತ್ರಿಂ ರಾತ್ರಿಸ್ತು ಗ್ರಸತೇ ತ್ವಹಃ ॥ ೧೭೫ ॥**

**ಶರದ್ವಸಂತಯೋರ್ಮಧ್ಯೇ ವಿಷುವಂತದ್ವಿಭಾವ್ಯತೇ ।**
**ಅಹೋರಾತ್ರಂ ಕಲಾಶ್ಚೈವ ಸಪ್ತ ಸೋಮಃ ಸಮಶ್ನುತೇ ॥ ೧೭೬ ॥**

**ತಥಾ ಪಂಚದಶಾಹಾನಿ ಪಕ್ಷ ಇತ್ಯಭಿಧೀಯತೇ ।**
**ದ್ವೌ ಪಕ್ಷೌ ಚ ಭವೇನ್ಮಾಸೋ ದ್ವೌ ಮಾಸಾವಂತರಾವೃತುಃ ।**
**ಋತುತ್ರಯಮಯನಂ ಸ್ಯಾದ್ವೇಯನೇ ವರ್ಷಮುಚ್ಯತೇ ॥ ೧೭೭ ॥**

**ನಿಮೇಷಾದಿಕೃತಃ ಕಾಲಃ ಕಾಷ್ಠಾಯಾ ದಶ ಪಂಚ ಚ ।**
**ಕಾಲಾಯಾ ಸ್ತ್ರಿಂಶತಃ ಕಾಷ್ಠಾ ಮಾತ್ರಾಶೀತಿದ್ವಯಾತ್ಮಿಕಾ ॥ ೧೭೮ ॥**

---

೧೭೫. ದಕ್ಷಿಣಾಯನ ಉತ್ತರಾಯಣಗಳಲ್ಲಿ ಅಹೋರಾತ್ರಿಗಳು ವೃದ್ಧಿಹ್ರಾಸವಾಗುತ್ತವೆ. ಉತ್ತರಾಯಣದಲ್ಲಿ ಹಗಲು ರಾತ್ರಿಯನ್ನೂ, ದಕ್ಷಿಣಾಯನದಲ್ಲಿ ರಾತ್ರಿಯು ಹಗಲನ್ನೂ ಗ್ರಾಸಮಾಡುತ್ತವೆ. ಅಂದರೆ ಉತ್ತರಾಯಣದಲ್ಲಿ ಹಗಲು ಅಧಿಕವಾಗಿಯೂ, ರಾತ್ರಿಯು ಕಡಮೆಯಾಗಿಯೂ, ದಕ್ಷಿಣಾಯನದಲ್ಲಿ ರಾತ್ರಿಯು ವೃದ್ಧಿಯಾಗಿಯೂ, ಹಗಲು ಹ್ರಾಸವಾಗಿಯೂ ಇರುತ್ತವೆ.

೧೭೬. ಶರದ್ವಸಂತಗಳ ಮಧ್ಯದಲ್ಲಿ ವಿಷುವದ್ವೃತ್ತವು ಉಂಟಾಗುವುದು. ಆಗ ಚಂದ್ರನು ಅಹೋರಾತ್ರಿಗಳನ್ನೂ ಸಪ್ತಕಲೆಗಳನ್ನೂ ಭಕ್ಷಿಸುವನು.

೧೭೭. ಹದಿನೈದು ದಿವಸಗಳು ಒಂದು ಪಕ್ಷವಾಗುವುದು. ಎರಡೆರಡು ಪಕ್ಷಗಳು ಒಂದೊಂದು ಮಾಸವಾಗುವುವು. ಎರಡು ಮಾಸಗಳು ಒಂದು ಋತುವೂ, ಮೂರು ಋತುಗಳು ಒಂದು ಅಯನವೂ, ಎರಡು ಅಯನಗಳು ಒಂದು ವರ್ಷವೂ, ಆಗುವುವು.

೧೭೮. ನಿಮೇಷಾದಿಗಳಿಂದ ಕಾಲವು ಉಂಟಾಗಿದೆ. ಹದಿನೈದು ಕಾಷಗಳಾದರೆ ಒಂದು ಕಾಲವೂ, ಮೂವತ್ತು ಕಲೆಗಳು ಒಂದು ಕಾಷ್ಠವೂ, ಅಥವಾ ನೂರ ಎಂಬತ್ತು ಮಾತ್ರೆಗಳಾದರೆ. ಒಂದು ಕಾಷ್ಠೆಯೂ ಆಗುತ್ತದೆ.

ಶತಷ್ಕೈಕೋನಕಾಸ್ತ್ರಿಂಶನ್ಮಾತ್ರಾ ತ್ರಿಂಶಶ್ ಷಡುತ್ತರಾ ।
ದ್ವಿಷಷ್ಟಿಭಾಕ್ ತ್ರಯೋವಿಂಶನ್ಮಾತ್ರಾಯಾಂ ಚ ಚಲಾ ಭವೇತ್ ॥ ೧೭೯ ॥

ಚತ್ವಾರಿಂಶತ್ ಸಹಸ್ರಾಣಿ ಶತಾನ್ಯಷ್ಟೌ ಚ ವಿದ್ಯುತಿಃ ।
ಸಪ್ತತಿಂ ಚಾಪಿ ತತ್ರೈವ ನವತಿಂ ವಿದ್ಧಿ ನಿಶ್ಚಯೇ ॥ ೧೮೦ ॥

ಚತ್ವಾರ್ಯೇವ ಶತಾನ್ಯಾಹುರ್ವಿದ್ಯುತೌ ವೈಧಸಂಯುಗೇ ।
ಚರಾಂಶೋ ಹ್ಯೇಷ ವಿಜ್ಞೇಯೋ ನಾಡಿಕಾ ಚಾತ್ರ ಕಾರಣಂ ॥ ೧೮೧ ॥

ಸಂವತ್ಸರಾದಯಃ ಪಂಚ ಚತುರ್ಮಾನ ವಿಕಲ್ಪಿತಾಃ ।
ನಿಶ್ಚಯಃ ಸರ್ವಕಾಲಸ್ಯ ಯುಗ ಇತ್ಯಭಿಧೀಯತೇ ॥ ೧೮೨ ॥

---

೧೭೯. ಎರಡುಸಾವಿರವ ಒಂಭೈನೂರ ಮಾತ್ರೆಗಳು ಅಥವಾ ಎರಡುಸಾವಿರದ ಮುನ್ನೂರ ಅರವತ್ತೆರಡು ಮಾತ್ರೆಗಳಿಗೆ ಚಲಿ ಎಂಬ ನಾಮವು ಪ್ರಾಪ್ತವಾಗಿದೆ.

೧೮೦. ನಲವತ್ತುಸಾವಿರದ ಎಂಟನೂರ ಎಪ್ಪತ್ತು ಮಾತ್ರೆಗಳಿಗೆ ಅಥವಾ ನಾಲ್ಕುಸಾವಿರದ ಎಂಟುನೂರ ತೊಂಭತ್ತು ಮಾತ್ರೆಗಳಿಗೆ ವೈದ್ಯುತಿ ಎಂಬ ಸಂಜ್ಞೆಯೂ ಬಂದಿರುತ್ತದೆ.

೧೮೧. ವೈದ್ಯುತಿಗೆ ವೇದಸಂಬಂಧದಲ್ಲಿ ನಾನೂರು ಸಂಖ್ಯೆಗಳನ್ನೇ ಹೇಳುತ್ತಾರೆ. ಅದರಲ್ಲಿ ಚರಾಂಶಗಳೇ ಮುಖ್ಯಗಳಾಗಿವೆ. ಇದರಲ್ಲಿಯೂ ನಾಡಿಗಳೇ ಮುಖ್ಯಕಾರಣಗಳಾಗಿವೆ.

೧೮೨. ಚತುಃಪ್ರಮಾಣಗಳಿಂದ ಕಲ್ಪಿತವಾದ ಐದು ಸಂವತ್ಸರಾದಿಗಳು ಲೋಕವಿಖ್ಯಾತವಾಗಿವೆ. ಯಾವುದು ಸರ್ವಕಾಲಗಳಿಗೂ ನಿಶ್ಚಾಯಕವಾಗಿದೆಯೋ ಅದಕ್ಕೆ ಯುಗವೆಂಬ ಸಂಖ್ಯೆಯು ವಿಧಿಸಲ್ಪಟ್ಟಿದೆ.

ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ।
ಇದ್ವತ್ಸರಸ್ತೃತೀಯಸ್ತು ಚತುರ್ಥಶ್ಚಾನುವತ್ಸರಃ ।
ಪಂಚಮೋ ವತ್ಸರಸ್ತೇಷಾಂ ಕಾಲಸ್ತು ಪರಿಸಂಜಿತಃ ॥ ೧೮೩ ॥

ವಿಂಶಶತಂ ಭವೇತ್ಪೂರ್ಣಂ ಪರ್ವಣಾಂ ತು ರವೇರ್ಯುಗಂ ।
ಏತಾನ್ಯಷ್ಟಾದಶಸ್ತ್ರಿಂಶದುದಯೋ ಭಾಸ್ಕರಸ್ಯ ಚ ॥ ೧೮೪ ॥

ಋತವಸ್ತ್ರಿಂಶತಃ ಸೌರಾ ಅಯನಾನಿ ದಶೈವ ತು ।
ಪಂಚತ್ರಿಂಶತ್ ಶತಂ ಚಾಪಿ ಷಷ್ಟಿರ್ಮಾಸಾಶ್ಚ ಭಾಸ್ಕರಃ ॥ ೧೮೫ ॥

ತ್ರಿಂಶದೇವ ತ್ವಹೋರಾತ್ರಂ ಸ ತು ಮಾಸಶ್ಚ ಭಾಸ್ಕರಃ ।
ಏಕಷಷ್ಟಿಸ್ತ್ವಹೋರಾತ್ರಾ ದನುರೇಕೋ ವಿಭಾವ್ಯತೇ ॥ ೧೮೬ ॥

---

೧೮೩. ಆ ಐದರಲ್ಲಿ ಮೊದಲನೆಯದು ಸಂವತ್ಸರವು. ಎರಡನೆಯದು ಪರಿವತ್ಸರವು, ಮೂರನೆಯದು ಇದ್ವತ್ಸರವು, ನಾಲ್ಕನೆಯದು ಅನುವತ್ಸರವು, ಐದನೆಯದು ವತ್ಸರವೂ ಆಗಿವೆ. ಅವುಗಳ ಕಾಲಕ್ಕೆ "ಪರಿ" ಎಂಬ ಸಂಕೇತನಾಮವು ಜ್ಯೋತಿಶ್ಶಾಸ್ತ್ರಸಿದ್ಧವಾಗಿದೆ.

೧೮೪. ಎರಡುಸಾವಿರ ಪರ್ವಗಳು ಪೂರ್ಣವಾದರೆ ಸೂರ್ಯನಿಗೆ ಒಂದು ಯುಗವು. ಇಂತಹ ಯುಗಗಳು ಒಂದು ಸಾವಿರದ ಎಂಟನೂರು ಮೂವತ್ತಾದರೆ ಭಾಸ್ಕರನಿಗೆ ಒಂದು ಉದಯವಾಗುವುದು.

೧೮೫. ಮೇಲೆ ನಿರೂಪಿಸಿದ ಐದು ವರ್ಷಗಳಿಗೆ ಮೂವತ್ತು ಋತುಗಳೂ ಹತ್ತು ಅಯನಗಳೂ, ಮೂರುಸಾವಿರದ ಐದನೂರು ಅಹೋರಾತ್ರಿಗಳೂ ಅರವತ್ತು ಮಾಸಗಳೂ ಸೂರ್ಯನಿಗೆ ಆಗುವುವು.

೧೮೬. ಮೂವತ್ತು ಅಹೋರಾತ್ರಿಗಳು ಕೂಡಿದರೆ ಸೂರ್ಯನಿಗೆ ಒಂದು ಮಾಸವಾಗುವುದು. ಅರವತ್ತೊಂದು ಅಹೋರಾತ್ರಿಗಳಿಗೆ ಒಂದು "ದನು" ಎಂಬ ಸಂಜ್ಞೆಯು ಬರುವುದು.

ಅಹ್ನಾಂ ತು ತ್ರ್ಯಧಿಕಾಶೀತಿಃ ಶತಂ ಚಾಪ್ಯಧಿಕಂ ಭವೇತ್ ।
ಮಾನಂತಚ್ಚಿತ್ರಭಾನೋಸ್ತು ವಿಜ್ಞೇಯಂ ಭುವನಸ್ಯ ತು ॥ ೧೫೭ ॥

ಸೌರಸೌಮ್ಯಂ ತು ವಿಜ್ಞೇಯಂ ನಕ್ಷತ್ರಂ ಸಾವನಂ ತಥಾ ।
ನಾಮಾನ್ಯೇತಾನಿ ಚತ್ವಾರಿ ಯೈಃ ಪುರಾಣಂ ವಿಭಾವ್ಯತೇ ॥ ೧೫೮ ॥

ಶ್ವೇತಸ್ಯೋತ್ತರತಶ್ಚೈವ ಶೃಂಗವಾನ್ನಾಮ ಪರ್ವತಃ ।
ತ್ರೀಣಿ ತಸ್ಯ ತು ಶೃಂಗಾಣಿ ಸ್ಪೃಶಂತೀವ ನಭಸ್ತಲಂ ॥ ೧೫೯ ॥

ತೈಶ್ಚಾಪಿ ಶೃಂಗವಾನ್ನಾಮ ಸರ್ವತಶ್ಚೈವ ವಿಶ್ರುತಃ ।
ಏಕಮಾರ್ಗಶ್ಚ ವಿಸ್ತಾರೋ ವಿಷ್ಕಂಭಶ್ಚಾಪಿ ಕೀರ್ತಿತಃ ॥ ೧೬೦ ॥

ತಸ್ಯ ವೈ ಸರ್ವತಃ ಶೃಂಗಂ ಮಧ್ಯಮಂತದ್ಧಿರಣ್ಮಯಂ ।
ದಕ್ಷಿಣಂ ರಾಜತಂ ಚೈವ ಶೃಂಗಂ ತು ಸ್ಫಟಿಕಪ್ರಭಂ ॥ ೧೬೧ ॥

---

೧೫೭. ಒಂಭೈನೂರು ಮೂವತ್ತು ದನುಗಳು ಸೂರ್ಯನಿಗೂ ಮತ್ತು ಭುವನಕ್ಕೂ ಪ್ರಮಾಣವಾಗಿದೆಯೆಂದು ತಿಳಿಯಬೇಕು.

೧೫೮. ಪುರಾಣಗಳಲ್ಲಿ ಸೌರಮಾನ, ಚಾಂದ್ರಮಾನ, ನಕ್ಷತ್ರಮಾನ ಮತ್ತು ಸಾವನಮಾನವೆಂದು ನಾಲ್ಕು ನಾಮಗಳು ಪ್ರಸಿದ್ಧವಾಗಿದೆಯೆಂದು ತಿಳಿಯಬೇಕು.

೧೫೯. ಮೇರುವಿನ ಉತ್ತರಭಾಗದಲ್ಲಿ ಗಗನಚುಂಬಿಯಾದ ಶೃಂಗವಂತ ವೆಂಬ ಪರ್ವತವು ಪ್ರಖ್ಯಾತವಾಗಿದೆ. ಅದಕ್ಕೆ ಮೂರು ಎತ್ತರವಾದ ಶಿಖರಗಳಿವೆ. ಅವು ಆಕಾಶವನ್ನು ಮುಟ್ಟುವಂತಿವೆ.

೧೬೦. ಆ ಶಿಖರಗಳಿಂದ ಆ ಶೃಂಗವಂತಗಿರಿಯು ಸರ್ವಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ. ಆ ಶೃಂಗವಂತಪರ್ವತಕ್ಕೆ ಒಂದೇ ಮಾರ್ಗವಿರುವುದು. ಅದರ ವಿಸ್ತಾರವೂ ಸುತ್ತಳತೆಯೂ ಪುರಾಣಪ್ರಖ್ಯಾತವಾಗಿರುವುದು.

೧೬೧. ಆ ಪರ್ವತಕ್ಕೆ ಸರ್ವಭಾಗಗಳಲ್ಲಿಯೂ ಶೃಂಗಗಳಿವೆ. ಮಧ್ಯದ ಶಿಖರವು ಸುವರ್ಣಮಯವಾಗಿರುವುದು. ದಕ್ಷಿಣಭಾಗದ ಶಿಖರವು ರಜತಮಯ ವಾಗಿರುವುದು ಮತ್ತು ಸ್ಫಟಿಕಮಣಿಯಂತೆ ಹೊಳೆಯುವುದು.

**ಸರ್ವರತ್ನಮಯಂ ಚೈಕಂ ಶೃಂಗಮುತ್ತರಮುತ್ತಮಂ ।**
**ಏವಂ ಕೂಟೈಸ್ತ್ರಿಭಿಃ ಶೈಲೈಃ ಶೃಂಗವಾನಿತಿ ವಿಶ್ರುತಃ ॥ ೧೯೨ ॥**

**ಯತ್ತದ್ವಿಷುವತಂ ಶೃಂಗಂ ತದರ್ಕಃ ಪ್ರತಿಪದ್ಯತೇ ।**
**ಶರದ್ವಸಂತಯೋರ್ಮಧ್ಯೇ ಮಧ್ಯಮಾಂ ಗತಿಮಾಸ್ಥಿತಃ ।**
**ಅಹಸ್ತುಲ್ಯಮಥೋ ರಾತ್ರಿಂ ಕರೋತಿ ತಿಮಿರಾಪಹಃ ॥ ೧೯೩ ॥**

**ಹರಿತಾಶ್ಚ ಹಯಾ ದಿವ್ಯಾಸ್ತೇ ನಿಯುಕ್ತಾ ಮಹಾರಥೇ ।**
**ಅನುಲಿಪ್ತಾ ಇವಾಭಾಂತಿ ಪದ್ಮರಕ್ತೈರ್ಗಭಸ್ತಿಭಿಃ ॥ ೧೯೪ ॥**

**ಮೇಷಾಂತೇ ಚ ತುಲಾಂತೇ ಚ ಭಾಸ್ಕರೋದಯತಃ ಸ್ಮೃತಾಃ ।**
**ಮುಹೂರ್ತಾ ದಶ ಪಂಚೈವ ಅಹೋರಾತ್ರಿಶ್ಚ ತಾವತೀ ॥ ೧೯೫ ॥**

---

೧೯೨. ಉತ್ತರಭಾಗದ ಶಿಖರವು ನವರತ್ನಮಯವಾಗಿಯೂ, ಅತ್ಯುತ್ತಮವಾಗಿಯೂ ಆಗಿವೆ. ಇಂತಹ ಪ್ರಖ್ಯಾತವಾದ ಮೂರುವಿಧ ಶಿಖರಗಳಿಂದ ಆ ಪರ್ವತವು ಶೃಂಗವಂತವೆಂಬುದಾಗಿ ಲೋಕವಿಖ್ಯಾತವಾಗಿದೆ.

೧೯೩. ಅನಂತರ ಸೂರ್ಯನು ವಿಷುವದ್ರೇಖೆಯ ಶೃಂಗವನ್ನು ಶರದ್ವಸಂತ ಋತುಗಳ ಮಧ್ಯಕಾಲದಲ್ಲಿ ಹೊಂದಿ ಸಮವಾದ ಗತಿಯನ್ನು ಹೊಂದುವನು. ಆಗ ಸೂರ್ಯನು ಅಹೋರಾತ್ರಿಗಳನ್ನು ಸಮವವಾಗಿ ಮಾಡುವನು.

೧೯೪. ಆ ಸೂರ್ಯನ ರಥಕ್ಕೆ ದಿವ್ಯವೂ ಹಸುರೂ ಆದ ಕುದುರೆಗಳು ಕಟ್ಟಲ್ಪಟ್ಟಿರುತ್ತವೆ. ಅವು ಕಮಲಗಳಂತೆ ಕೆಂಪಾಗಿರುವ ಬಣ್ಣಗಳಿಂದ ಒಳಿಯಲ್ಪಟ್ಟಿದೆಯೋ ಎಂಬಂತೆ ಕಾಣುತ್ತಿದ್ದುವು.

೧೯೫. ಮೇಷಸಂಕ್ರಮಣದ ಕೊನೆಯಲ್ಲಿಯೂ, ತುಲಾಸಂಕ್ರಮಣದ ಕೊನೆಯಲ್ಲಿಯೂ ಸೂರ್ಯೋದಯಾಸ್ತಗಳು ಸಮವಾಗಿರುವುದು. ಆಗ ಅಹೋರಾತ್ರಿಗಳೆರಡರಲ್ಲಿಯೂ ಹದಿನೈದು ಮುಹೂರ್ತಗಳು ಸಮವಾಗಿರುವುವು.

**ಕೃತ್ತಿಕಾನಾಂ ಯದಾ ಸೂರ್ಯಃ ಪ್ರಥಮಾಂಶಗತೋ ಭವೇತ್ ।**
**ವಿಶಾಖಾನಾಂ ತಥಾ ಜ್ಞೇಯಶ್ಚತುರ್ಥಾಂಶೇ ನಿಶಾಕರಃ ॥ ೧೯೬ ॥**

**ವಿಶಾಖಾಯಾಂ ಯದಾ ಸೂರ್ಯಶ್ಚರತೇಽಂಶಂ ತೃತೀಯಕಂ ।**
**ತದಾ ಚಂದ್ರಂ ವಿಜಾನೀಯಾತ್ ಕೃತ್ತಿಕಾ ಶಿರಸಿ ಸ್ಥಿತಂ ॥ ೧೯೭ ॥**

**ವಿಷುವಂತಂ ತದಾ ವಿದ್ಯಾದೇವಮಾಹುರ್ಮಹರ್ಷಯಃ ।**
**ಸೂರ್ಯೇಣ ವಿಷುವಂ ವಿದ್ಯಾತ್ ಕಾಲಂ ಸೋಮೇನ ಲಕ್ಷಯೇತ್ ॥ ೧೯೮ ॥**

**ಸಮಾ ರಾತ್ರಿರಹಶ್ಚೈವ ಯದಾ ತದ್ವಿಷುವದ್ಭವೇತ್ ।**
**ತದಾ ದಾನಾನಿ ದೇಯಾನಿ ಪಿತೃಭ್ಯೋ ವಿಷುವತ್ಯಪಿ ।**
**ಬ್ರಾಹ್ಮಣೇಭ್ಯೋ ವಿಶೇಷೇಣ ಮುಖಮೇತತ್ತು ದೈವತಂ ॥ ೧೯೯ ॥**

---

೧೯೬. ಸೂರ್ಯನು ಕೃತ್ತಿಕಾನಕ್ಷತ್ರದ ಮೊದಲನೆಯ ಪಾದವನ್ನು ಯಾವಾಗ ಹೊಂದುವನೋ ಆಗ ಚಂದ್ರನು ವಿಶಾಖಾನಕ್ಷತ್ರದ ನಾಲ್ಕನೆಯ ಪಾದದಲ್ಲಿರುವನು.

೧೯೭. ಸೂರ್ಯನು ಯಾವಾಗ ವಿಶಾಖಾನಕ್ಷತ್ರದ ಮೂರನೆಯ ಪಾದವನ್ನು ಹೊಂದುವನೋ ಆಗ ಚಂದ್ರನು ಕೃತ್ತಿಕಾನಕ್ಷತ್ರದ ನಾಲ್ಕನೆಯ ಪಾದದಲ್ಲಿರುವನು.

೧೯೮. ಮೇಲೆ ಹೇಳಿದ ನಕ್ಷತ್ರಗಳಲ್ಲಿ ಸೂರ್ಯಚಂದ್ರರು ಇರುವ ಕಾಲಕ್ಕೆ ವಿಷುವತ್ಕಾಲವೆಂದು ಮಹರ್ಷಿಗಳು ಹೇಳುವರು. ಸೂರ್ಯನಿಂದ ವಿಷುವವನ್ನೂ ಚಂದ್ರನಿಂದ ಕಾಲವನ್ನೂ ತಿಳಿಯಬೇಕು.

೧೯೯. ಯಾವ ಕಾಲದಲ್ಲಿ ಅಹೋರಾತ್ರಿಗಳು ಹೆಚ್ಚುಕಡಿಮೆಯಾಗದೇ ಒಂದೇಸಮವಾಗಿರುತ್ತವೆಯೋ ಅದಕ್ಕೆ ವಿಷುವತ್ಕಾಲವೆಂಬ ನಾಮವು ಪ್ರಾಪ್ತವಾಗಿದೆ. ಅಂತಹ ವಿಷುವತ್ಕಾಲದಲ್ಲಿ ಪಿತೃಗಳ ಉದ್ದೇಶ್ಯವಾಗಿ ಬ್ರಾಹ್ಮಣರಿಗೆ ದಾನವನ್ನು ಮಾಡಬೇಕು. ಅದು ಉತ್ತಮವಾದ ದೇವತೆಯೆಂದು ತಿಳಿಯಬೇಕು.

ಊನರಾತ್ರಾಧಿಮಾಸೌ ಚ ಕಲಾಕಾಷ್ಠಾಮುಹೂರ್ತಕಾಃ ।
ಪೌರ್ಣಮಾಸೀ ತಥಾ ಜ್ಞೇಯಾ ಅಮಾವಾಸ್ಯಾ ತಥೈವ ಚ ।
ಸಿನೀವಾಲೀ ಕುಹೂಶ್ಚೈವ ರಾಕಾ ಚಾನುಮತಿಸ್ತಥಾ ॥ ೨೦೦ ॥

ತಪಸ್ತಪಸ್ಯೌ ಮಧುಮಾಧವೌ ಚ ।
ಶುಕ್ರಃ ಶುಚಿಶ್ಚಾಯನಮುತ್ತರಂ ಸ್ಯಾತ್ ॥
ನಭೋ ನಭಸ್ಯೋಽಥ ಇಷುಃ ಸಹೋರ್ಜಃ ।
ಸಹಃ ಸಹಸ್ಯಾವಿತಿ ದಕ್ಷಿಣಂ ಸ್ಯಾತ್ ॥ ೨೦೧ ॥

ಸಂವತ್ಸರಾಸ್ತತೋ ಜ್ಞೇಯಾಃ ಪಂಚಾಬ್ದಾ ಬ್ರಹ್ಮಣಃಸುತಾಃ ।
ತಸ್ಮಾತ್ತು ಋತವೋ ಜ್ಞೇಯಾ ಋತವೋ ಹ್ಯಂತರಾಃ ಸ್ಮೃತಾಃ ॥ ೨೦೨ ॥

---

೨೦೦. ಊನರಾತ್ರಿ, ಅಧಿಕಮಾಸ, ಕಲಾ, ಕಾಷ್ಠ, ಮುಹೂರ್ತಕ, ಹುಣ್ಣಿಮೆ, ಅಮಾವಾಸ್ಯಾ, ಸಿನೀವಾಲೀ, ಕುಹೂ, ರಾಕಾ ಮತ್ತು ಅನುಮತಿ ಇವು ವಿಷುವತ್ಕಾಲದಂತೆ ತಿಳಿಯಬೇಕು.

ಸೂಚನೆ :—ಅಮಾವಾಸ್ಯೆಯಲ್ಲಿ ಚಂದ್ರಕಲೆಯು ದೃಷ್ಟವಾದರೆ ಸಿನೀವಾಲಿಯೆಂದೂ, ಚಂದ್ರಕಲೆಯು ಸಂಪೂರ್ಣವಾಗಿ ನಷ್ಟವಾದರೆ ಕುಹೂ ಎಂದೂ ಸಂಜ್ಞೆಯು ಉಂಟಾಗಿದೆ. ಅದರಂತೆ ಹುಣ್ಣಿಮೆಯಲ್ಲಿ ಚಂದ್ರನು ಹೀನವಾದರೆ ಅನುಮ ಎಂದೂ, ಪೂರ್ಣವಾಗಿದ್ದರೆ ರಾಕಾ ಎಂದೂ ಸಂಜ್ಞೆಯು ಸಂಭವಿಸಿರುತ್ತದೆ.

೨೦೧. ಮಾಘ, ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ ಈ ಆರು ತಿಂಗಳೂ ಉತ್ತರಾಯಣಕಾಲವಾಗಿವೆ. ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತೀಕ ಮಾರ್ಗಶಿರ, ಪುಷ್ಯಮಾಸಗಳು ದಕ್ಷಿಣಾಯನವಾಗಿವೆ.

೨೦೨. ಅನಂತರ ಮೇಲೆ ನಿರೂಪಿಸಿರುವ ಐದುವರ್ಷಗಳನ್ನು ಬ್ರಹ್ಮದೇವನ ಪುತ್ರರೆಂದು ತಿಳಿಯಬೇಕು. ಅನಂತರ ಋತುಗಳನ್ನು ತಿಳಿಯಬೇಕು. ಆ ಋತುಗಳೇ ಮಧ್ಯಗತಗಳೆಂದು ತಿಳಿಯಬೇಕು.

ತಸ್ಮಾದನುಮುಖಾ ಜ್ಞೇಯಾ ಅಮಾವಾಸ್ಯಾಸ್ಯ ಪರ್ವಣಃ ।
ತಸ್ಮಾತ್ತು ವಿಷುವಂ ಜ್ಞೇಯಂ ಪಿತೃದೈವಹಿತಂ ಸದಾ ॥ ೨೦೩ ॥

ಏವಂ ಜ್ಞಾತ್ವಾ ನ ಮುಹ್ಯೇತ ದೈವೇ ಪಿತ್ರ್ಯೇ ಚ ಮಾನವಃ ।
ತಸ್ಮಾತ್ ಸ್ಮೃತಂ ಪ್ರಜಾನಾಂತು ವಿಷುವತ್ಸರ್ವಗಂ ಸದಾ ॥ ೨೦೪ ॥

ಆಲೋಕಾಂತಃ ಸ್ಮೃತೋ ಲೋಕೋ ಲೋಕಾಂತೋ ಲೋಕ ಉಚ್ಯತೇ ।
ಲೋಕಪಾಲಾಃ ಸ್ಥಿತಾಸ್ತತ್ರ ಲೋಕಾಲೋಕಸ್ಯ ಮಧ್ಯತಃ ॥ ೨೦೫ ॥

ಚತ್ವಾರಸ್ತೇ ಮಹಾತ್ಮಾನಸ್ತಿಷ್ಠಂತ್ಯಾಭೂತಸಂಪ್ಲವಾತ್ ।
ಸುಧಾಮಾ ಚೈವ ವೈರಾಜಃ ಕರ್ದಮಃ ಶುಕ್ಲಪಸ್ತಥಾ ।
ಹಿರಣ್ಯಲೋಮಾ ಪರ್ಜನ್ಯಃ ಕೇತುಮಾನ್ ಜಾತನಿಶ್ಚಯಃ ॥ ೨೦೬ ॥

---

೨೦೩. ಆದುದರಿಂದ ಅಮಾವಾಸ್ಯೆಯು ಪರ್ವಕ್ಕೆ ಮೂಲವಾಗಿದೆ. ಆ ಪರ್ವಕ್ಕೆ ವಿಷುವಂತವು ಮೂಲವಾಗಿರುತ್ತದೆ. ಆದುದರಿಂದ ಅಮಾವಾಸ್ಯೆ, ಪರ್ವ, ವಿಷುವತ್ಕಾಲ ಇವು ಮೂರೂ ಪಿತೃಗಳಿಗೂ ದೇವತೆಗಳಿಗೂ ಅತ್ಯಂತ ಪ್ರಿಯವಾಗಿವೆ.

೨೦೪. ಮನುಷ್ಯನು ಈ ವಿಷಯಗಳನ್ನರಿತು ದೇವಪಿತೃಗಳ ವಿಷುವತ್ಕಾಲಗಳ ವಿಷಯದಲ್ಲಿ ಭ್ರಾಂತನಾಗಬಾರದು. ಅವರ ವಿಷಯದಲ್ಲಿ ಜಾಗರೂಕನಾಗಿರಬೇಕು. ಆದುದರಿಂದ ವಿಷುವತ್ಕಾಲವು ಪ್ರಜೆಗಳ ಹಿತಕ್ಕಾಗಿ ಪದೇ ಪದೇ ಸಂಭವಿಸುತ್ತಿಯೆಂದು ತಿಳಿಯಬೇಕು.

೨೦೫. ಬೆಳಕು ಇರುವವರೆಗೂ ಲೋಕಗಳು ಇವೆ ಎಂದು ತಿಳಿಯಬೇಕು. ಅಲ್ಲಿಯವರೆಗೂ ಲೋಕವೆಂಬ ನಾಮವು ಬಂದಿದೆ. ಬೆಳಕಿರುವ ಕೊನೆಯವರೆಗೂ ಲೋಕವೆಂದೇ ತಿಳಿಯಬೇಕು. ಲೋಕದ ಕೊನೆಯಾದ ಲೋಕಾಲೋಕಪರ್ವತದ ಮಧ್ಯಭಾಗದಲ್ಲಿ ಲೋಕಪಾಲಕರಾದ ದೇವತೆಗಳು ವಾಸಮಾಡುವರು.

೨೦೬. ವೈರಾಜನಾಮಕನಾದ ಸುಧಾಮ, ಅತ್ಯಂತ ಕೃಪಾಶಾಲಿಯಾದ ಕರ್ದಮ, ಹಿರಣ್ಯಲೋಮನೆಂಬ ಪರ್ಜನ್ಯ, ನಿಶ್ಚಯಜ್ಞಾನಿಯಾದ ಕೇತುಮಂತರೆಂಬ ನಾಲ್ವರು ಮಹಾತ್ಮರು ಪ್ರಲಯಕಾಲದವರೆಗೂ ಶಾಶ್ವತವಾಗಿರುತ್ತಾರೆ.

**ನಿರ್ದ್ವಂದ್ವಾ ನಿರಭೀಮಾನಾ ನಿಸ್ತಂತ್ರಾ ನಿಷ್ಪರಿಗ್ರಹಾಃ ।**
**ಲೋಕಪಾಲಾಃ ಸ್ಥಿತಾ ಹ್ಯೇತೇ ಲೋಕಾಲೋಕೇ ಚತುರ್ದಿಶಂ ॥ ೨೦೭ ॥**

**ಉತ್ತರಂ ಯದಗಸ್ತ್ಯಸ್ಯ ಅಜವೀಥ್ಯಾಶ್ಚ ದಕ್ಷಿಣಂ ।**
**ಪಿತೃಯಾಣಃ ಸ ವೈ ಪಂಥಾ ವೈಶ್ವಾನರಪಥಾದ್ಬಹಿಃ ॥ ೨೦೮ ॥**

**ತತ್ರಾ ಸ ತೇ ಪ್ರಜಾವಂತೋ ಮುನಯೋ ಹ್ಯಗ್ನಿಹೋತ್ರಿಣಃ ।**
**ಲೋಕಸ್ಯ ಸಂತಾನಕರಾಃ ಪಿತೃಯಾಣೇ ಪಥಿ ಸ್ಥಿತಾಃ ॥ ೨೦೯ ॥**

**ಭೂತಾರಂಭಕೃತಂ ಕರ್ಮ ಆಶಿಷಾ ಋತ್ವಿಗುಚ್ಯತೇ ।**
**ಪ್ರಾರಭಂತೇ ಲೋಕಕಾಮಾಸ್ತೇಷಾಂ ಪಂಥಾಃ ಸ ದಕ್ಷಿಣಃ ॥ ೨೧೦ ॥**

---

೨೦೭. ಅವರು ಶಿತೋಷ್ಣಾದಿ ದ್ವಂದ್ವಾತೀತರೂ. ಅಭಿಮಾನರಹಿತರೂ, ಪರಿಗ್ರಹಶೂನ್ಯರೂ ಆದ ಲೋಕಪಾಲಕರು ಲೋಕಾಲೋಕಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ವಾಸಿಸುತ್ತಾರೆ.

೨೦೮. ಅಗಸ್ತ್ಯರವಾಸಸ್ಥಾನಕ್ಕಿಂತಲೂ ಉತ್ತರದಲ್ಲಿಯೂ, ಅಜವೀಥಿಗಿಂತಲೂ ದಕ್ಷಿಣಭಾಗದಲ್ಲಿಯೂ. ವೈಶ್ವಾನರಪಥಕ್ಕಿಂತಲೂ ಹೊರಭಾಗದಲ್ಲಿಯೂ ಇರುವ ಮಾರ್ಗವೇ ಪಿತೃಲೋಕಕ್ಕೆ ಹೋಗುವ ಮಾರ್ಗವಾಗಿದೆಯೆಂದು ಜ್ಞಾನಿಗಳು ಹೇಳುತ್ತಾರೆ.

೨೦೯. ಆ ಪಿತೃಯಾಣದ ಮಾರ್ಗದಲ್ಲಿ ಪ್ರಜಾವಂತರೂ, ಅಗ್ನಿಹೋತ್ರಾದಿಗಳಲ್ಲಿ ಆಸಕ್ತರೂ, ಲೋಕಸಂತಾನಕಾರಕರೂ ಆದ ಮಹರ್ಷಿಗಳು ವಾಸಿಸುತ್ತಾರೆ.

೨೧೦. ಭೂತಾರಂಭಕರವಾದ ಕರ್ಮಗಳನ್ನು ಮಾಡುವವರೂ, ಆಶೀರ್ವಾದವನ್ನು ಮಾಡುವವರೂ ಆದ ಮಹರ್ಷಿಗಳಿಗೆ ಋತ್ವಿಗೆಂಬ ನಾಮವು ಬಂದಿದೆ. ಲೋಕಹಿತಾಕಾಂಕ್ಷಿಗಳಾದ ಆ ಮಹಾತ್ಮರು ದಕ್ಷಿಣಮಾರ್ಗದಲ್ಲಿದ್ದುಕೊಂಡು ಸತ್ಕರ್ಮಗಳನ್ನಾಚರಿಸುವರು.

ಚರಿತಂ ತೇ ಪುನರ್ಧರ್ಮಂ ಸ್ಥಾಪಯಂತಿ ಯುಗೇ ಯುಗೇ ।
ಸಂತತ್ಯಾ ತಪಸಾ ಚೈವ ಮರ್ಯಾದಾಭಿಶ್ರುತೇನ ಚ ॥ ೨೧೧ ॥

ಜಾಯಮಾನಾಸ್ತು ಪೂರ್ವೇ ವೈ ಪಶ್ಚಿಮಾನಾಂ ಗೃಹೇಷು ಚ ।
ಪಶ್ಚಿಮಾಶ್ಚೈವ ಜಾಯಂತೇ ಪೂರ್ವೇಷಾಂ ನಿಧನೇಷ್ವಪಿ ॥
ಏವಮಾವರ್ತಮಾನಾಸ್ತೇ ತಿಷ್ಠಂತ್ಯಾಭೂತಸಂಪ್ಲವಾತ್ ॥ ೨೧೨ ॥

ಅಷ್ಟಾಶೀತಿ ಸಹಸ್ರಾಣಿ ಮುನೀನಾಂ ಗೃಹಮೇಧಿನಾಂ ।
ಸವಿತುರ್ದಕ್ಷಿಣಂ ಮಾರ್ಗಂ ಶ್ರಿತಾ ಹ್ಯಾಚಂದ್ರತಾರಕಂ ॥
ಕ್ರಿಯಾವತಾಂ ಪ್ರಸಂಖ್ಯೇಯಾ ಯೇ ಶ್ಮಶಾನಾನಿ ಭೇಜಿರೇ ॥ ೨೧೩ ॥

ಲೋಕಸಂವ್ಯವಹಾರೇಣ ಭೂತಾರಂಭಕೃತೇನ ಚ ।
ಇಚ್ಛಾದ್ವೇಷಪ್ರಕೃತ್ಯಾ ಚ ಮೈಥುನೋಪಗಮೇನ ಚ ॥ ೨೧೪ ॥

---

೨೧೧. ಅಂತಹ ಮಹರ್ಷಿಗಳು ಪ್ರತಿಯುಗದಲ್ಲಿಯೂ ನಷ್ಟವಾದ ಧರ್ಮಗಳನ್ನೂ ಸತ್ಸಂತಾನಗಳನ್ನೂ ತಮ್ಮ ತಪಸ್ಸುಗಳಿಂದಲೂ, ಸನ್ಮರ್ಯಾದೆಗಳಿಂದಲೂ ಶಾಸ್ತ್ರಶ್ರವಣದಿಂದಲೂ ರಕ್ಷಿಸಿಕೊಂಡು ಬರುವರು.

೨೧೨. ಪುರಾಣಪುರುಷರಾದ ಅವರು ನವೀನರ ಗೃಹದಲ್ಲಿ ಜನಿಸಿ ಧರ್ಮವನ್ನು ಸ್ಥಾಪಿಸುವರು. ಪ್ರಾಚೀನರು ಮೃತರಾಗಲು ನವೀನರು ಆ ಸ್ಥಾನದಲ್ಲಿ ಜನಿಸುವರು. ಹೀಗೆ ಒಬ್ಬರ ಸ್ಥಾನವಲ್ಲಿ ಮತ್ತೊಬ್ಬರು ಹುಟ್ಟಿ ಧರ್ಮವನ್ನು ಸ್ಥಾಪಿಸಿ ಪ್ರಲಯಕಾಲವವರೆಗೂ ಇರುವರು.

೨೧೩. ಗೃಹಸ್ಥರೂ ಮುನಿಗಳೂ ಆದ ಎಂಭತ್ತೆಂಟುಸಹಸ್ರ ಜನರು ಸೂರ್ಯನ ದಕ್ಷಿಣಮಾರ್ಗವನ್ನು ಹೊಂದಿ, ಚಂದ್ರಸೂರ್ಯರು ಇರುವವರೆಗೂ ಇರುತ್ತಾರೆ. ಯಾರು ತಮ್ಮತಮ್ಮ ಕರ್ಮಗಳಿಂದ ಜನನಮರಣಾದಿಗಳನ್ನೂ ಪಡೆಯುತ್ತಾರೋ ಅಂತಹವರು ಅಸಂಖ್ಯಾತರಾಗಿರುವರು.

೨೧೪. ಸಿದ್ಧಾದಿಪುರುಷರು ಲೋಕವ್ಯವಹಾರದಿಂದಲೂ, ಭೂತಾರಂಭಕರವಾದ ವ್ಯಾಪಾರದಿಂದಲೂ, ಇಚ್ಛಾದ್ವೇಷರೂಪವಾದ ಪ್ರವೃತ್ತಿಯಿಂದಲೂ, ಸ್ತ್ರೀಪುರುಷಸಂಗಮಾದಿಗಳಿಂದಲೂ ಜನನಮರಣಗಳನ್ನು ಪಡೆಯುವರು.

ತಥಾ ಕಾಯಕೃತೇನೇಹ ಸೇವನಾದ್ವಿಷಯಸ್ಯ ಚ ।
ಏತೈಸ್ತೈಃ ಕಾರಣೈಃ ಸಿದ್ಧಾಃ ಶ್ಮಶಾನಾನಿ ಹಿ ಭೇಜಿರೇ ।
ಪ್ರಜೈಷಿಣಾಸ್ತೇ ಮುನಯೋ ದ್ವಾಪರೇಷ್ವಿಹ ಜಜ್ಞಿರೇ ॥ ೨೧೫ ॥

ನಾಗವೀಥ್ಯುತ್ತರೇ ಯಚ್ಚ ಸಪ್ತರ್ಷಿಭ್ಯಶ್ಚ ದಕ್ಷಿಣಂ ।
ಉತ್ತರಃ ಸವಿತುಃ ಪಂಥಾ ದೇವಯಾನಸ್ತು ಸ ಸ್ಮೃತಃ ॥ ೨೧೬ ॥

ಯತ್ರ ತೇ ವಾಸಿನಃ ಸಿದ್ಧಾ ವಿಮಲಾ ಬ್ರಹ್ಮಚಾರಿಣಃ ।
ಸತತಂ ತೇ ಜುಗುಪ್ಸಂತೇ ತಸ್ಮಾನ್ಮೃತ್ಯುರ್ಜಿತಸ್ತು ತೈಃ ॥ ೨೧೭ ॥

ಅಷ್ಟಾಶೀತಿಸಹಸ್ರಾಣಿ ತೇಷಾಮಪ್ಯೂರ್ಧ್ವರೇತಸಾಂ ।
ಉದಕ್ಪಂಥಾನಮರ್ಯಮ್ಣಃ ಶ್ರಿತಾ ಹ್ಯಾಭೂತಸಂಪ್ಲವಾತ್ ॥ ೨೧೮ ॥

ಇತ್ಯೇತೈಃ ಕಾರಣೈಃ ಶುದ್ಧೈಸ್ತೇಮೃತತ್ವಂ ಹಿ ಭೇಜಿರೇ ।
ಆಭೂತಸಂಪ್ಲವಸ್ಥಾನಾಮಮೃತತ್ವಂ ವಿಭಾವ್ಯತೇ ॥ ೨೧೯ ॥

---

೨೧೫. ಸಿದ್ಧಾದಿಪುರುಷರು ಕಾಯಿಕವ್ಯಾಪಾರದಿಂದಲೂ, ವಿಷಯಸೇವನೆಯಿಂದಲೂ, ಬೇರೆಯಾವ ಮಿಕ್ಕಕಾರಣಗಳಿಂದಲೂ ಕೂಡ ಮೃತರಾಗುವರು. ಮತ್ತು ಪ್ರಜಾಹಿತೈಷಿಗಳಾದ ಮುನಿಗಳು ದ್ವಾಪರಯುಗದಲ್ಲಿ ಜನನವಾಗುವರು.

೨೧೬. ನಾಗವೀಥಿಗಿಂತಲೂ ಉತ್ತರದಿಗ್ಭಾಗದಲ್ಲಿಯೂ, ಸಪ್ತರ್ಷಿಗಳ ಮಾರ್ಗಕ್ಕಿಂತಲೂ ದಕ್ಷಿಣಭಾಗದಲ್ಲಿಯೂ ಇರುವ ಮಾರ್ಗವೇ ಸೂರ್ಯನ ಉತ್ತರ ಪಂಥವಾಗಿದೆ. ಅದಕ್ಕೇ ದೇವಯಾನವೆಂಬ ನಾಮವು ಪ್ರಾಪ್ತವಾಗಿದೆ.

೨೧೭. ಅಲ್ಲಿ ವಾಸಮಾಡತಕ್ಕವರೆಲ್ಲರೂ ವಿಮಲರೂ, ಬ್ರಹ್ಮಚಾರಿಗಳೂ, ಸಿದ್ಧಪುರುಷರೂ ಆಗಿರುವರು. ಅದರಿಂದ ಅವರು ಈ ಸಂಸಾರದಿಂದ ಜುಗುಪ್ಸಿತರಾಗಿ ಜನನಮರಣಾತೀತರಾಗಿರುವರು.

೨೧೮. ಊರ್ಧ್ವರೇತಸ್ಕರೂ, ಎಂಭತ್ತೆಂಟುಸಹಸ್ರಸಂಖ್ಯಾಕರೂ ಆದ ಮಹರ್ಷಿಗಳು ಸೂರ್ಯದೇವನ ಉತ್ತರಮಾರ್ಗವನ್ನು ಹೊಂದಿ ಪ್ರಲಯಕಾಲದ ವರೆಗೂ ಸ್ಥಿರವಾಗಿರುವರು.

೨೧೯. ಆ ಮಹಾತ್ಮರು ಈ ವಿಧವಾದ ಪರಿಶುದ್ಧವಾದ ಸತ್ಕರ್ಮಾನುಷ್ಠಾನಗಳಿಂದ ಜರಾಮರಣವರ್ಜಿತರಾಗಿ ಮುಕ್ತರಾಗುವರು. ಪ್ರಲಯಕಾಲದವರೆಗೂ ಇರುವ ಸ್ಥಿರವಾದ ಸ್ಥಾನವನ್ನು ಪಡೆದವರು ಮುಕ್ತರ ಗುಂಪಿಗೆ ಸೇರಿರುವರು.

ತ್ರೈಲೋಕ್ಯಸ್ಥಿತಿಕಾಲೋಽಯಮಪುನರ್ಮಾರ್ಗಗಾಮಿನಃ ।
ಬ್ರಹ್ಮಹತ್ಯಾಶ್ವಮೇಧಾಭ್ಯಾಂ ಪುಣ್ಯಪಾಪಕೃತೋಽಪರಂ ।
ಆಭೂತಸಂಪ್ಲವಾಂ ತೇ ತು ಕ್ಷೀಯಂತೇ ಹ್ಯೂರ್ಧ್ವರೇತಸಃ ॥ ೨೨೦ ॥

ಊರ್ಧ್ವೋತ್ತರಮೃಷಿಭ್ಯಸ್ತು ಧ್ರುವೋ ಯತ್ರಾಸ್ತಿ ವೈ ಸ್ಮೃತಂ ।
ಏತದ್ವಿಷ್ಣುಪದಂ ದಿವ್ಯಂ ತೃತೀಯಂ ವ್ಯೋಮ್ನಿ ಭಾಸ್ವರಂ ॥ ೨೨೧ ॥

ತತ್ರ ಗತ್ವಾ ನ ಶೋಚಂತಿ ತದ್ವಿಷ್ಣೋಃ ಪರಮಂ ಪದಂ ।
ಧರ್ಮಧ್ರುವಾದ್ಯಾಸ್ತಿಷ್ಠಂತಿ ಯತ್ರ ತೇ ಲೋಕಸಾಧಕಾಃ ॥ ೨೨೨ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಜ್ಯೋತಿಷ್ಪ್ರಚಾರೋ "
ನಾಮ ಪಂಚಾಶೋಽಧ್ಯಾಯಃ

---

೨೨೦. ಇದು ತ್ರೈಲೋಕ್ಯಸ್ಥಿತಿಕಾಲವು. ಪುನರಾವೃತ್ತಿರಹಿತವಾದ ಮಾರ್ಗಗಾಮಿಗಳಾವ ಮುನಿಗಳ ಮಾರ್ಗವು ಅತಿರಿಕ್ತವು. ಬ್ರಹ್ಮಹತ್ಯದಿಂದ ಪಾಪವನ್ನೂ ಅಶ್ವಮೇಧದಿಂದ ಪುಣ್ಯವನ್ನೂ ಪಡೆದವರ ಮಾರ್ಗವು ಅತಿರಿಕ್ತವಾಗಿರುವುದು. ಊರ್ಧ್ವರೇತಸ್ಕರಾದ ಮುನಿಗಳ ಪುಣ್ಯಪಾಪಗಳೆಲ್ಲವೂ ಪ್ರಲಯಾಂತದಲ್ಲಿ ಕ್ಷಯವಾಗುವುವು.

೨೨೧. ಋಷಿಗಳ ಲೋಕಕ್ಕಿಂತಲೂ ಮೇಲ್ಭಾಗದಲ್ಲಿ ಧ್ರುವಲೋಕವು ಸುಪ್ರಸಿದ್ಧವಾಗಿರುವುದು. ಆ ಮೂರನೆಯದೂ ದಿವ್ಯವೂ, ತೇಜಸ್ವಿಯೂ, ಆಕಾಶಗತವೂ ಆದ ಲೋಕವೇ ಶ್ರೀಮಹಾವಿಷ್ಣುವಿನ ವೈಕುಂಠಲೋಕವಾಗಿದೆ.

೨೨೨. ಯಾವ ಸ್ಥಾನವನ್ನು ಹೊಂದಿದವರಿಗೆ ಲೇಶಮಾತ್ರವೂ ದುಃಖವಿಲ್ಲವೋ, ಲೋಕದಲ್ಲಿ ಸಾಧುಗಳೆಂದು ಪ್ರಖ್ಯಾತರಾದ ಧ್ರುವಾದಿಗಳು ಸ್ಥಿರವಾಗಿ ನಿತ್ಯಸುಖವನ್ನು ಎಲ್ಲಿ ಪಡೆಯುತ್ತಿರುವರೋ ಅದೇ ಶ್ರೀವಿಷ್ಣುವಿನ ವೈಕುಂಠಸ್ಥಾನವು. ಅಂತಹ ವೈಕುಂಠವನ್ನು ಹೊಂದಿದವರು ನಿತ್ಯಸುಖವನ್ನು ಪಡೆಯುವರೆಂದು ಸೂತರು ಮುನಿಗಳಿಗೆ ಹೇಳಿದರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಜ್ಯೋತಿರ್ಮಂಡಲಪ್ರಚಾರವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು.

## ಐವತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪಾತಾಲಾದಿ ಹದಿನಾಲ್ಕು ಲೋಕಗಳೂ, ಸೂರ್ಯಚಂದ್ರಾದಿ ಗ್ರಹಗಳ ಸಂಚಾರವೂ ನಿರೂಪಿತವಾಗಿವೆ. ಭೂಮಿಯ ಮೇಲ್ಭಾಗದಲ್ಲಿ ಸ್ವರ್ಗಾದಿ ಲೋಕಗಳಿರುವಂತೆಯೇ ಕೆಳಭಾಗದಲ್ಲಿಯೂ ಸಪ್ತಲೋಕಗಳಿರುವುವು. ಅವು ಅತಲ, ವಿತಲ, ಸುತಲ, ಗಭಸ್ತಲ, ಮಹಾತಲ, ಶ್ರೀತಲ ಮತ್ತು ಪಾತಾಳ ಇವುಗಳಾಗಿವೆ. ಅತಲದಲ್ಲಿ ದೇವದ್ವೇಷಿಗಳಾದ ನಮುಚಿ, ಶಂಕುಕರ್ಣನೇ ಮೊದಲಾದ ರಾಕ್ಷಸರೂ, ನಾಗಗಳೂ, ದಾನವರೂ, ಸುತಲದಲ್ಲಿ ಹಯಗ್ರೀವ, ನಿಕುಂಭನೇ ಮೊದಲಾದ ರಾಕ್ಷಸರೂ, ನಾಗಗಳೂ, ದಾನವರೂ, ವಿತಲದಲ್ಲಿ ಪ್ರಹ್ಲಾದಾದಿಗಳೂ ವಾಸಮಾಡುವರು. ಗಭಸ್ಥಲದಲ್ಲಿ ಕಾಲನೇಮಿಯೇ ಮೊದಲಾದವರ ದಿವ್ಯನಗರಗಳೂ, ಮಹಾತಲದಲ್ಲಿ ವಿರೋಚನ, ಹಿರಣ್ಯಾಕ್ಷಾದಿಗಳ ದಿವ್ಯಭವನಗಳೂ, ಶ್ರೀತಲದಲ್ಲಿ ಮಹಿಷ ಕೇಸರಿ ಮೊದಲಾದವರ ಸುಂದರಾಲಯಗಳೂ, ಪಾತಾಳದಲ್ಲಿ ಬಲಿ ಮುಚುಕುಂದಾದಿಗಳ ದಿವ್ಯಪಟ್ಟಣಗಳೂ ಹೊಳೆಯುತ್ತಿರುವುವು. ಈ ಸಪ್ತಲೋಕಗಳ ತರುವಾಯ ಸುವರ್ಣಮಯವೂ, ಅತಿವಿಶಾಲವೂ ಆದ ದಿವ್ಯನಗರವಿರುವುದು. ಅವರಲ್ಲಿ ದಿವ್ಯಫಣಾಮಂಡಿತನಾದ ಆದಿಶೇಷನು ವಾಸಿಸುವನು. ಅದರ ತರುವಾಯ ಯಾವ ಲೋಕವೂ ಇಲ್ಲ. ಅದು ನಿರಾಲೋಕವಾಗಿದೆ.

ಇದರಂತೆ ಮೇಲ್ಭಾಗದಲ್ಲಿ ಭೂಲೋಕ, ಭುವರ್ಲೋಕ, ಸರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳೆಂಬ ಸಪ್ತಲೋಕಗಳಿವೆ. ಅವು ಒಂದಕ್ಕೊಂದು ಛತ್ರಾಕಾರವಾಗಿಯೂ, ಹತ್ತರಷ್ಟು ವಿಸ್ತಾರವಾಗಿಯೂ, ಇರುತ್ತವೆ. ಈ ಸಮಸ್ತ ಭೂಮಂಡಲವು ಮಹತ್ತಾದ ಘನೋದಕದಿಂದಲೂ, ಆ ಘನೋದಕವು ಘನವಾದ ತೇಜಸ್ಸಿನಿಂದಲೂ, ಅದೂ ಕೂಡ ಘನವಾದ ವಾತದಿಂದಲೂ ಅದು ಆಕಾಶದಿಂದಲೂ ಅದು ಮಹತ್ತತ್ವದಿಂದಲೂ ಆ ಮಹತ್ತತ್ವವು ಅನಂತನಾಮಕ ಅವ್ಯಕ್ತತತ್ವದಿಂದಲೂ ಆವೃತಗಳಾಗಿವೆ. ಮಹಾಮೇರುವಿನ ಪೂರ್ವಭಾಗದ ಮಾನಸಗಿರಿಯ ಶಿಖರದಲ್ಲಿ ಇಂದ್ರನ ಅಮರಾವತೀನಗರಿಯೂ, ದಕ್ಷಿಣದ ದಿವ್ಯಶಿಖರದಲ್ಲಿ ಯಮದೇವನ ಸಂಯಮಪುರಿಯೂ, ಪಶ್ಚಿಮಶಿಖರದಲ್ಲಿ ವರುಣನ ಸುಖಾನಗರಿಯೂ, ಉತ್ತರಮಾನಸಶಿಖರದಲ್ಲಿ ಸೋಮನ ವಿಭಾವತೀಪತ್ತನವೂ ಇರುವುವು. ಆ ಲೋಕಪಾಲಕರು ಲೋಕಕಲ್ಯಾಣಕ್ಕಾಗಿ ವಾಸಿಸುವರು.

ಮಹಾಮೇರುವಿನ ಉತ್ತರದಿಗ್ಭಾಗದಲ್ಲಿ ಲೋಕಾಲೋಕಪರ್ವತವಿರುವುದು. ಸೂರ್ಯಚಂದ್ರಾದಿ ಜ್ಯೋತಿರ್ಮಂಡಲವು ಇಂದ್ರಾದಿ ಲೋಕಪಾಲಕರ ಮೇಲ್ಭಾಗದಲ್ಲಿಯೂ, ಲೋಕಾಲೋಕಪರ್ವತದ ಮಧ್ಯಭಾಗದಲ್ಲಿಯೂ ಸಂಚರಿಸುವುದು. ಲೋಕಾಲೋಕಗಿರಿಯ ಒಂದು ಭಾಗದಲ್ಲಿ ಪ್ರಕಾಶವೂ ಮಿಕ್ಕಭಾಗಗಳಲ್ಲಿ ಅಂಧಕಾರವೂ ಇರುವುವು. ಸೂರ್ಯನು ಪ್ರತಿ ದಿವಸವೂ ಸಂಚರಿಸುವಾಗ ಸಾಯಂಪ್ರಾತಃಕಾಲಗಳಲ್ಲಿ ಲೋಕಾಲೋಕಪರ್ವತವನ್ನು ಸಂಧಿಸುವನು. ಆ ಸಂಧಿಕಾಲಕ್ಕೆ ಸಂಧ್ಯೆಯೆಂಬ ನಾಮವು ಪ್ರಾಪ್ತವಾಗಿದೆ. ಆ ಕಾಲಗಳಲ್ಲಿ ಮಂದೇಹನಾಮಕ ಮಹಾರಾಕ್ಷಸರು ಸೂರ್ಯನನ್ನು ನುಂಗಲು ಬರುವರು. ಆಗ ಮಹರ್ಷಿಗಳು ಬ್ರಾಹ್ಮಣರು ಓಂಕಾರಪುರಸ್ಸರವಾಗಿ ಮಂತ್ರಿಸಿಕೊಟ್ಟ ಅರ್ಘ್ಯಪ್ರಧಾನವು ವಜ್ರಾಯುಧಗಳಾಗಿ ಆ ರಾಕ್ಷಸರನ್ನು ಸಂಹರಿಸುವುದು. ಆ ಮಂದೇಹರಾಕ್ಷಸರು ಬ್ರಹ್ಮದೇವನ ವರದಿಂದ ಪ್ರತಿನಿತ್ಯವೂ ಹುಟ್ಟಿ ಸಾಯುವರು. ಮತ್ತು ಅಜವೀಥಿ ನಾಗವೀಥ್ಯಾಧಿಗಳೂ ದಕ್ಷಿಣಾಯನೋತ್ತರಾಯಣಾದಿಗಳೂ ನಿರೂಪಿತವಾಗಿವೆ.

—॥ ಹರಿಃ ಓಂ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಏಕಪಂಚಾಶೋಽಧ್ಯಾಯಃ

॥ ಸೂತ ಉವಾಚ ॥

ಸ್ವಾಯಂಭುವೇ ನಿಸರ್ಗೇ ತು ವ್ಯಾಖ್ಯಾತಾನ್ಯುತ್ತರಾಣಿ ತು ।
ಭವಿಷ್ಯಾಣಿ ಚ ಸರ್ವಾಣಿ ತೇಷಾಂ ವಕ್ಷ್ಯಾಮ್ಯನುಕ್ರಮಂ ॥ ೧ ॥

ಏತಚ್ಛ್ರುತ್ವಾ ತು ಮುನಯಃ ಪ್ರಪ್ರಚ್ಛುರ್ಲೋಮಹರ್ಷಣಂ ।
ಸೂರ್ಯಾಚಂದ್ರಮಸೋಶ್ಚಾರಂ ಗ್ರಹಾಣಾಂಚೈವ ಸರ್ವಶಃ ॥ ೨ ॥

॥ ಋಷಯ ಊಚುಃ ॥

ಭ್ರಮಂತೇ ಕಥಮೇತಾನಿ ಜ್ಯೋತೀಂಷಿ ದಿವಿ ಮಂಡಲಂ ।
ತಿರ್ಯಗ್ವ್ಯೂಹೇನ ಸರ್ವಾಣಿ ತಥೈವಾಸಂಕರೇಣ ಚ ॥
ಕಶ್ಚ ಭ್ರಾಮಯತೇ ತಾನಿ ಭ್ರಮಂತಿಯದಿ ವಾ ಸ್ವಯಂ ॥ ೩ ॥

---

## ಐವತ್ತೊಂದನೆಯ ಅಧ್ಯಾಯವು

೧-೨. ಸೂತಮುನಿಯು ಹೇಳಿದನು :—ಸೂತಪುರಾಣೀಕನು ಮುನಿಗಳನ್ನು ಕುರಿತು ಸ್ವಾಯಂಭುವಮನ್ವಂತರದಲ್ಲಿ ಹಿಂದಿನ ಸಂಗತಿಗಳೆಲ್ಲವನ್ನೂ ತಿಳಿಸಿದ್ದಾಗಿದೆ. ಮುಂದಿನ ಸಂಗತಿಗಳನ್ನು ಕ್ರಮವಾಗಿ ಯಥಾವತ್ತಾಗಿ ನಿರೂಪಿಸುವೆನು ಕೇಳಿರೆಂದನು. ಈ ಮಾತುಗಳನ್ನು ಕೇಳಿದ ಮಹರ್ಷಿಗಳು, ಸೂರ್ಯಚಂದ್ರರು, ಗ್ರಹನಕ್ಷತ್ರಗಳು ಇವುಗಳ ಸಂಚಾರವನ್ನು ದಯವಿಟ್ಟು ತಿಳಿಸಬೇಕೆಂದು ಸೂತಪುರಾಣೀಕನನ್ನು ಬೇಡಿದರು.

೩-೪. ಋಷಿಗಳು ಹೇಳಿದರು :—ಎಲೈ ಸೂತಮುನಿಯೇ, ಜ್ಯೋತಿರ್ಗಣಗಳು ಆಕಾಶದಲ್ಲಿ ಮಂಡಲಾಕಾರವಾಗಿ ಒಂದಕ್ಕೊಂದು ಸಂಬಂಧವಿಲ್ಲದೆಯೇ ಹೇಗೆ ಗುಂಪು

ಏತದ್ವೇದಿತುಮಿಚ್ಛಾಮಸ್ತನ್ನೋ ನಿಗದ ಸತ್ತಮ ।
ಭೂತಸಂಮೋಹನಂ ತಚ್ಚ್ರೋತುಮಿಚ್ಛಾ ಪ್ರವರ್ತತೇ ॥ ೪ ॥

॥ ಸೂತ ಉವಾಚ ॥

ಭೂತಸಂಮೋಹನಂ ಹ್ಯೇತದ್ ಧ್ರುವತೋ ಮೇ ನಿಬೋಧತ ।
ಪ್ರತ್ಯಕ್ಷಮಪಿ ದೃಶ್ಯಂ ಯತ್ತತ್ ಸಂಮೋಹಯತೇ ಪ್ರಜಾಃ ॥ ೫ ॥

ಯೋಽಸೌ ಚತುರ್ದಿಶಂ ಪುಚ್ಛೇ ಶಿಶುಮಾರೇ ವ್ಯವಸ್ಥಿತಃ ।
ಉತ್ತಾನಪಾದಪುತ್ರೋಽಸೌ ಮೇಢೀಭೂತೋ ಧ್ರುವೋ ದಿವಿ ॥ ೬ ॥

ಸಹಿ ಭ್ರಮನ್ ಭ್ರಾಮಯತೇ ಚಂದ್ರಾದಿತ್ಯೌ ಗ್ರಹೈಃ ಸಹ ।
ಭ್ರಮಂತಮನುಗಚ್ಛಂತಿ ನಕ್ಷತ್ರಾಣಿ ಚ ಚಕ್ರವತ್ ॥ ೭ ॥

---

ಗುಂಪಾಗಿ ಸಂಚರಿಸುತ್ತವೆ ಅವುಗಳನ್ನು ಸುತ್ತಿಸುವವರು ಯಾರು? ಅಥವಾ ಸ್ವಂತವಾಗಿಯೇ ಇತರ ಪ್ರೇರಣೆಯಿಲ್ಲವೆಯೇ ಸುತ್ತುತ್ತವೆಯೇ? ಈ ವಿಷಯವು ಮನುಷ್ಯರಿಗೆ ಭ್ರಾಮಕವಾಗಿದೆ. ಆದುದರಿಂದ ಕೇಳಬೇಕೆಂಬ ಕುತೂಹಲವು ಬಹಳವಾಗಿರುವುದು. ತಿಳಿಸಬೇಕೆಂದು ಮುನಿಗಳು ಸೂತನನ್ನು ಪ್ರಾರ್ಥಿಸಿಕೊಂಡರು.

೫. ಸೂತಮುನಿಯು ಹೇಳಿದನು :—ಈ ಜ್ಯೋತಿರ್ಮಂಡಲದ ವಿಚಾರವು ಪ್ರಾಣಿಗಳಿಗೆ ಆಶ್ಚರ್ಯಕರವಾಗಿರುವುದು ನಿಜ. ಅದು ಪ್ರತ್ಯಕ್ಷವಾಗಿ ದೃಷ್ಟಿಗೆ ವಿಷಯವಾಗಿದ್ದರೂ ಪ್ರಜೆಗಳಿಗೆ ಭ್ರಮಜನಕವಾಗಿಯೇ ಇರುತ್ತದೆ. ಇದನ್ನು ತಿಳಿಸುವೆನು ಕೇಳಿರೆಂದನು.

೬. ಯಾವ ಉತ್ತಾನಪಾದರಾಯನ ಮಗನಾದ ಧ್ರುವಮಹಾರಾಯನು ಅಂತರಿಕ್ಷದಲ್ಲಿ ನಾಲ್ಕು ದಿಕ್ಕುಗಳನ್ನು ವ್ಯಾಪಿಸಿಕೊಂಡಿರುವ ಶಿಶುಮಾರರೂಪಿಯಾದ ಶ್ರೀಭಗವಂತನ ಪುಚ್ಛವನ್ನು ಆಶ್ರಯಿಸಿಕೊಂಡು ಶಾಶ್ವತನಾಗಿರುವನೋ ಅವನೇ ಸರ್ವಪ್ರೇರಕನಾಗಿರುವನು.

೭. ಅಂತಹ ಧ್ರುವನು ತಾನು ಸಂಚರಿಸುತ್ತಾ ಚಂದ್ರಸೂರ್ಯರನ್ನೂ ಗ್ರಹನಕ್ಷತ್ರಗಳನ್ನೂ ತಿರಿಗಿಸುತ್ತಾನೆ. ಆ ಸೂರ್ಯಚಂದ್ರಾದಿಗ್ರಹಗಳು ಸಂಚರಿಸುವ ಧ್ರುವನನ್ನು ಅನುಸರಿಸಿ ಚಕ್ರವನ್ನು ವಸ್ತುಗಳು ಅನುಸರಿಸುವಂತೆ ಸುತ್ತುತ್ತವೆ.

ಧ್ರುವಸ್ಯ ಮನಸಾ ಚಾಸೌ ಸರ್ಪತೇ ಭಗಣಃ ಸ್ವಯಂ ।
ಸೂರ್ಯಾಚಂದ್ರಮಸೌ ತಾರಾ ನಕ್ಷತ್ರಾಣಿ ಗ್ರಹೈಃ ಸಹ ॥ ೮ ॥

ವಾತಾನೀಕಮಯೈರ್ಬಂಧೈರ್ಧ್ರುವೇ ಬದ್ಧಾನಿ ತಾನಿ ವೈ ।
ತೇಷಾಂ ಯೋಗಶ್ಚ ಭೇದಾಶ್ಚ ಕಾಲಚಾರಸ್ತಥೈವ ಚ ॥ ೯ ॥

ಅಸ್ತೋದಯೌ ತಥೋತ್ಪಾತೌ ಅಯನೇ ದಕ್ಷಿಣೋತ್ತರೇ ।
ವಿಷುವದ್ಗ್ರಹವರ್ಣಾಶ್ಚ ಧ್ರುವಾತ್ಸರ್ವಂ ಪ್ರವರ್ತತೇ ॥ ೧೦ ॥

ವರ್ಷಾ ಘರ್ಮೋ ಹಿಮಂ ರಾತ್ರಿಃ ಸಂಧ್ಯಾ ಚೈವ ದಿನಂ ತಥಾ ।
ಶುಭಾಶುಭಂ ಪ್ರಜಾನಾಂ ಚ ಧ್ರುವಾತ್ಸರ್ವಂ ಪ್ರವರ್ತತೇ ॥ ೧೧ ॥

ಧ್ರುವೇಣಾಧಿಕೃತಾಂಶ್ಚೈವ ಸೂರ್ಯೋಽಪಾವೃತ್ಯ ತಿಷ್ಠತಿ ।
ತದೇಷ ದೀಪ್ತಕಿರಣಃ ಸ ಕಾಲಾಗ್ನಿರ್ದಿವಾಕರಃ ॥ ೧೨ ॥

---

೮. ಆ ಜ್ಯೋತಿರ್ಮಂಡಲವು ಧ್ರುವನ ಇಚ್ಛೆಯಿಂದ ಸಂಚರಿಸುವುದು. ಸೂರ್ಯಚಂದ್ರಾದಿಗಳು ತಾರಾಗಣಗಳೂ, ನಕ್ಷತ್ರಗಳೂ, ಗ್ರಹಗಳೂ ಕೂಡ ಧ್ರುವ ಗತಿಯನ್ನೇ ಅನುಸರಿಸಿ ಸಂಚಾರಮಾಡುವುವು.

೯-೧೦. ಆ ಜ್ಯೋತಿರ್ಗಣದ ಯೋಗ, ಭೇದ, ಕಾಲ ಮತ್ತು ಚಾರಗಳು ವಾಯುಸೈನ್ಯಮಯಗಳಾದ ಬಂಧಕ್ಕೆ ಒಳಪಟ್ಟು ಧ್ರುವಗತಿಗನುಗುಣವಾಗಿವೆ. ಆ ಧ್ರುವಗತಿಯಿಂದಲೇ ಸೂರ್ಯಾದಿಗ್ರಹಗಳ ಅಸ್ತೋದಯಾದಿಗಳೂ ಉತ್ಪಾತಗಳೂ, ದಕ್ಷಿಣೋತ್ತರಾಯನಗಳೂ, ವಿಷುವತ್ಪುಣ್ಯಕಾಲಗ್ರಹಾದಿಗಳೂ ಸಂಭವಿಸುತ್ತವೆ.

೧೧. ವೃಷ್ಟಿ, ತಾಪ, ಹಿಮ, ರಾತ್ರಿ, ಸಂಧ್ಯಾ, ದಿನ ಮತ್ತು ಪ್ರಜೆಗಳ ಪುಣ್ಯಪಾಪಾನುಗುಣಗಳಾದ ಶುಭಾಶುಭಕರ್ಮಗಳು ಇವುಗಳೆಲ್ಲ ಧ್ರುವನಿಂದಲೇ ಉಂಟಾಗುತ್ತವೆ.

೧೨. ಧ್ರುವನಿಂದ ಅಧಿಕೃತವಾದ ಗ್ರಹಾದಿಗಳನ್ನು ಸೂರ್ಯನು ಆವರಿಸಿ ಕೊಂಡಿರುತ್ತಾನೆ. ಆದುದರಿಂದಲೇ ಸೂರ್ಯನು ಪ್ರಜ್ವಲಿಸುವ ಕಿರಣಗಳಿಂದ ಸಹಿತನಾಗಿ ಪ್ರಲಯಕಾಲದ ಅಗ್ನಿಯಂತೆ ಹೊಳೆಯುವನು.

ಪರಿವರ್ತಕ್ರಮಾದ್ವಿಪ್ರಾ ಭಾಭಿರಾಲೋಕರ್ಯ ದಿಶಃ ।
ಸೂರ್ಯಃ ಕಿರಣಜಾಲೇನ ವಾಯುಯುಕ್ತೇನ ಸರ್ವಶಃ ॥
ಜಗತೋ ಜಲಮಾದತ್ತೇ ಕೃತ್ಸ್ನಸ್ಯ ದ್ವಿಜಸತ್ತಮಾಃ ॥ ೧೩ ॥

ಆದಿತ್ಯಪೀತಂ ಸೂರ್ಯಾಗ್ನೇಃ ಸೋಮಂ ಸಂಕ್ರಮತೇ ಜಲಂ ।
ನಾಡೀಭಿರ್ವಾಯುಯುಕ್ತಾಭಿರ್ಲೋಕಾಧಾನಾಂ ಪ್ರವರ್ತತೇ ॥ ೧೪ ॥

ಯತ್ಸೋಮಾತ್ ಸ್ರವತೇ ಸೂರ್ಯಸ್ತದಗ್ನೇಷ್ವತಿಷ್ಠತೇ ।
ಮೇಘಾ ವಾಯುನಿಘಾತೇನ ವಿಸೃಜಂತಿ ಜಲಂ ಭುವಿ ॥ ೧೫ ॥

ಏವಮುತ್‌ಕ್ಷಿಪ್ಯತೇ ಚೈವ ಪತತೇ ಚ ಪುನರ್ಜಲಂ ।
ನಾನಾಪ್ರಕಾರಮುದಕಂ ತದೇವ ಪರಿವರ್ತತೇ ॥ ೧೬ ॥

---

೧೩. ಎಲೈ ದ್ವಿಜೋತ್ತಮರಾದ ಮುನಿವರ್ಯರೇ, ಸೂರ್ಯನು ಮೇರು ವನ್ನು ಕ್ರಮವಾಗಿ ಸುತ್ತುವ ಕಾಲದಲ್ಲಿ ತನ್ನ ಕಿರಣಗಳಿಂದ ದಿಕ್ಕುಗಳನ್ನು ನೋಡುತ್ತಾ ಸಂಪೂರ್ಣವಾದ ವಾಯುಸಹಾಯದಿಂದ ತನ್ನ ಕಿರಣಗಳಿಂದ ಸಮಸ್ತಲೋಕದಲ್ಲಿ ರುವ ಜಲವನ್ನು ಸ್ವೀಕರಿಸುತ್ತಾನೆ.

೧೪-೧೫. ಸೂರ್ಯನಿಂದ ಪೀತವಾದ ಜಲವು ಸೂರ್ಯನ ಕಿರಣಗಳ ಮೂಲಕ ಚಂದ್ರನನ್ನು ಸೇರುತ್ತದೆ. ಅನಂತರ ವಾಯುಸಹಾಯಯುಕ್ತವಾದ ಕಿರಣ ಗಳಿಂದ ಲೋಕಾಧಾರವಾಗಿ ಬೀಳುವುದು. ಚಂದ್ರನಿಂದ ಸುರಿಯುವ ಜಲವನ್ನು ಸೂರ್ಯನು ಮುಂಭಾಗದಲ್ಲಿ ಇಟ್ಟುಕೊಂಡಿರುತ್ತಾನೆ. ಅನಂತರ ವಾಯುವಿನ ಹೊಡೆತದಿಂದ ಮೋಡಗಳು ನೀರನ್ನು ಭೂಮಿಯಲ್ಲಿ ಕರೆಯುತ್ತವೆ.

೧೬. ಹೀಗೆ ಸೂರ್ಯನು ಭೂಮಿಯಲ್ಲಿರುವ ಜಲವನ್ನು ಪುನಃ ಕಿರಣಗಳ ಮೂಲಕ ಸ್ವೀಕರಿಸುವನು. ಅದು ಪುನಃ ಭೂಮಿಯಲ್ಲಿ ಬಿದ್ದು ನಾನಾರೂಪವಾಗಿ ಪರಿಣಿತವಾಗುತ್ತದೆ.

ಸಂಧಾರಣಾರ್ಥಂ ಭೂತಾನಾಂ ಮಾಯೈಷಾ ವಿಶ್ವನಿರ್ಮಿತಾ ।
ಅನಯಾ ಮಾಯಯಾ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥ ೧೭ ॥

ವಿಶ್ವೇಶೋ ಲೋಕಕೃದ್ದೇವಃ ಸಹಸ್ರಾಂಶುಃ ಪ್ರಜಾಪತಿಃ ।
ಧಾತಾ ಕೃತ್ಸ್ನಸ್ಯ ಲೋಕಸ್ಯ ಪ್ರಭುರ್ವಿಷ್ಣುರ್ದಿವಾಕರಃ ॥ ೧೮ ॥

ಸರ್ವಲೌಕಿಕಮಂಭೋ ವೈ ಯತ್ಸೋಮಾನ್ನಭಸಃ ಸ್ರುತಂ ।
ಸೋಮಾಧಾರಂ ಜಗತ್ಸರ್ವಮೇತತ್ತಥ್ಯಂ ಪ್ರಕೀರ್ತಿತಂ ॥ ೧೯ ॥

ಸೂರ್ಯಾದುಷ್ಣಂ ನಿಸ್ರವತೇ ಸೋಮಾಚ್ಛೀತಂ ಪ್ರವರ್ತತೇ ।
ಶೀತೋಷ್ಣವೀರ್ಯೌ ದ್ವಾವೇತೌ ಯುಕ್ತೌ ಧಾರಯತೋ ಜಗತ್ ॥ ೨೦ ॥

---

೧೭. ಶ್ರೀ ಭಗವಂತನು ಸರ್ವಭೂತಗಳ ಸ್ಥಿತಿಗಳಿಗೋಸ್ಕರ ಮಾಯೆಯನ್ನು ಸೃಷ್ಟಿಸಿರುವನು. ಇಂತಹ ಮಾಯೆಯಿಂದ ಚರಾಚರಾತ್ಮಕವಾದ ಮೂರು ಲೋಕಗಳೂ ವ್ಯಾಪ್ತವಾಗಿವೆ.

೧೮. ಜಗದೊಡೆಯನೂ, ಲೋಕಕರ್ತನೂ, ಕ್ರೀಡಾದಿಗುಣಯುಕ್ತನೂ, ಸಹಸ್ರಕಿರಣಗಳುಳ್ಳವನೂ, ಪ್ರಜೆಗಳಿಗೆ ಒಡೆಯನೂ, ಸ್ವಾಮಿಯೂ, ಸೂರ್ಯಾಂತರ್ಯಾಮಿಯೂ, ದಿನಾದಿಕಾರಕನೂ ಆದ ಮಹಾವಿಷ್ಣುವೇ ಸಮಸ್ತಲೋಕಗಳಿಗೂ ಆಶ್ರಯನಾಗಿರುವನು.

೧೯. ಈ ಜಗತ್ತಿನಲ್ಲಿರುವ ಭೌತಿಕವಾದ ಜಲವೆಲ್ಲ ಸೋಮನ ಮೂಲಕ ಆಕಾಶದಿಂದ ಭೂಮಿಯಲ್ಲಿ ಬಿದ್ದ ಜಲವೇ ಆಗಿರುತ್ತದೆ. ಆದುದರಿಂದ ಜಲಾಧೀನವಾದ ಜಗತ್ತೆಲ್ಲ ಚಂದ್ರನ ಅಧೀನದಲ್ಲಿರುತ್ತದೆ. ಇದು ನಿಜವಾದ ಸಂಗತಿಯಾಗಿದೆ. ಜಲವಿಲ್ಲದೆ ಯಾವ ಪ್ರಾಣಿಯೂ ಜೀವಿಸದ ಕಾರಣ ಜಗತ್ತೇ ಚಂದ್ರನ ಅಧೀನದಲ್ಲಿರುತ್ತದೆ.

೨೦. ಸೂರ್ಯನಿಂದ ಉಷ್ಣವೂ, ಚಂದ್ರನಿಂದ ಶೀತವೂ ಈ ಸಮಸ್ತ ಜಗತ್ತಿಗೂ ಉಂಟಾಗುತ್ತವೆ. ಸೂರ್ಯಚಂದ್ರರಿಬ್ಬರು ಶೀತೋಷ್ಣಸ್ವರೂಪಿಗಳಾಗಿರುವರು. ಶೀತೋಷ್ಣಗಳೆರಡರಿಂದಲೂ ಜಗತ್ತು ಉಳಿದಿದೆ. ಆದುದರಿಂದ ಸೂರ್ಯಚಂದ್ರರಿಬ್ಬರೂ ಕೂಡಿ ಜಗದ್ರಕ್ಷಕರಾಗಿರುವರು.

**ಸೋಮಾಧಾರಾ ನದೀ ಗಂಗಾ ಪವಿತ್ರಾ ವಿಮಲೋದಕಾ ।**
**ಸೋಮಪುತ್ರಪುರೋಗಾಶ್ಚ ಮಹಾನದ್ಯೋ ದ್ವಿಜೋತ್ತಮಾಃ ॥ ೨೧ ॥**

**ಸರ್ವಭೂತಶರೀರೇಷು ಆಪೋ ಹ್ಯನುಗತಾಶ್ಚ ಯಾಃ ।**
**ತೇಷು ಸಂದಹ್ಯಮಾನೇಷು ಜಂಗಮಸ್ಥಾವರೇಷು ಚ ॥**
**ಧೂಮಭೂತಾಸ್ತು ತಾ ಆಪೋ ನಿಷ್ಕ್ರಾಮಂತೀಹ ಸರ್ವಶಃ ॥ ೨೨ ॥**

**ತೇನ ಚಾಭ್ರಾಣಿ ಜಾಯಂತೇ ಸ್ಥಾನಮಾತ್ರಂಭಸಾಂ ಸ್ಮೃತಂ ।**
**ಆರ್ಕಂ ತೇಜೋ ಹಿ ಭೂತೇಭ್ಯೋ ಹ್ಯಾದತ್ತೇ ರಶ್ಮಿಭಿರ್ಜಲಂ ॥ ೨೩ ॥**

**ಸಮುದ್ರಾದ್ವಾಯುಸಂಯೋಗಾದ್ವಹಂತ್ಯಾಪೋ ಗಭಸ್ತಯಃ ।**
**ಯತಸ್ತ್ವತುವಶಾತ್ ಕಾಲೇ ಪರಿವರ್ತೋ ದಿವಾಕರಃ ॥**
**ಯಚ್ಛತ್ಯಪೋ ಹಿ ಮೇಘೇಭ್ಯಃ ಶುಕ್ಲಾಃ ಶುಕ್ಲಗಭಸ್ತಿಭಿಃ ॥ ೨೪ ॥**

---

೨೧. ಸ್ವಚ್ಛವಾದ ಜಲವುಳ್ಳದ್ದೂ, ಅತಿಪವಿತ್ರವೂ ಆದ ಗಂಗೆಯು ಸೋಮಾಧಾರವಾಗಿದೆ. ಎಲೈ ಮುನಿವರ್ಯರೇ, ಗಂಗೆಯೇ ಮೊದಲಾದ ಮಹಾ ನದಿಗಳೆಲ್ಲ ಚಂದ್ರನಿಂದಲೇ ಸಂಭೂತಗಳಾಗಿವೆ.

೨೨. ಸರ್ವಪ್ರಾಣಿಗಳ ದೇಹದಲ್ಲಿಯೂ ಜಲವು ಅನುಸ್ಯೂತವಾಗಿದೆ. ಚರಾಚರಾತ್ಮಕವಾದ ಸರ್ವಭೂತಗಳೂ ಪ್ರಲಯಕಾಲದಲ್ಲಿ ಸುಟ್ಟು ಭಸ್ಮವಾಗಲು ಅವುಗಳಲ್ಲಿದ್ದ ಜಲಭಾಗವು ಆವಿಯಾಗಿ ಮೇಲಕ್ಕೆ ಹೋಗುವುದು.

೨೩. ಆ ಹಬೆಯಿಂದಲೇ ಮೇಘಗಳಾಗುತ್ತವೆ. ಆ ಮೇಘಗಳೇ ಜಲಕ್ಕೆ ಆಧಾರವಾಗಿವೆ. ಸೂರ್ಯನ ರಶ್ಮಿಗಳು ಸರ್ವಭೂತಗತವಾದ ಸರ್ವಜಲಾಶಯ ಗಳಲ್ಲಿರುವ ಜಲವನ್ನೂ ಸ್ವೀಕರಿಸುತ್ತವೆ.

೨೪. ಸೂರ್ಯರಶ್ಮಿಗಳು ವಾಯುಸಹಾಯದಿಂದ ಸಮುದ್ರಗಳ ಜಲವನ್ನು ಸ್ವೀಕರಿಸುತ್ತವೆ. ಸೂರ್ಯನು ಋತು ಮತ್ತು ಕಾಲಾನುಗುಣವಾಗಿ ಸಂಚರಿಸುತ್ತಾನೆ. ಆಗ ತನ್ನ ಶುಭ್ರವಾದ ಕಿರಣಗಳಿಂದ ಸ್ವಚ್ಛವಾದ ಜಲವನ್ನು ಮೇಘಗಳಿಗೆ ಕೊಡುತ್ತಾನೆ.

ಅಭ್ರಸ್ಥಾ ಪ್ರಪತಂತ್ಯಾಪೋ ವಾಯುನಾ ಸಮುದೀರಿತಾಃ ।
ಸರ್ವಭೂತಹಿತಾರ್ಥಾಯ ವಾಯುಭಿಶ್ಚ ಸಮಂತತಃ ॥ ೨೫ ॥

ತತೋ ವರ್ಷತಿ ಷಣ್ಮಾಸಾನ್ ಸರ್ವಭೂತವಿವೃದ್ಧಯೇ ।
ವಾಯವ್ಯಂ ಸ್ತನಿತಂ ಚೈವ ವೈದ್ಯುತಂಚಾಗ್ನಿಸಂಭವಂ ॥ ೨೬ ॥

ಮೇಹನಾಚ್ಚ ಮಿಹೋರ್ಧಾತೋರ್ಮೇಘತ್ವಂ ವ್ಯಂಜಯಂತಿ ಚ ।
ನ ಭ್ರಶ್ಯಂತಿ ಯತಸ್ತ್ವಾಪಸ್ತದಭ್ರಂ ಕವಯೋ ವಿದುಃ ॥ ೨೭ ॥

ಮೇಘಾನಾಂ ಪುನರುತ್ಪತ್ತಿಸ್ತ್ರಿವಿಧಾ ಯೋನಿರುಚ್ಯತೇ ।
ಆಗ್ನೇಯಾ ಬ್ರಹ್ಮಜಾಶ್ಚೈವ ಪಕ್ಷಜಾಶ್ಚ ಪೃಥಗ್ವಿಧಾಃ ॥
ತ್ರಿಧಾ ಘನಾಃ ಸಮಾಖ್ಯಾತಾಸ್ತೇಷಾಂ ವಕ್ಷ್ಯಾಮಿ ಸಂಭವಂ ॥ ೨೮ ॥

---

೨೫. ಮೇಘದಲ್ಲಿರತಕ್ಕ ಜಲವು ವಾಯುಪ್ರೇರಿತವಾಗಿ ಸಕಲ ಭೂತಗಳ ಕ್ಷೇಮಕ್ಕಾಗಿ ಗಾಳಿಯ ಸಂಗಡ ಭೂಮಂಡಲದಲ್ಲಿ ಸರ್ವತ್ರ ಬೀಳುವುದು.

೨೬. ಅನಂತರ ಸೂರ್ಯನು ಸರ್ವಭೂತಗಳ ಹಿತಕ್ಕಾಗಿ ಆರುತಿಂಗಳ ಕಾಲ ಮೇಘಗಳ ಮೂಲಕ ಮಳೆಯನ್ನು ಸುರಿಸುತ್ತಾನೆ. ವಾಯುವಿನಿಂದ ಗುಡುಗೂ, ಅಗ್ನಿಯಿಂದ ಮಿಂಚೂ ಸಂಭವಿಸುತ್ತವೆ. ಗುಡುಗು, ಮಿಂಚು, ವೃಷ್ಟಿಯು ಉಂಟಾಗುವುವು.

೨೭. ಮಿಹ-ಸೇಚನೇ ಎಂಬ ಸೇಚನಾರ್ಥಕವಾದ ಮಿಹಧಾತುವಿನಿಂದ ಮೇಘ ಶಬ್ದವು ನಿಷ್ಪನ್ನವಾಗಿದೆ. ಮೇಘವೆಂದರೆ ಸೇಚನೆಮಾಡುವುದು ಎಂಬ ಅರ್ಥವಾಗುವುದು. ಜಲವು ಭ್ರಂಶವಾಗದೇ ಅಂದರೆ ನಾಶವಾಗದೇ ಅದನ್ನು ಧರಿಸುವುದರಿಂದ ಅಭ್ರಶಬ್ದವು ನಿಷ್ಪನ್ನವಾಗಿದೆ. ಹೀಗೆ ಕವಿಗಳು ಮೇಘ ಮತ್ತು ಅಭ್ರಶಬ್ದಗಳ ನಿಷ್ಪತ್ತಿಗಳನ್ನು ಹೇಳುವರು.

೨೮. ಮೇಘಗಳು ಮೂರು ರೀತಿಯಲ್ಲಿ ಉತ್ಪನ್ನವಾಗುತ್ತವೆ. ಮೊದಲನೆಯದು ಆಗ್ನೇಯ, ಅಗ್ನಿಜನ್ಯವಾದುದು. ಎರಡನೆಯದು ಬ್ರಹ್ಮಜ, ಬ್ರಹ್ಮಜನ್ಯಗಳು. ಮೂರನೆಯದು ಪಕ್ಷಜ, ಪಕ್ಷಜನ್ಯಗಳು. ಹೀಗೆ ಮೂರು ವಿಧಗಳಾಗಿವೆ. ಅವುಗಳ ಉತ್ಪತ್ತಿಕ್ರಮಗಳನ್ನು ಕ್ರಮವಾಗಿ ತಿಳಿಸುವೆನು ಕೇಳಿರೆಂದನು.

**ಆಗ್ನೇಯಾಸ್ತ್ವರ್ಣಜಾಃ ಪ್ರೋಕ್ತಾಸ್ತೇಷಾಂ ತಸ್ಮಾತ್ ಪ್ರವರ್ತನಂ ।**
**ಶೀತದುರ್ದಿನವಾತಾ ಯೇ ಸ್ವಗುಣಾಸ್ತೇ ವ್ಯವಸ್ಥಿತಾಃ ॥ ೨೯ ॥**

**ಮಹಿಷಾಶ್ಚ ವರಾಹಾಶ್ಚ ಮತ್ತಮಾತಂಗಗಾಮಿನಃ ।**
**ಭೂತ್ವಾ ಧರಣಿಮಭ್ಯೇತ್ಯ ವಿಚರಂತಿ ರಮಂತಿ ಚ ॥ ೩೦ ॥**

**ಜೀಮೂತಾ ನಾಮ ತೇ ಮೇಘಾ ಏತೇಭ್ಯೋ ಜೀವಸಂಭವಾಃ ।**
**ವಿದ್ಯುದ್ಗುಣವಿಹೀನಾಶ್ಚ ಜಲಧಾರಾವಿಲಂಬಿನಾ ॥ ೩೧ ॥**

**ಮೂಕಾ ಘನಾ ಮಹಾಕಾಯಾ ಪ್ರವಾಹಸ್ಯ ವಶಾನುಗಾಃ ।**
**ಕ್ರೋಶಮಾತ್ರಾಂ ಚ ವರ್ಷಂತಿ ಕ್ರೋಶಾದರ್ಧಾದಪಿ ವಾ ಪುನಃ ॥ ೩೨ ॥**

---

೨೯. ಆಗ್ನೇಯವೆಂದರೆ ಜಲದಿಂದ ಉತ್ಪನ್ನವಾದದ್ದು ಎಂಬ ಅರ್ಥವಾಗುವುದು. ಜಲದಿಂದ ಮೇಘಗಳಾಗುವುದು ಸುಪ್ರಸಿದ್ಧಗಳಾಗಿದೆ. ಆ ಜಲಗತವಾದ ಶೀತ, ಮೇಘಾವೃತವಾದ ದಿವಸ, ವಾತ ಇವುಗಳೇ ಮೇಘದ ಮುಖ್ಯವಾದ ಗುಣವಾಗಿದೆ. ಜಲಾದಿಗಳಲ್ಲಿರುವ ಗುಣಗಳೇ ಮೇಘದಲ್ಲಿದುತ್ತದೆ.

೩೦. ಅಂತಹ ಮೇಘಗಳಿಂದ ಮಳೆಯು ಬಂದಾಗ ಕೋಣಗಳು, ಹಂದಿಗಳು, ಮದಗಜಗಳು ಇವುಗಳು ಜನಿಸಿ ಸಂಚರಿಸುವುವು. ಇವು ಮೇಘಗಳಂತೆ ಆಕಾರವುಳ್ಳವುಗಳಾಗಿವೆ. ಅವು ಮಳೆ ಬಂದಾಗ ಆನಂದಪಡುತ್ತವೆ.

೩೧-೩೨. ಜೀಮೂತನಾಮಕ ಮೇಘಗಳಿಂದ ಜೀವೋತ್ಪತ್ತಿಗಳಾಗುತ್ತವೆ. ಅವುಗಳಲ್ಲಿ ಮಿಂಚು, ಗುಡುಗು ಇರುವುದಿಲ್ಲ. ಧಾರಾಕಾರವಾಗಿ ಸುರಿಯುತ್ತವೆ. ಮೇಘಗಳು ಬೃಹತ್ತಾಗಿಯೂ, ನಿಶ್ಶಬ್ದವಾಗಿಯೂ ಮಳೆಯನ್ನು ಧಾರಾಕಾರವಾಗಿ ಸುರಿಸಿ ಮಹಾನದಿಪ್ರವಾಹಕ್ಕೆ ಕಾರಣಗಳಾಗುತ್ತವೆ. ಅದು ಒಂದು ಕ್ರೋಶ ಅಥವಾ ಅರ್ಧಕ್ರೋಶ ಮಾತ್ರದಲ್ಲಿ ಮಳೆಯನ್ನು ಸುರಿಸುತ್ತದೆ.

**ಪರ್ವತಾಗ್ರನಿತಂಬೇಷು ವರ್ಷಂತಿ ಚ ರಮಂತಿ ಚ ।**
**ಬಲಾಕಾಗರ್ಭದಾಶ್ಚೈವ ಬಲಾಕಾಗರ್ಭಧಾರಿಣಃ ॥ ೩೩ ॥**

**ಬ್ರಹ್ಮಜಾ ನಾಮ ತೇ ಮೇಘಾ ಬ್ರಹ್ಮನಿಃಶ್ವಾಸಸಂಭವಾಃ ।**
**ತೇ ಹಿ ವಿದ್ಯುದ್ಗುಣೋಪೇತಾಃ ಸ್ತನಯಂತಿ ಸ್ವನಪ್ರಿಯಾಃ ॥ ೩೪ ॥**

**ತೇಷಾಂ ಶಬ್ದಪ್ರಣಾದೇನ ಭೂಮಿಃ ಸ್ವಾಂಗರುಹೋದ್ಗಮಾ ।**
**ರಾಜ್ಞೀ ರಾಜಾಭಿಷಿಕ್ತೇನ ಪುನರ್ಯೋವನಮಶ್ನುತೇ ॥**
**ತೇಷ್ವಿಯಂ ಪ್ರತಿಮಾಸಕ್ತಾ ಭೂತಾನಾಂ ಜೀವಿತೋದ್ಭವಾ ॥ ೩೫ ॥**

**ಜೀಮೂತಾ ನಾಮ ತೇ ಮೇಘಾ ತೇಭ್ಯೋ ಜೀವಸ್ಯ ಸಂಭವಃ ।**
**ದ್ವಿತೀಯಂ ಪ್ರವಹಂ ವಾಯುಂ ಮೇಘಾಸ್ತೇ ತು ಸಮಾಶ್ರಿತಾಃ ॥ ೩೬ ॥**

**ಏತೇ ಯೋಜನಮಾತ್ರಾಚ್ಚ ಸಾರ್ಧಾರ್ಧಾನ್ನಿಷ್ಕೃತಾದಪಿ ।**
**ವೃಷ್ಟಿಸರ್ಗಸ್ತಥಾ ತೇಷಾಂ ಧಾರಾಸಾರಾಃ ಪ್ರಕೀರ್ತಿತಾಃ ॥**
**ಪುಷ್ಕರಾವರ್ತಕಾ ನಾಮ ಯೇ ಮೇಘಾಃ ಪಕ್ಷಸಂಭವಾಃ ॥ ೩೭ ॥**

---

೩೩. ಈ ವೃಷ್ಟಿಯು ಪರ್ವತಗಳ ಶಿಖರಗಳಲ್ಲಿಯೂ ತಪ್ಪಲುಗಳಲ್ಲಿಯೂ ವಿಶೇಷವಾಗಿ ಬೀಳುವುದು. ಆ ಕಾಲದಲ್ಲಿ ಬಕಹಂಸವೇ ಮೊದಲಾದ ಪಕ್ಷಿಗಳು ಸುಖವಾಗಿದ್ದು ಗರ್ಭವನ್ನು ಧರಿಸುತ್ತವೆ. ಮೇಘಗಳೂ ಶುಭ್ರವಾಗಿರುತ್ತವೆ.

೩೪. ಬ್ರಹ್ಮಜವೆಂಬ ಮೋಡಗಳು ಬ್ರಹ್ಮದೇವನ ನಿಶ್ವಾಸದಿಂದ ಉತ್ಪನ್ನವಾಗಿವೆ. ಅವು ಮಿಂಚು, ಗುಡುಗು ಇವುಗಳಿಂದ ಕೂಡಿ ಭಯಂಕರವಾಗಿ ಘರ್ಜಿಸುತ್ತವೆ.

೩೫. ಆ ಮೇಘಗಳ ಧ್ವನಿಯಿಂದ ಭೂಮಿಯಲ್ಲಿ ಅನೇಕ ಲತಾಗುಲ್ಮಗಳು ಉದ್ಭವಿಸುತ್ತವೆ. ಪಟ್ಟಾಭಿಷಿಕ್ತರಾಣಿಯಂತೆ ಯೌವನವನ್ನು ಪಡೆಯುತ್ತವೆ. ಆ ಮೇಘಗಳಿಂದಲೂ ಅನೇಕ ಪ್ರಾಣಿಗಳು ಹುಟ್ಟಿ ಜೀವಿಸುತ್ತವೆ.

೩೬.೩೭. ಜೀಮೂತನಾಮಕಮೇಘಗಳಿಂದ ಜೀವೋತ್ಪತ್ತಿಗಳಾಗುತ್ತವೆ. ಆ ಮೋಡಗಳು ಪ್ರವಾಹನಾಮಕವಾಯುವನ್ನು ಆಶ್ರಯಿಸಿ ವೃಷ್ಟಿಜನಕಗಳಾಗಿವೆ. ಅವು ಒಂದು ಯೋಜನ ಅಥವಾ ಒಂದೂವರೆ ಯೋಜನದವರೆಗೂ ಅದಕ್ಕಿಂತಲೂ ಸ್ವಲ್ಪ ಹೆಚ್ಚುಕಡಮೆಯಾಗಿ ಮಳೆಯನ್ನು ಸುರಿಸುತ್ತವೆ. ಈ ಮಳೆಯೂ ಸಹ ಧಾರಾಕಾರವಾಗಿಯೂ ಅವಿಚ್ಛಿನ್ನವಾಗಿಯೂ ಆಗುವುದು.

**ಶಕ್ರೇಣ ಪಕ್ಷಾಶ್ಛಿನ್ನಾ ಯೇ ಪರ್ವತಾನಾಂ ಮಹೌಜಸಾಂ |**
**ಕಾಮಗಾನಾಂ ಪ್ರವೃದ್ಧಾನಾಂ ಭೂತಾನಾಂ ಶಿವಮಿಚ್ಛತಾಂ || ೩೮ ||**

**ಪುಷ್ಕರಾ ನಾಮ ತೇ ಮೇಘಾ ಬೃಹಂತಸ್ತೋಯಮತ್ಸರಾಃ |**
**ಪುಷ್ಕರಾವರ್ತಕಾಸ್ತೇನ ಕಾರಣೇನೇಹ ಶಬ್ದಿತಾಃ || ೩೯ ||**

**ನಾನಾರೂಪಧರಾಶ್ಚೈವ ಮಹಾಘೋರತರಾಶ್ಚ ತೇ |**
**ಕಲ್ಪಾಂತವೃಷ್ಟೇಃ ಸ್ರಷ್ಟಾರಃ ಸಂವರ್ತಾಗ್ನೇರ್ನಿಯಾಮಕಾಃ || ೪೦ ||**

**ವರ್ಷ್ಯಂತ್ಯೇತೇ ಯುಗಾಂತೇಷು ತೃತೀಯಾಸ್ತೇ ಪ್ರಕೀರ್ತಿತಾಃ |**
**ಅನೇಕರೂಪಸಂಸ್ಥಾನಾಃ ಪೂರಯಂತೋ ಮಹೀತಲಂ ||**
**ವಾಯುಂ ಪರಂ ವಹಂತಃ ಸ್ಯುರಾಶ್ರಿತಾಃ ಕಲ್ಪಸಾಧಕಾಃ || ೪೧ ||**

---

೩೮. ಪುಷ್ಕರಾವರ್ತಕಗಳೆಂಬ ಮೇಘಗಳು ಪರ್ವತಗಳ ಪಕ್ಷಸಂಭವಗಳಾಗಿವೆ. ಮಹಾಪರಾಕ್ರಮಿಗಳಾದ ಪರ್ವತಗಳ ರೆಕ್ಕೆಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಛೇದಿಸಿದನು. ಅವು ಸ್ವೇಚ್ಛಾಚಾರಿಗಳಾಗಿ ಪ್ರಾಣಿಹಿಂಸಕಗಳಾಗಿದ್ದವು. ಭೂತಗಳ ಕಲ್ಯಾಣಕ್ಕಾಗಿ ಇಂದ್ರನು ಪಕ್ಷಗಳನ್ನು ಛೇದಿಸಿದನು. ಆಗ ಆ ಮೇಘಗಳು ಉತ್ಪನ್ನವಾದುವು.

೩೯. ಪುಷ್ಕರನಾಮಕಮೇಘಗಳು ಮಹತ್ತಾಗಿಯೂ, ಜಲದ್ವೇಷಿಯಾಗಿಯೂ ಇರುತ್ತವೆ. ಈ ಕಾರಣದಿಂದ ಆ ಮೇಘಗಳಿಗೆ ಪುಷ್ಕರಾವರ್ತಕವೆಂಬ ನಾಮವು ಸಂಭವಿಸಿದೆ.

೪೦. ಆ ಪುಷ್ಕರಾವರ್ತಕಮೋಡಗಳು ನಾನಾರೂಪಿಗಳಾಗಿಯೂ, ಮಹಾಭಯಂಕರಗಳಾಗಿಯೂ, ಪ್ರಲಯಕಾಲದ ವೃಷ್ಟಿಗೆ ಕಾರಣಗಳಾಗಿಯೂ, ಪ್ರಲಯಕಾಲದ ಅಗ್ನಿಗೆ ನಿಯಾಮಕಗಳಾಗಿಯೂ ಇರುತ್ತವೆ.

೪೧. ಪುಷ್ಕರಾವರ್ತಕವೆಂಬ ಮೂರನೆಯ ಆ ಮೇಘಗಳು ಯುಗಾಂತದಲ್ಲಿ ನಾನಾರೂಪಿಗಳಾಗಿ ಭೂಮಿಯನ್ನು ಜಲದಿಂದ ತುಂಬುತ್ತಾ ಬಿರುಗಾಳಿಯಿಂದ ಸಹಿತವಾಗಿ ಪ್ರಲಯಕ್ಕೆ ಸಾಧಕಗಳಾಗಿವೆ.

ಯಾನ್ಯಸ್ಯಾಂಡಕಪಾಲಸ್ಯ ಪ್ರಾಕೃತಸ್ಯಾಭವಂಸ್ತದಾ ।
ತಸ್ಮಾದ್ಬ್ರಹ್ಮಾ ಸಮುತ್ಪನ್ನಶ್ಚತುರ್ವಕ್ತ್ರಃ ಸ್ವಯಂಭುವಃ ॥
ತಾನ್ಯೇವಾಂಡಕಪಾಲಸ್ಯ ಸರ್ವೇ ಮೇಘಾಃ ಪ್ರಕೀರ್ತಿತಾಃ ॥ ೪೨ ॥

ತೇಷಾಮಾಪ್ಯಾಯನಂ ಧೂಮಃ ಸರ್ವೇಷಾಮವಿಶೇಷತಃ ।
ತೇಷಾಂ ಶ್ರೇಷ್ಠಸ್ತು ಪರ್ಜನ್ಯಶ್ಚತ್ವಾರಶ್ಚೈವ ದಿಗ್ಗಜಾಃ ॥ ೪೩ ॥

ಗಜಾನಾಂ ಪರ್ವತಾನಾಂ ಚ ಮೇಘಾನಾಂ ಭೋಗಿಭಿಃ ಸಹ ।
ಕುಲಮೇಕಂ ಪೃಥಗ್ಭೂತಂ ಯೋನಿರೇಕಾ ಜಲಂ ಸ್ಮೃತಂ ॥ ೪೪ ॥

ಪರ್ಜನ್ಯೋ ದಿಗ್ಗಜಾಶ್ಚೈವ ಹೇಮಂತೇ ಶೀತಸಂಭವಾಃ ।
ತುಷಾರವೃಷ್ಟಿಂ ವರ್ಷಂತಿ ಸರ್ವಸಸ್ಯವಿವೃದ್ಧಯೇ ॥ ೪೫ ॥

---

೪೨. ಏತರಿಂದ ಪ್ರಕೃತಿಸಂಬಂಧವಾದ ಬ್ರಹ್ಮಾಂಡವು ಉತ್ಪನ್ನವಾಗಿದೆಯೋ ಅವರಿಂದಲೇ ಚತುರ್ಮುಖನೂ ಸ್ವಯಂಭುವನೂ ಆದ ಬ್ರಹ್ಮನು ಉತ್ಪನ್ನನಾದನು. ಅವೇ ಬ್ರಹ್ಮಾಂಡಕಪಾಲಕ್ಕೂ ಕಾರಣವಾಗಿದೆ. ಅವೇ ಸಮಸ್ತವಾದ ಮೇಘಗಳೆಂದು ಜನರು ಹೇಳುವರು.

೪೩. ಅಂತಹ ಮೇಘಗಳಿಗೆ ಧೂಮವೇ ಸಂತೋಷಜನಕವೂ ಕಾರಣವೂ ಆಗಿದೆ. ಅವುಗಳಿಗಿಂತಲೂ ವೃಷ್ಟಿಯೇ ಉತ್ತಮವಾಗಿದೆ. ಅದಕ್ಕಿಂತಲೂ ನಾಲ್ಕು ದಿಗ್ಗಜಗಳು ಶ್ರೇಷ್ಠಗಳಾಗಿವೆ.

೪೪. ದಿಗ್ಗಜಗಳೂ, ಪರ್ವತಗಳೂ ಮೇಘಗಳೂ ಮತ್ತು ಸರ್ಪಗಳೂ ಇವುಗಳೆಲ್ಲ ಒಂದೇ ವಂಶಕ್ಕೆ ಸೇರಿದುವುಗಳಾಗಿವೆ. ಇವು ಬೇರೆ ಬೇರೆಯಾಗಿದ್ದರೂ ಇವುಗಳಿಗೆ ಜಲವೊಂದೇ ಮೂಲಕಾರಣವಾಗಿದೆ.

೪೫. ವೃಷ್ಟಿ ಮತ್ತು ದಿಗ್ಗಜ ಇವು ಹೇಮಂತಋತುವಿನಲ್ಲಿ ಶೀತದಿಂದ ಜನ್ಯವಾಗಿವೆ. ಮೇಘಗಳೇ ಸಮಸ್ತ ಸಸಿಗಳನ್ನೂ ವೃದ್ಧಿಗೊಳಿಸುವುದಕ್ಕಾಗಿ ಹಿಮವೃಷ್ಟಿಯನ್ನು ಕರೆಯುತ್ತವೆ.

ಶ್ರೇಷ್ಠಃ ಪರಿವಹೋ ನಾಮ ತೇಷಾಂ ವಾಯುರಪಾಶ್ರಯಃ ।
ಯೋऽಸೌ ಬಿಭರ್ತಿ ಭಗವಾನ್ ಗಂಗಾಮಾಕಾಶಗೋಚರಾಂ ॥
ದಿವ್ಯಾಮತಿಜಲಾಂ ಪುಣ್ಯಾಂ ವಿದ್ಯಾಂ ಸ್ವರ್ಗಪಥಿ ಸ್ಥಿತಾಂ ॥ ೪೬ ॥

ತಸ್ಯಾ ವಿಷ್ಯಂದಜಂ ತೋಯಂ ದಿಗ್ಗಜಾಃ ಪೃಥುಭಿಃ ಕರೈಃ ।
ಶೀಕರಂ ಸಂಪ್ರಮುಂಚಂತಿ ನೀಹಾರ ಇತಿ ಸ ಸ್ಮೃತಃ ॥ ೪೭ ॥

ದಕ್ಷಿಣೇನ ಗಿರಿರ್ಯೋऽಸೌ ಹೇಮಕೂಟ ಇತಿ ಸ್ಮೃತಃ ।
ಉದಗ್ ಹಿಮವತಃ ಶೈಲಾದುತ್ತರಸ್ಯ ಚ ದಕ್ಷಿಣೇ ॥
ಪುಂಡ್ರಂ ನಾಮ ಸಮಾಖ್ಯಾತಂ ನಗರಂ ತತ್ರ ವೈ ಸ್ಮೃತಂ ॥ ೪೮ ॥

ತಸ್ಮಿನ್ನಿಪತಿತಂ ವರ್ಷಂ ಯತ್ತುಷಾರಸಮುದ್ಭವಂ ।
ತತಸ್ತದಾವಹೋ ವಾಯುರ್ಹಿಮಶೈಲಾತ್ ಸಮುದ್ವಹನ್ ॥
ಆನಯತ್ಯಾತ್ಮಯೋಗೇನ ಸಿಂಚಮಾನೋ ಮಹಾಗಿರಿಂ ॥ ೪೯ ॥

---

೪೬. ಉತ್ತಮವೂ, ಪರಿವಹನಾಮಕವೂ ಆದ ವಾಯುವು ಆ ಜಲಕ್ಕೆ ಆಶ್ರಯವಾಗಿದೆ. ಇಂತಹ ಜಲಕ್ಕೆ ಆಧಾರಳೂ, ಆಕಾಶಗಾಮಿಯೂ, ದಿವ್ಯಳೂ, ಅತ್ಯಂತ ಜಲಭರಿತಳೂ, ಪವಿತ್ರಳೂ, ಜ್ಞಾನಿಯೂ, ಸ್ವರ್ಗಮಾರ್ಗಗಾಮಿಯೂ ಆದ ಗಂಗಾದೇವಿಯನ್ನು ಭಗವಂತನಾದ ಪರಮೇಶ್ವರನು ತನ್ನ ಶಿರಸ್ಸಿನಲ್ಲಿ ಧರಿಸಿರುತ್ತಾನೆ.

೪೭. ಆಕೆಯ ಸಂಚಾರದಿಂದ ಸಂಭವಿಸಿದ ಜಲವನ್ನು ದಿಗ್ಗಜಗಳು ತಮ್ಮ ಸೊಂಡಲುಗಳಿಂದ ಸ್ವೀಕರಿಸಿ ತುಂತುರುಹನಿಗಳನ್ನು ಬಿಡುತ್ತವೆ. ಆ ದಿಗ್ಗಜಗಳು ಬಿಟ್ಟ ಜಲಶೀಕರಗಳೇ ಹಿಮಕಣಗಳಾಗಿರುತ್ತವೆ.

೪೮. ಆಕಾಶಗಂಗೆಯ ದಕ್ಷಿಣದಿಗ್ಭಾಗದಲ್ಲಿ ಹೇಮಕೂಟವೆಂಬ ಪ್ರಖ್ಯಾತವಾದ ಪರ್ವತವಿರುತ್ತದೆ. ಅದಕ್ಕುತ್ತರದಲ್ಲಿರುವ ಹಿಮಾಲಯದ ಈಶಾನ್ಯಭಾಗದಲ್ಲಿ ಪುಂಡ್ರನಾಮಕವಾದ ನಗರವು ಪ್ರಸಿದ್ಧವಾಗಿದೆ.

೪೯. ಆ ನಗರಿಯಲ್ಲಿ ಬಿದ್ದಂಥ ಹಿಮಕರಣಗಳೇ ವೃಷ್ಟಿಯಾಗಿ ಪರಿಣಮಿಸುತ್ತವೆ. ಅನಂತರ ಆವಹನಾಮಕವಾಯುವು ಹಿಮಾಲಯದಿಂದ ಬೀಸುತ್ತದೆ. ಆ ವಾಯುವು ಆ ಹನಿಗಳನ್ನು ಧರಿಸಿಕೊಂಡು ಸ್ವಶಕ್ತಿಯಿಂದ ಮಹಾಗಿರಿಯಲ್ಲಿ ಮಳೆಯನ್ನು ಸುರಿಸುವುದು.

**ಹಿಮವಂತಮತಿಕ್ರಮ್ಯ ವೃಷ್ಟಿಶೇಷಂ ತತಃ ಪರಂ।**
**ಇಹಾಭ್ಯೇತಿ ತತಃ ಪಶ್ಚಾದಪರಾಂತವಿವೃದ್ಧಯೇ ॥ ೫೦ ॥**

**ಮೇಘಾವಾಪ್ಯಾಯತಶ್ಚೈವ ಸರ್ವಮೇತತ್ ಪ್ರಕೀರ್ತಿತಂ।**
**ಸೂರ್ಯ ಏವ ತು ವೃಷ್ಟೀನಾಂ ಸ್ರಷ್ಟಾ ಸಮುಪದಿಶ್ಯತೇ ॥ ೫೧ ॥**

**ಧ್ರುವೇಣಾವೇಷ್ಟಿತಃ ಸೂರ್ಯಸ್ತಾಭ್ಯಾಂ ವೃಷ್ಟಿಃ ಪ್ರವರ್ತತೇ।**
**ಧ್ರುವೇಣಾವೇಷ್ಟಿತೋ ವಾಯುರ್ವೃಷ್ಟಿಂ ಸಂಹರತೇ ಪುನಃ ॥ ೫೨ ॥**

**ಗ್ರಹಾನ್ನಿಃಸೃತ್ಯ ಸೂರ್ಯಾತ್ತು ಕೃತ್ಸ್ನೇ ನಕ್ಷತ್ರಮಂಡಲೇ।**
**ವಾರಸ್ಯಾಂತೇ ವಿಶತ್ಯರ್ಕಂ ಧ್ರುವೇಣ ಪರಿವೇಷ್ಟಿತಂ ॥ ೫೩ ॥**

---

೫೦. ಆ ವಾಯುವು ಹಿಮಾಲಯದಲ್ಲಿ ಮಳೆಯನ್ನು ಕರೆಸಿ ಅವಶಿಷ್ಟವಾದ ಜಲವನ್ನು ಹಿಮಾಲಯವನ್ನತಿಕ್ರಮಿಸಿ ತರುವಾಯ ಇತರ ಭಾಗದ ಅಭಿವೃದ್ಧಿಗಾಗಿ ಇತರ ದೇಶಗಳಲ್ಲಿ ಸುರಿಸುವುದು.

೫೧. ಅಥವಾ ಮೇಘಗಳೇ ಸರ್ವದೇಶಗಳಲ್ಲಿಯೂ ಮಳೆಯನ್ನು ಕರೆದು ತೃಪ್ತಿಪಡಿಸುತ್ತವೆಯೆಂದು ಹೇಳಬಹುದು. ಸೂರ್ಯನೇ ಈ ವೃಷ್ಟಿಗೆ ಕಾರಣನೆಂದು ಹೇಳುವುದು ಜ್ಞಾನಿಗಳ ಅಭಿಮತವೂ, ಶಾಸ್ತ್ರಸಮ್ಮತವೂ ಆಗಿದೆ.

೫೨. ಆ ಸೂರ್ಯನು ಧ್ರುವನಿಂದ ಆವರಿಸಲ್ಪಡುತ್ತಾನೆ. ಅವರಿಬ್ಬರಿಂದಲೂ ಮಳೆಯು ಉಂಟಾಗುವುದು. ಧ್ರುವನಿಂದ ಆವರಿಸಲ್ಪಟ್ಟ ವಾಯುವು ಮಳೆಯನ್ನು ತಡೆಯುತ್ತದೆ.

೫೩. ಸಂಪೂರ್ಣವಾದ ನಕ್ಷತ್ರಮಂಡಲವು ಸೂರ್ಯಗ್ರಹದಿಂದ ಹೊರಟು ಆಯಾ ವಾರಾಂತದಲ್ಲಿ ಧ್ರುವನಿಂದ ಆವೇಷ್ಟಿತವಾದ ಸೂರ್ಯನನ್ನೇ ಪ್ರವೇಶಿಸುತ್ತದೆ.

ಅತಃ ಸೂರ್ಯರಥಸ್ಯಾಥ ಸನ್ನಿವೇಶಂ ನಿಬೋಧತ |
ಸಂಸ್ಥಿತೇನೈಕಚಕ್ರೇಣ ಪಂಚಾರೇಣ ತ್ರಿನಾಭಿನಾ || ೫೪ ||

ಹಿರಣ್ಮಯೇನ ಭಗವಾನ್ ಪರ್ವಣಾ ತು ಮಹೌಜಸಾ |
ನಷ್ಟವತ್ಮಾಂಧಕಾರೇಣ ಷಟ್ಪ್ರಕಾರೈಕನೇಮಿನಾ ||
ಚಕ್ರೇಣ ಭಾಸ್ವತಾ ಸೂರ್ಯಃ ಸ್ಯಂದನೇನ ಪ್ರಸರ್ಪತಿ || ೫೫ ||

ದಶಯೋಜನಸಾಹಸ್ರೇ ವಿಸ್ತಾರಾಯಾಮತಃ ಸ್ಮೃತಃ |
ದ್ವಿಗುಣೋಽಸ್ಯ ರಥೋಪಸ್ಥಾದೀಷಾದಂಡಪ್ರಮಾಣತಃ || ೫೬ ||

ಸ ತಸ್ಯ ಬ್ರಹ್ಮಣಾ ಸೃಷ್ಟೋ ರಥೋ ಹ್ಯರ್ಥವಶೇನ ತು |
ಅಸಂಗಃ ಕಾಂಚನೋ ದಿವ್ಯೋ ಯುಕ್ತಃ ಪರಮುಗೈರ್ಹಯೈಃ || ೫೭ ||

---

೫೪-೫೫. ಈಗ ಸೂರ್ಯದೇವನ ರಥದ ವಿಷಯಗಳನ್ನು ಕುರಿತು ಹೇಳುವೆನು ಕೇಳಿರೆಂದನು. ಅವನ ರಥಕ್ಕೆ ಒಂದೇ ಚಕ್ರವಿರುತ್ತದೆ. ಐದು ಆರೇ ಕೋಲುಗಳೂ ಮೂರು ಕಣ್ಣುಗಳೂ ಇರುತ್ತವೆ. ಅದು ಸುವರ್ಣಮಯವಾಗಿದೆ. ಮತ್ತು ಆ ಸೂರ್ಯನ ರಥವು ಮಹಾ ಕಾಂತಿಯುಳ್ಳದ್ದೂ ತನ್ನ ತೇಜಸ್ಸಿನಿಂದ ಮಾರ್ಗದಲ್ಲಿರುವ ಅಂಧಕಾರವನ್ನು ಪರಿಹಾರಕವೂ, ಆರು ವಿಧವಾದ ಒಂದೇ ಪಟ್ಟಿಯುಳ್ಳ ಚಕ್ರಯುಕ್ತವೂ ದೇದೀಪ್ಯಮಾನವೂ ಆಗಿದೆ. ಇಂಥ ರಥದಿಂದ ಸೂರ್ಯನು ಪ್ರತಿದಿನವೂ ಸಂಚರಿಸುತ್ತಾನೆ.

೫೬. ಸೂರ್ಯನ ರಥವು ಹತ್ತುಸಾವಿರ ಯೋಜನಗಳಷ್ಟು ವಿಸ್ತಾರವಾಗಿರುತ್ತದೆ. ಆ ರಥದಲ್ಲಿರುವ ನೊಗದ ಪ್ರಮಾಣಕ್ಕಿಂತಲೂ ರಥದ ಪ್ರಮಾಣವು ದ್ವಿಗುಣವಾಗಿರುತ್ತದೆ.

೫೭. ಬ್ರಹ್ಮದೇವನು ಭೂಸಂಬಂಧಶೂನ್ಯವೂ ಸುವರ್ಣಮಯವೂ ದಿವ್ಯವೂ ಉತ್ತಮಾಶ್ವಯುಕ್ತವೂ ಅದ ಸೂರ್ಯದೇವನ ರಥವನ್ನು ಅನ್ವರ್ಥಕವಾಗುವಂತೆ ಸೃಷ್ಟಿಮಾಡಿರುವನು.

ಛಂದೋಭಿರ್ವಾಜಿರೂಪೈಸ್ತು ಯತಃ ಶುಕ್ರಸ್ತತಃ ಸ್ಥಿತಾಃ ।
ವರುಣಸ್ಯಂದನಸ್ಯೇಹ ಲಕ್ಷಣೈಃ ಸದೃಶಸ್ತು ಸಃ ॥
ತೇನಾಽಸೌ ಸರ್ಪತಿ ವ್ಯೋಮ್ನಿ ಭಾಸ್ವತಾ ತು ದಿವಾಕರಃ ॥ ೫೮ ॥

ಅಥೇಮಾನಿ ತು ಸೂರ್ಯಸ್ಯ ಪ್ರತ್ಯಂಗಾನಿ ರಥಸ್ಯ ತು ।
ಸಂವತ್ಸರಸ್ಯಾವಯವೈಃ ಕಲ್ಪಿತಾನಿ ಯಥಾಕ್ರಮಂ ॥ ೫೯ ॥

ಅಹಸ್ತು ನಾಭಿಃ ಸೂರ್ಯಸ್ಯ ಏಕಚಕ್ರಃ ಸ ವೈ ಸ್ಮೃತಃ ।
ಆರಾಃ ಪಂಚರ್ತವಸ್ತಸ್ಯ ನೇಮಿಃ ಷಡೃತವಃ ಸ್ಮೃತಾಃ ॥ ೬೦ ॥

ರಥನೀಡಃ ಸ್ಮೃತೋ ಹ್ಯಬ್ದಸ್ತ್ವಯನೇ ಕೂಬರಾವುಭೌ ।
ಮುಹೂರ್ತಾ ಬಂಧುರಾಸ್ತಸ್ಯ ಶಮ್ಯಾ ತಸ್ಯ ಕಲಾಃ ಸ್ಮೃತಾಃ ॥ ೬೧ ॥

ತಸ್ಯ ಕಾಷ್ಠಾಃ ಸ್ಮೃತಾ ಘೋಣಾ ಹರ್ಷಾದಂಡಃ ಕ್ಷಣಾಂಸ್ತು ವೈ ।
ನಿಮೇಷಾಶ್ಚಾನುಕರ್ಷೋಽಸ್ಯ ಈಶಾಚಾಸ್ಯ ಲವಾಃ ಸ್ಮೃತಾಃ ॥ ೬೨ ॥

---

೫೮. ಆ ರಥವು ಛಂದೋರೂಪವಾದ ಅಶ್ವಗಳಿಂದ ಯುಕ್ತವೂ, ಶುಕ್ರಗ್ರಹದಿಂದ ಸಹಿತವೂ, ವರುಣನ ರಥದ ಲಕ್ಷಣಗಳಿಂದ ಮಂಡಿತವೂ, ಪ್ರಕಾಶಕವೂ ಆಗಿದೆ. ಸೂರ್ಯನು ಇಂತಹ ರಥದಿಂದ ಆಕಾಶದಲ್ಲಿ ಪ್ರತಿನಿತ್ಯವೂ ಸಂಚರಿಸುವನು.

೫೯. ಸೂರ್ಯದೇವನ ಇಂತಹ ರಥಾಂಗಗಳು ಸಂವತ್ಸರದ ಅವಯವಗಳಿಂದ ಯಥಾಕ್ರಮವಾಗಿ ಯುಕ್ತವಾಗಿವೆ. ಸಂವತ್ಸರದ ಅವಯುವಗಳಂತೆ ರಥದ ಅವಯವಗಳೂ ಇರುತ್ತವೆ.

೬೦. ಹಗಲೇ ಸೂರ್ಯನ ಚಕ್ರದ ನಾಭಿಯಾಗಿದೆ. ಅದಕ್ಕೆ ಒಂದೇ ಚಕ್ರವಿರುತ್ತದೆ. ವಸಂತಾದಿ ಷಡೃತುಗಳೇ ಅರಗಳಾಗಿವೆ.

೬೧-೬೨. ರಥದ ಮಧ್ಯದೇಶವೇ ಸಂವತ್ಸರವಾಗಿದೆ. ದಕ್ಷಿಣಾಯನೋತ್ತರಾಯಣಗಳೆಂಬುದೇ ಎರಡು ನೊಗಗಳು. ಮುಹೂರ್ತಗಳೇ ಹುರಿಗಳಾಗಿವೆ. ಕಲೆಗಳೇ ನೊಗದ ಮೊಳೆಗಳು. ಕಾಷ್ಟಾಕಾಲವೇ ಮೂಗಿನ ಭಾಗವು. ಕ್ಷಣಲವಗಳೇ ನೊಗವು. ನಿಮೇಷಗಳೇ ಅಚ್ಚಾಗಿದೆ. ನೊಗದ ಭಾಗಗಳೇ ಲವಗಳಾಗಿವೆ.

ರಾತ್ರಿರ್ವರೂಥೋ ಘರ್ಮೋऽಸ್ಯ ಧ್ವಜ ಊರ್ಧ್ವಸಮುಚ್ಛ್ರಿತಃ ।
ಯುಗಾಕ್ಷಕೋಟಿ ತೇ ತಸ್ಯ ಅರ್ಥಕಾಮವುಭೌ ಸ್ಮೃತೌ ॥ ೬೩ ॥

ಸಪ್ತಾಶ್ವರೂಪಾಶ್ಛಂದಾಂಸಿ ವಹಂತೇ ವಾಮತೋ ಧುರಾಂ ।
ಗಾಯತ್ರೀ ಚೈವ ತ್ರಿಷ್ಟುಪ್ ಚ ಅನುಷ್ಟುಪ್ ಜಗತೀ ತಥಾ ॥ ೬೪ ॥

ಪಂಕ್ತಿಶ್ಚ ಬೃಹತೀ ಚೈವ ಉಷ್ಣಿಕ್ ಚೈವ ತು ಸಪ್ತಮಂ ।
ಅಕ್ಷೇ ಚಕ್ರಂ ನಿಬದ್ಧಂತು ಧ್ರುವೇತ್ವಕ್ಷಃ ಸಮರ್ಪಿತಃ ॥ ೬೫ ॥

ಸಹಚಕ್ರೋ ಭ್ರಮತ್ಯಕ್ಷಃ ಸಹಾಕ್ಷೋ ಭ್ರಮತಿ ಧ್ರುವಃ ।
ಅಕ್ಷಃ ಸಹೈವ ಚಕ್ರೇಣ ಭ್ರಮತೇऽಸೌ ಧ್ರುವೇರಿತಃ ॥ ೬೬ ॥

ಏವಮರ್ಥವಶಾತ್ತಸ್ಯ ಸನ್ನಿವೇಶೋ ರಥಸ್ಯ ತು ।
ತಥಾ ಸಂಯೋಗಭಾಗೇನ ಸಂಸಿದ್ಧೋ ಭಾಸ್ವರೋ ರಥಃ ॥ ೬೭ ॥

---

೬೩. ರಾತ್ರಿಯು ರಥದ ಹೊದ್ದಿಕೆಯಾಗಿಯೂ, ಹಬೆಯೇ ಉನ್ನತ ಧ್ವಜವಾಗಿಯೂ, ಅಚ್ಚುಗಳ ಅಗ್ರಭಾಗಗಳೇ ಅರ್ಥಕಾಮಗಳಾಗಿಯೂ ಇವೆಯೆಂದು ತಿಳಿಯಬೇಕು.

೬೪-೬೫. ಗಾಯತ್ರೀ ತ್ರಿಷ್ಟುಪ್ ಅನುಷ್ಟುಪ್ ಜಗತೀ ಪಂಕ್ತಿ ಬೃಹತೀ ಮತ್ತು ಉಷ್ಣಿಗೆಂಬ ಸಪ್ತಛಂದಸ್ಸುಗಳೇ ಸಪ್ತಾಶ್ವಗಳಾಗಿವೆ. ಈ ಸಪ್ತಾಶ್ವಗಳು ಸೂರ್ಯನ ರಥದ ಭಾರವನ್ನು ಹೊರುತ್ತವೆ. ರಥದ ಅಚ್ಚು ಚಕ್ರದಲ್ಲಿ ಸಂಬಂಧಿಸಿದೆ. ಆ ಅಕ್ಷ ಚಕ್ರ ಇವೆರಡೂ ಧ್ರುವನಲ್ಲಿ ಸಮರ್ಪಿತವಾಗಿವೆ.

೬೬. ಅಚ್ಚು ಚಕ್ರಸಮೇತವಾಗಿ ತಿರುಗುತ್ತದೆ. ಧ್ರುವನೂ ಕೂಡ ಅಚ್ಚಿನೊಡನೆ ಸುತ್ತುತ್ತಾನೆ. ಧ್ರುವನಿಂದ ಪ್ರೇರಿತವಾದ ಅಚ್ಚು ಚಕ್ರಸಮೇತವಾಗಿ ಭ್ರಮಿಸುವುದು.

೬೭. ಈ ರೀತಿಯಲ್ಲಿ ಸೂರ್ಯನ ರಥದ ಸನ್ನಿವೇಶವಿದೆಯೆಂದು ತಿಳಿಯಬೇಕು. ಹೀಗೆ ಪರಸ್ಪರ ಸಂಬಂಧದಿಂದ ಸೂರ್ಯನ ರಥವು ಧ್ರುವನಿಂದ ಪ್ರೇರಿತವಾಗಿ ಹೊಳೆಯುತ್ತಾ ಚಲಿಸುವುದು.

ತೇನಾಸೌ ತರಣಿರ್ದೇವಸ್ತ್ರಸಾ ಸರ್ಪತೇದಿವಿ ।
ಯುಗಾಕ್ಷಕೋಟಿಸಂಬದ್ಧೌ ರಶ್ಮಿ ದ್ವೌ ಸ್ಯಂದನಸ್ಯ ಹಿ ॥ ೧೮ ॥

ಧ್ರುವೇಣ ಭ್ರಮತೋ ರಶ್ಮಿಃ ವಿಚಕ್ರಯುಗಯೋಸ್ತು ವೈ ।
ಭ್ರಮತೋ ಮಂಡಲಾನಿ ಸ್ಯುಃ ಖೇಚರಸ್ಯ ರಥಸ್ಯ ತು ॥ ೧೯ ॥

ಯುಗಾಕ್ಷಕೋಟಿ ತೇ ತಸ್ಯ ದಕ್ಷಿಣೇ ಸ್ಯಂದನಸ್ಯತು ।
ಧ್ರುವೇಣ ಸಂಗೃಹೀತೇ ವೈ ದ್ವಿಚಕ್ರ ಶ್ವೇತರಜ್ಜಿವತ್ ॥ ೨೦ ॥

ಭ್ರಮಂತಮನುಗಚ್ಛೇತಾಂ ಧ್ರುವಂ ರಶ್ಮೀ ತು ತಾವಭೌ ।
ಯುಗಾಕ್ಷಕೋಟಿ ತೇ ತಸ್ಯ ವಾತೋರ್ಮಿಸ್ಯಂದನಸ್ಯ ತು ॥ ೨೧ ॥

---

೧೮. ಈ ಕಾರಣಗಳಿಂದ ಸೂರ್ಯದೇವನು ಆಕಾಶದಲ್ಲಿ ಅತಿ ವೇಗವಾಗಿ ಸಂಚರಿಸುವನು. ಆ ಸೂರ್ಯನ ರಥಕ್ಕೂ, ನೊಗ ಮತ್ತು ಅಚ್ಚಿನ ತುದಿ ಇವುಗಳಿಗೂ ಎರಡು ಹಗ್ಗಗಳು ಸಂಬಂಧಗಳಾಗಿವೆ.

೧೯. ಧ್ರುವನೊಡನೆ ಸಂಚರಿಸುವ ಅಚ್ಚು ಯುಗಗಳಿಗೂ, ಆಕಾಶದಲ್ಲಿ ಮಂಡಲಾಕಾರವಾಗಿ ಸಂಚರಿಸುವ ಸೂರ್ಯನ ರಥಕ್ಕೂ ಎರಡು ರಶ್ಮಿಗಳು ಸಂಬಂಧ ಗಳಾಗಿವೆ.

೨೦. ಧ್ರುವನು ಆ ಸೂರ್ಯ ರಥದ ದಕ್ಷಿಣಭಾಗದ ನೊಗ ಅಚ್ಚು ಇವುಗಳ ಅಗ್ರಭಾಗಗಳನ್ನು ಎರಡು ಚಕ್ರಗಳಿರುವ ರಥದ ಶುಭ್ರವಾದ ಹಗ್ಗಗಳಂತೆ ಗ್ರಹಿಸಿರುವನು.

೨೧. ಆ ಎರಡು ರಶ್ಮಿಗಳೂ ಕೂಡ ಸಂಚರಿಸುವ ಧ್ರುವನನ್ನು ಅನುಸರಿಸಿ ಕೊಂಡಿವೆ. ಆ ರಥದ ನೊಗ ಅಚ್ಚುಗಳ ತುದಿಗಳೆರಡೂ ವಾತಾಧೀನವಾದ ಅಲೆಯಂತೆ ರಥಾಧೀನವಾಗಿವೆ.

ಕೀಲಾಸಕ್ತೋ ಯಥಾ ರಜ್ಜು ಭ್ರ್ರಮತೋ ಸರ್ವತೋ ದಿಶಂ ।
ಹ್ರಸತಸ್ತಸ್ಯ ರಶ್ಮೀ ತೌ ಮಂಡಲೇಷೂತ್ತರಾಯಣೇ ॥ ೭೨ ॥

ವರ್ದ್ಧತೇ ದಕ್ಷಿಣೇ ಚೈವ ಭ್ರಮತೋ ಮಂಡಲಾನಿ ತು ।
ಧ್ರುವೇಣ ಸಂಗೃಹೀತೌ ತು ರಶ್ಮೀ ವೈ ನಯತೋ ರವಿಂ ॥ ೭೩ ॥

ಆಕೃಷ್ಯೇತೇ ಯದಾ ತೌ ವೈ ಧ್ರುವೇಣ ಸಮಧಿಷ್ಠಿತಾ ।
ತದಾ ಸೋಽಭ್ಯಂತರಂ ಸೂರ್ಯೋ ಭ್ರಮತೇ ಮಂಡಲಾನಿ ತು ॥ ೭೪ ॥

ಅಶೀತಿಮಂಡಲಶತಂ ಕಾಷ್ಠಯೋರುಭಯೋಶ್ಚರ್ ।
ಧ್ರುವೇಣ ಮುಚ್ಯಮಾನಾಭ್ಯಾಂ ರಶ್ಮಿಭ್ಯಾಂ ಪುನರೇವ ತು ॥ ೭೫ ॥

---

೭೨-೭೩. ಮಧ್ಯದ ಗೂಟದ ಮೊಳೆಗೆ ಕಟ್ಟಿರುವ ಹಗ್ಗವು ಸರ್ವದಿಕ್ಕುಗಳಲ್ಲಿಯೂ ಮಂಡಲಾಕಾರವಾಗಿ ತಿರುಗುವಂತೆ, ಸೂರ್ಯನ ರಶ್ಮಿಗಳು ಎಲ್ಲಾ ದಿಕ್ಕುಗಳಲ್ಲಿಯೂ ಮಂಡಲಾಕಾರವಾಗಿ ಬೀಳುವುವು. ಉತ್ತರಾಯಣದಲ್ಲಿ ಆ ಕಿರಣಗಳು ಮಂಡಲಾಕಾರವಾಗಿ ಹ್ರಸ್ವವಾಗುವುವು. ಮಂಡಲಾಕಾರವಾಗಿ ಸಂಚರಿಸುವ ಸೂರ್ಯ ರಶ್ಮಿಗಳು ದಕ್ಷಿಣಾಯನದಲ್ಲಿ ವೃದ್ಧಿಯಾಗುವುವು. ರಥದ ಎರಡು ರಶ್ಮಿಗಳೂ ಧ್ರುವನ ಅಧೀನಗಳಾಗಿವೆ.

೭೪. ಧ್ರುವನು ಆ ಎರಡು ಹಗ್ಗಗಳನ್ನು ಯಾವಾಗ ಸೆಳೆಯುತ್ತಾನೆಯೋ ಆಗ ಸೂರ್ಯನು ಒಳಭಾಗದಲ್ಲಿಯೇ ಮಂಡಲಾಕಾರವಾಗಿ ಸಂಚರಿಸುವನು.

೭೫. ಧ್ರುವನು ಆ ರಥದ ಹಗ್ಗವನ್ನು ಧಾರಾಳವಾಗಿ ಸಡಿಲುಮಾಡಲಾಗಿ ಸೂರ್ಯನು ಎರಡು ದಿಕ್ಕುಗಳಲ್ಲಿ ಧಾರಾಳವಾಗಿ ಎಂಟುನೂರು ಯೋಜನಗಳಷ್ಟು ದೂರವಾಗಿ ಸಂಚರಿಸುವನು.

**ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ತು ।**
**ಉದ್ವೇಷ್ಟಯನ್ ಸ ವೇಗೇನ ಮಂಡಲಾನಿ ತು ಗಚ್ಛತಿ ॥ ೭೬ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಜ್ಯೋತಿಷ್ಪ್ರಚಾರೋ" ನಾಮೈಕ ಪಂಚಾಶೋಽಧ್ಯಾಯಃ**

---

೭೬. ಧ್ರುವನು ಹಗ್ಗವನ್ನು ಬಿಗಿಹಿಡಿದರೆ ಸೂರ್ಯನು ಒಳಭಾಗದಲ್ಲಿಯೇ ಮಂಡಲಾಕಾರವಾಗಿ ಸುತ್ತುವನು. ಹಗ್ಗವನ್ನು ಸಡಿಲುಮಾಡಿ ಧಾರಾಳವಾಗಿ ಬಿಟ್ಟರೆ ದೂರವಾಗಿ ಹೊರಭಾಗದಲ್ಲಿ ಮಂಡಲಾಕಾರವಾಗಿ ತಿರುಗುವನು. ಅವನು ಮಂಡಲಾಕಾರವಾಗಿ ವೇಗದಿಂದ ಸಂಚರಿಸುವಾಗ ವೇಷ್ಟನಮಾಡಿಕೊಂಡು ಹೋಗುವನು. ಆವರಿಸಿಕೊಂಡು ಹೋಗುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಜ್ಯೋತಿರ್ಮಂಡಲಸಂಚಾರವೆಂಬ ಐವತ್ತೊಂದನೆಯ ಅಧ್ಯಾಯವು ಸಮಾಪ್ತವಾದುದು.

## ಐವತ್ತೊಂದನೆಯ ಅಧ್ಯಾಯದ ಸಾರಾಂಶವು

ಸೂರ್ಯ ಚಂದ್ರರೇ ಮೊದಲಾದ ಗ್ರಹಗಳ ಸ್ಥಿತಿಗತಿಗಳು ಧ್ರುವಾಧೀನಗಳಾಗಿವೆ ಎಂಬ ವಿಷಯವು ಈ ಅಧ್ಯಾಯದಲ್ಲಿ ಉಕ್ತವಾಗಿದೆ. ಆಕಾಶದ ನಾಲ್ಕು ಭಾಗಗಳಲ್ಲಿಯೂ ವ್ಯಾಪ್ತನಾಗಿರುವ ಶಿಶುಮಾರ ಮೂರ್ತಿಯ ಪುಚ್ಛವನ್ನು ಆಶ್ರಯಿಸಿಕೊಂಡು ಉತ್ತಾನಪಾದರಾಯನ ಪುತ್ರನಾದ ಧ್ರುವಮಹಾರಾಯನು ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾ ಮೇರುವನ್ನು ಸುತ್ತುವನು. ಅವನನ್ನು ಆಶ್ರಯಿಸಿಕೊಂಡು ಸಮಸ್ತ ಗ್ರಹಗಳೂ ಸಂಚರಿಸುತ್ತವೆ. ಇದರಿಂದ ಅಯನಗಳೂ ಋತುಗಳೂ ವೃಷ್ಟ್ಯಾದಿಗಳೂ ಉಂಟಾಗುವುವು. ಧ್ರುವಾಶ್ರಿತನಾದ ಸೂರ್ಯನು ಕಿರಣಗಳಿಂದ ಜಲವನ್ನು ತೆಗೆದುಕೊಂಡು ಸಹಸ್ರಭಾಗ ಅಧಿಕವಾಗಿ ವೃಷ್ಟಿಯನ್ನು ಕರೆಯುತ್ತಾನೆ. ಸೂರ್ಯನಿಂದ ಉಷ್ಣವೂ ಚಂದ್ರನಿಂದ ಶೀತವೂ ಉಂಟಾಗುತ್ತವೆ. ಚಂದ್ರನೇ ಗಂಗಾದಿ ಸಮಸ್ತ ನದಿಗಳಿಗೂ ಕಾರಣನಾಗಿರುವನು. ಮೇಘಗಳು ಅಗ್ನಿಜ, ಬ್ರಹ್ಮಜ, ಪಕ್ಷಜಗಳೆಂದು ಮೂರು ವಿಧಗಳಾಗಿವೆ. ಸೂರ್ಯ ಕಿರಣಗಳ ಮೂಲಕ ಜನ್ಯವಾದುವುಗಳು ಆಗ್ನೇಯಗಳು. ಬ್ರಹ್ಮನಿಶ್ವಾಸ ಸಂಭವಗಳು ಬ್ರಹ್ಮಜಗಳು. ಇಂದ್ರನ ಪಕ್ಷಚ್ಛೇದಗಳಿಂದ ಜನ್ಯವಾದವು ಪಕ್ಷಜಗಳು. ಇವು ಪ್ರಲಯಕ್ಕೆ ಕಾರಣವಾಗಿವೆ. ಪರಿವಹನಾಮಕ ವಾಯು ಮತ್ತು ಧ್ರುವ ಇವರ ಸಹಾಯದಿಂದ ವೃಷ್ಟಿಯಾಗುವುದು. ಸೂರ್ಯನ ರಥಕ್ಕೆ ಏಕಚಕ್ರವೂ, ಐದು ಅರೇ ಕೋಲುಗಳೂ, ಮೂರು ನಾಭಿಗಳೂ, ಆರು ವಿಧವಾದ ಒಂದು ಪಟ್ಟಿಯೂ ಇವೆ. ಅದು ಬ್ರಹ್ಮನಿರ್ಮಿತವೂ ಸುವರ್ಣಮಯವೂ ಆಗಿದೆ. ಆ ರಥಕ್ಕೆ ಅಹಸ್ಸೇ ನಾಭಿಯು. ಋತುಗಳೇ ಆರೆಕೋಲು. ಸಪ್ತಛಂದಸ್ಸುಗಳೇ ಸಪ್ತಾಶ್ವಗಳು ಚಕ್ರವು. ಅಚ್ಚಿಗೂ ಆ ಅಚ್ಚು ಧ್ರುವನಿಗೂ ಸಂಬಂಧವಾಗಿವೆ. ಧ್ರುವನ ಚಲನ ಗಮನಗಳಿಂದ ಸೂರ್ಯಾದಿ ಸರ್ವಗ್ರಹಗಳ ಚಾಲನ ವಲನಗಳು ಉಂಟಾಗುವುವು. ಸರ್ವಗ್ರಹಗಣ ಸಂಚಾರವು ಧ್ರುವಗತಿಗೆ ಅನುಗುಣವಾಗಿದೆ ಎಂಬ ವಿಷಯವು ವರ್ಣಿತವಾಗಿದೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ದ್ವಿಪಂಚಾಶೋಽಧ್ಯಾಯಃ

॥ ಸೂತ ಉವಾಚ ॥

ಸ ರಥೋಽಧಿಷ್ಠಿತೋ ದೇವೈರಾದಿತ್ಯೈರ್ಋಷಿಭಿಸ್ತಥಾ ।
ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀ ಸರ್ಪರಾಕ್ಷಸೈಃ ॥ ೧ ॥

ಏತೇ ವಸಂತಿ ವೈ ಸೂರ್ಯೇ ದ್ವೌ ದ್ವೌ ಮಾಸೌ ಕ್ರಮೇಣ ತು ।
ಧಾತಾರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತಿಃ ॥ ೨ ॥

ಉರಗೋ ವಾಸುಕಿಶ್ಚೈವ ಸಂಕೀರ್ಣಾರಶ್ಚ ತಾವುಭೌ ।
ತುಂಬುರುರ್ನಾರದಶ್ಚೈವ ಗಂಧರ್ವೌ ಗಾಯತಾಂ ವರೌ ॥ ೩ ॥

---

## ಐವತ್ತೆರಡನೆಯ ಅಧ್ಯಾಯವು

೧-೫. ಸೂತಪುರಾಣೀಕನು ಹೇಳಿದನು :—ಅಂತಹ ಸೂರ್ಯನ ರಥದಲ್ಲಿ ದೇವತೆಗಳು, ಆದಿತ್ಯರು, ಋಷಿಗಳು, ಗಂಧರ್ವರು, ಅಪ್ಸರಸಿಯರು, ಗ್ರಾಮಾಧಿಕಾರಿಗಳು, ಸರ್ಪರಾಕ್ಷಸರು ಇವರು ಕ್ರಮವಾಗಿ ಎರಡೆರಡು ತಿಂಗಳು ವಾಸಮಾಡುತ್ತಾರೆ. ಮತ್ತು ಬ್ರಹ್ಮನು, ಆದಿತ್ಯನು, ಪುಲಸ್ತ್ಯ, ಪುಲಹ, ಪ್ರಜಾಪತಿ, ಉರಗ, ವಾಸುಕಿ, ಸಂಕೀರ್ಣಾರಶ್ಚ, ಗಾಯಕರಾದ ತುಂಬುರು, ನಾರದರು, ಗಂಧರ್ವರು,

ಕ್ರತುಸ್ಥಲ್ಯಪ್ಸರಾಶ್ಚೈವ ತಥಾ ವೈ ಪುಂಜಿಕಸ್ಥಲೀ ।
ಗ್ರಾಮಣೀ ರಥಕೃಚ್ಛ್ರಶ್ಚ ತಪೋರ್ಯಶ್ಚೈವ ತಾವುಭೌ ॥ ೪ ॥

ರಕ್ಷೋ ಹೇತಿಃ ಪ್ರಹೇತಿಶ್ಚ ಯಾತುಧಾನಾವುದಾಹೃತೌ ।
ಮಧುಮಾಧವಯೋರೇಷ ಗಣೋ ವಸತಿ ಭಾಸ್ಕರೇ ॥ ೫ ॥

ವಾಸಂತೌ ಗ್ರೈಷ್ಮಿಕಾ ಮಾಸೌ ಮಿತ್ರಶ್ಚ ವರುಣಶ್ಚ ಹ ।
ಋಷಿರತ್ರಿರ್ವಸಿಷ್ಠಶ್ಚ ತಕ್ಷಕೋ ರಂಭ ಏವ ಚ ॥ ೬ ॥

ಮೇನಕಾ ಸಹಜನ್ಯಾ ಚ ಗಂಧರ್ವೋ ಚ ಹಹಾಹುಹೂಃ ।
ರಥಸ್ವನಶ್ಚ ಗ್ರಾಮಣ್ಯೋ ರಥಚಿತ್ರಶ್ಚ ತಾವುಭೌ ॥ ೭ ॥

ಪೌರುಷೇಯೋ ಧವಶ್ಚೈವ ಯಾತುಧಾನಾವುದಾಹೃತೌ ।
ಏತೇ ವಸಂತಿ ವೈ ಸೂರ್ಯೇ ಮಾಸಯೋಃ ಶುಚಿಶುಕ್ರಯೋಃ ॥ ೮ ॥

ತತಃ ಸೂರ್ಯೇ ಪುನಸ್ತ್ವನ್ಯಾ ನಿವಸಂತೀಹ ದೇವತಾಃ ।
ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವ ಚ ॥ ೯ ॥

---

ಕ್ರತುಸ್ಥಲಿ, ಅಪ್ಸರಸರು, ಪುಂಜಿಕಸ್ಥಲೀ ಗ್ರಾಮಾಧಿಕಾರಿಗಳಾದ ರಥಕಾರ ತಪೋರ್ಯರೆಂಬುವರು, ರಾಕ್ಷಸರು, ಹೇತಿ ಪ್ರಹೇತಿಯರು, ಯಾತುಧಾನರು ಇವರು ಚೈತ್ರ ವೈಶಾಖಮಾಸದಲ್ಲಿ ಗಣಗಳಾಗಿ ಸೂರ್ಯನಲ್ಲಿ ವಾಸಮಾಡುತ್ತಾರೆ.

೬-೮. ಜ್ಯೇಷ್ಠಾಷಾಢಮಾಸಗಳಲ್ಲಿ ಮಿತ್ರ, ವರುಣ, ಅತ್ರಿ, ವಸಿಷ್ಠರೆಂಬ ಋಷಿಗಳೂ, ತಕ್ಷಕ, ರಂಭ, ಮೈನಾಕ, ಸಹಜನ್ಯ, ಹಾಹಾಹೂಹೂ, ಎಂಬ ಗಂಧರ್ವರೂ, ರಥಸ್ವಗ ರಥಚಿತ್ರರೆಂಬ ಗ್ರಾಮಾಧಿಕಾರಿಗಳೂ, ಪೌರುಷೇಯ ಧವರೆಂಬ ಯಾತುಧಾನರೂ ಇವರು ಸೂರ್ಯನಲ್ಲಿ ಗುಂಪುಗುಂಪಾಗಿ ವಾಸಮಾಡುವರು.

೯-೧೧. ಅನಂತರ ಶ್ರಾವಣ ಭಾದ್ರಪದ ಮಾಸಗಳಲ್ಲಿ ಇತರರಾದ ದೇವತೆಗಳು ವಾಸಮಾಡುವರು. ಅವರು ಯಾರೆಂದರೆ—ಇಂದ್ರ, ವಿವಸ್ವಂತ, ಅಂಗಿರ, ಭೃಗು,

ಪಲಾಪರ್ಣಸ್ತಥಾ ಸರ್ಪಃ ಶಂಖಪಾಲಶ್ಚ ತಾವುಭೌ ।
ವಿಶ್ವಾವಸೂಗ್ರಸೇನೌ ಚ ಪ್ರಾತಶ್ಚೈವಾರುಣಶ್ಚ ಹ ॥ ೧೦ ॥

ಪ್ರಮ್ಲೋಚೇತಿ ಚ ವಿಖ್ಯಾತಾ ನಿಮ್ಲೋಚೇತಿ ಚ ತೇ ಉಭೇ ।
ಯಾತುಧಾನಸ್ತಥಾ ಸರ್ಪೋ ವ್ಯಾಘ್ರಃ ಶ್ವೇತಶ್ಚ ತಾವುಭೌ ॥
ನಭೋನಭಸ್ಯಯೋರೇಷಗಣೋ ವಸತಿ ಭಾಸ್ಕರೇ ॥ ೧೧ ॥

ಶರದೃತೌ ಪುನಃ ಶುಭ್ರಾ ವಸಂತಿ ಮುನಿದೇವತಾಃ ।
ಪರ್ಜನ್ಯಶ್ಚಾಥ ಪೂಷಾ ಚ ಭಾರದ್ವಾಜಃ ಸ ಗೌತಮಃ ॥ ೧೨ ॥

ವಿಶ್ವಾವಸುಶ್ಚ ಗಂಧರ್ವಾಸ್ತಥೈವ ಸುರಭಿಶ್ಚ ಯಃ ।
ವಿಶ್ವಾಚೀ ಚ ಘೃತಾಚೀ ಚ ಉಭೇ ತೇ ಶುಭಲಕ್ಷಣೇ ॥ ೧೩ ॥

ನಾಗ ಐರಾವತಶ್ಚೈವ ವಿಶ್ರುತಶ್ಚ ಧನಂಜಯಃ ।
ಸೇನಜಿಚ್ಚ ಸುಷೇಣಶ್ಚ ಸೇನಾನೀರ್ಗ್ರಾಮಣೀಶ್ಚ ತೌ ॥ ೧೪ ॥

ಆಪೋ ವಾಕಶ್ಚ ತಾವೇತೌ ಯಾತುಧಾನಾವುಭೌ ಸ್ಮೃತೌ ।
ವಸಂತ್ಯೇತೇ ತು ವೈ ಸೂರ್ಯೇ ಮಾಸಯೋಶ್ಚ ಇಷೋರ್ಜಯೋಃ ॥ ೧೫ ॥

---

ಪಲಾವರ್ಣ, ತಪ, ವ್ಯಾಘ್ರ, ಸರ್ಪ, ಶಂಖಪಾಲ, ವಿಶ್ವಾವಸು, ಉಗ್ರಸೇನ, ಪ್ರಾತ, ಅರುಣ, ಪ್ರಮ್ಲೋಚ, ನಿಮ್ಲೋಚ, ಯಾತುಧಾನ, ಶ್ವೇತ ಇವರು ಸೂರ್ಯನಲ್ಲಿ ಸಂಘವಾಗಿ ವಾಸಿಸುವರು.

೧೨-೧೫. ಶರದೃತುವಿನಲ್ಲಿ ಅತ್ಯಂತ ಶುಭ್ರವಾದ ಮುನಿಗಳು ಮತ್ತು ದೇವತೆಗಳು ಸೂರ್ಯನಲ್ಲಿ ವಾಸಮಾಡುವರು. ಅವರು ಯಾರೆಂದರೆ—ಪರ್ಜನ್ಯ, ಪೂಷಾಣ, ಭರದ್ವಾಜ, ಗೌತಮ, ವಿಶ್ವಾವಸು, ಸುರಭಿಗಳೆಂಬ ಗಂಧರ್ವರು ಅತ್ಯಂತ ಸುಂದರಿಯರಾದ ವಿಶ್ವಾಚೀ ಘೃತಾಚೀ ಎಂಬ ಇಬ್ಬರು ಅಪ್ಸರಸಿಯರೂ, ಐರಾವತ ಧನಂಜಯವೆಂದು ಪ್ರಖ್ಯಾತವಾದ ಎರಡು ಆನೆಗಳೂ. ಸೇನಚಿತನೆಂಬ ಸೇನಾ ಪತಿಯೂ, ಸುಷೇಣನೆಂಬ ಗ್ರಾಮಾಧಿಕಾರಿಯೂ, ಆಪ ವಾತರೆಂಬ ಇಬ್ಬರು ರಾಕ್ಷಸರೂ, ಇವರು ಆಶ್ವಯುಜ ಕಾರ್ತೀಕ ಮಾಸಗಳಲ್ಲಿ ಸೂರ್ಯನಲ್ಲಿ ವಾಸಮಾಡುತ್ತಾರೆ.

ಹೈಮಂತಿಕೌ ತು ದ್ವೌ ಮಾಸೌ ವಸಂತಿ ತು ದಿವಾಕರೇ ।
ಅಂಶೋ ಭಗಶ್ಚ ದ್ವಾವೇತೌ ಕಶ್ಯಪಶ್ಚ ಋತುಶ್ಚ ಹ ॥ ೧೬ ॥

ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ।
ಚಿತ್ರಸೇನಶ್ಚ ಗಂಧರ್ವ ಊರ್ಣಯುಶ್ಚೈವ ತಾವುಭೌ ॥ ೧೭ ॥

ಊರ್ವಶೀ ವಿಪ್ರಚಿತ್ತಿಶ್ಚ ತಥೈವಾಪ್ಸರಸೌ ಶುಭೇ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಸೇನಾನಿಗ್ರಾಮಣೀಶ್ಚ ತೌ ॥ ೧೮ ॥

ವಿದ್ಯುತ್‌ಸ್ಫೂರ್ಜಶ್ಚ ತಾವುಗ್ರೌ ಯಾತುಧಾನಾವುದಾಹೃತೌ ।
ಸಹೇ ಚೈವ ಸಹಸ್ಯೇ ಚ ವಸಂತ್ಯೇತೇ ದಿವಾಕರೇ ॥ ೧೯ ॥

ತತಃ ಶೈಶಿರಯೋಶ್ಚಾಪಿ ಮಾಸಯೋರ್ನಿವಸಂತಿ ವೈ ।
ತ್ವಷ್ಟಾ ವಿಷ್ಣುರ್ಜಮದಗ್ನಿರ್ವಿಶ್ವಾಮಿತ್ರಸ್ತಥೈವ ಚ ॥ ೨೦ ॥

ಕಾದ್ರವೇಯೌ ತಥಾ ನಾಗೌ ಕಂಬಲಾಶ್ವತರಾವುಭೌ ।
ಗಂಧರ್ವೋ ಧೃತರಾಷ್ಟ್ರಶ್ಚ ಸೂರ್ಯವರ್ಚಾಸ್ತಥೈವ ಚ ॥ ೨೧ ॥

---

೧೬-೧೯. ಹೇಮಂತಋತುವಿನ ಮಾರ್ಗಶಿರ ಪುಷ್ಯಮಾಸಗಳಲ್ಲಿ ದೇವಷ್ಯಾದಿಗಳು ಸೂರ್ಯನಲ್ಲಿ ವಾಸಿಸುವರು. ಅಂಶ ಭಗರೆಂಬ ಇಬ್ಬರು ಪ್ರಖ್ಯಾತ ಪುರುಷರೂ, ಕಶ್ಯಪ ಮಹರ್ಷಿಯೂ, ಋತುವೂ, ಭುಜಂಗಮ ಮಹಾಪದ್ಮ ಕರ್ಕೋಟಕರೆಂಬ ಸರ್ಪಗಳೂ, ಚಿತ್ರಸೇನ ಊರ್ಣಾಯುರೆಂದು ಪ್ರಖ್ಯಾತರಾದ ಇಬ್ಬರು ಗಂಧರ್ವರೂ, ಊರ್ವಶೀ ವಿಪ್ರಚಿತ್ತಿಯರೆಂಬ ಸುಂದರಿಯರಾದ ಇಬ್ಬರು ಅಪ್ಸರಸಿಯರೂ, ತಾರ್ಕ್ಷ್ಯನೆಂಬ ಸೇನಾಪತಿಯೂ, ಅರಿಷ್ಟನೇಮಿಯೆಂಬ ಗ್ರಾಮಾಧಿಕಾರಿಯೂ, ವಿದ್ಯುತ್ತು ಸ್ಫೂರ್ಜರೆಂಬ ಪ್ರಖ್ಯಾತರಾದ ಇಬ್ಬರು ರಾಕ್ಷಸರೂ, ಇವರೆಲ್ಲರೂ ಒಂದೊಂದು ಗುಂಪಾಗಿ ಕೂಡಿ ಮಾರ್ಗಶಿರ ಪುಷ್ಯಮಾಸಗಳಲ್ಲಿ ಸೂರ್ಯನ ಸಂಗಡ ವಾಸಮಾಡುವರು.

೨೦-೨೩. ಅನಂತರ ಮಾಘ ಫಾಲ್ಗುಣಗಳೆಂಬ ಶಿಶಿರಋತುವಿನಲ್ಲಿ ದೇವಋಷ್ಯಾದಿಗಳು ಸೂರ್ಯನಲ್ಲಿ ವಾಸಮಾಡುವರು. ದೇವಬಡಗಿ, ವಿಷ್ಣು, ಜಮದಗ್ನಿ, ವಿಶ್ವಾಮಿತ್ರ, ಕದ್ರೂದೇವಿಯ ಮಕ್ಕಳಾದ ಕಂಬಳ ಅಶ್ವತರರೆಂಬ ನಾಗಗಳು ಮಹಾತೇಜಸ್ವಿಯಾದ ಧೃತರಾಷ್ಟ್ರನೆಂಬ ಗಂಧರ್ವನೂ, ಮನೋಹರರಾದ

ತಿಲೋತ್ತಮಾಪ್ಸರಾಶ್ಚೈವ ದೇವೀ ರಂಭಾ ಮನೋರಮಾ ।
ಋತಜಿತ್ಸತ್ಯಜಿಚ್ಚೈವ ಗ್ರಾಮಣೌ ಲೋಕವಿಶ್ರುತೌ ॥ ೨೨ ॥

ಬ್ರಹ್ಮೋಪೇತಸ್ತಥಾ ದಕ್ಷೋ ಯಜ್ಞೋಪೇತಶ್ಚ ಸ ಸ್ಮೃತಃ ।
ಏತೇ ದೇವಾ ವಸಂತ್ಯರ್ಕೇ ದ್ವೌ ಮಾಸೌ ತು ಕ್ರಮೇಣ ತು ॥ ೨೩ ॥

ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶ ಸಪ್ತಕಾಃ ।
ಸೂರ್ಯಮಾಪ್ಯಾಯಯಂತ್ಯೇತೇ ತೇಜಸಾ ತೇಜ ಉತ್ತಮಂ ॥ ೨೪ ॥

ಪ್ರಥಿತೈಸ್ತೈರ್ವ್ಯರ್ಚೋಭಿಸ್ತು ಸ್ತುವಂತಿ ಮುನಯೋ ರವಿಂ ।
ಗಂಧರ್ವಾಪ್ಸರಸಶ್ಚೈವ ಗೀತನೃತ್ಯೈರುಪಾಸತೇ ॥ ೨೫ ॥

ಗ್ರಾಮಣೀಯಕ್ಷಭೂತಾಸ್ತು ಕುರ್ವತೇ ಭೀಮಸಂಗ್ರಹಂ ।
ಸರ್ಪಾವಹಂತಿ ಸೂರ್ಯಂ ಚ ಯಾತುಧಾನಾನುಯಾಂತಿ ಚ ॥
ವಾಲಖಿಲ್ಯಾ ನ್ಯಯಂತ್ಯಸ್ತಂ ಪರಿಚಾರ್ಯೋದಯಾದ್ರವಿಂ ॥ ೨೬ ॥

---

ತಿಲೋತ್ತಮ ರಂಭೆಯರೆಂಬ ದಿವ್ಯಾಪ್ಸರಸಿಯರೂ, ಲೋಕವಿಖ್ಯಾತರೂ, ಗ್ರಾಮಾಧಿಕಾರಿಗಳೂ ಆದ ಋತಜಿತ ಸತ್ಯಜಿತರೆಂಬುವರೂ, ಬ್ರಾಹ್ಮಣರಿಂದಲೂ ಯಜ್ಞಯಾಗಾದಿಗಳಿಂದಲೂ ಸಹಿತವಾದ ದಕ್ಷಪ್ರಜಾಪತಿಯೂ ಇವರೇ ಮೊದಲಾದವರು ಕ್ರಮವಾಗಿ ಮಾಘ ಫಾಲ್ಗುಣ ಮಾಸಗಳಲ್ಲಿ ಸೂರ್ಯನ ಸಂಗಡ ವಾಸಿಸುವರು.

೨೪. ಸ್ಥಾನಾಭಿಮಾನಿಗಳಾದ ಈ ಹನ್ನೆರಡು ಸಪ್ತಸಂಖ್ಯಾಕರಾದ ಗಣವು ಅಂದರೆ ಎಂಭತ್ತುನಾಲ್ಕುಜನ ದೇವಾದಿಗಳು (ದೇವದಾನವ ಪನ್ನಗಗಳು) ತಮ್ಮ ದಿವ್ಯ ತೇಜಸ್ಸುಗಳಿಂದ ಉತ್ಕೃಷ್ಟನಾದ ಸೂರ್ಯನನ್ನು ಸಂತೋಷಗೊಳಿಸುವರು. (ಪೂರ್ಣಗೊಳಿಸುವರು).

೨೫-೨೬. ಮಹರ್ಷಿಗಳು, ಪ್ರಸಿದ್ಧಗಳೂ, ವೇದೋಕ್ತಗಳೂ ಆದ ಸ್ತೋತ್ರಗಳಿಂದ ಸೂರ್ಯದೇವನನ್ನು ಹೊಗಳುತ್ತಾರೆ. ಗಂಧರ್ವರೂ ಮತ್ತು ಅಪ್ಸರಸ್ತ್ರೀಯರೂ ನೃತ್ಯಗೀತಾದಿಗಳಿಂದ ಸೂರ್ಯನನ್ನು ಆರಾಧಿಸುತ್ತಾರೆ. ಗ್ರಾಮಾಧಿಕಾರಿಗಳೂ, ಯಕ್ಷರಾಕ್ಷಸರೂ ಭಯಂಕರವಾದ ಅಮೂಲ್ಯವಾದ ವಸ್ತುಗಳನ್ನು ಸಂಗ್ರಹಿಸುತ್ತಾರೆ. ಸರ್ಪಗಳು ಸೂರ್ಯನನ್ನು ಹೊರುತ್ತವೆ. ರಾಕ್ಷಸರು ಅವನನ್ನು ಹಿಂಬಾಲಿಸುವರು. ವಾಲಖಿಲ್ಯಾದಿ ಮುನಿಗಳು ಉದಯ ಮೊದಲುಗೊಂಡು ಅಸ್ತಮಯ ವರೆಗೂ ಸೂರ್ಯದೇವನನ್ನು ಸೇವಿಸುವರು.

ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾತಪಃ ।
ಯಥಾಯೋಗಂ ಯಥಾಸತ್ಯಂ ಯಥಾಧರ್ಮಂ ಯಥಾಬಲಂ ॥ ೨೭ ॥

ಯಥಾ ತಪತ್ಯಸೌ ಸೂರ್ಯಸ್ತೇಷಾಂ ಸಿದ್ಧಸ್ತು ತೇಜಸಾ ।
ಇತ್ಯೇತೇ ವೈ ವಸಂತೀಹ ದ್ವೌ ದ್ವೌ ಮಾಸೌ ದಿವಾಕರೇ ॥ ೨೮ ॥

ಋಷಯೋ ದೇವಗಂಧರ್ವಾಃ ಪನ್ನಗಾಪ್ಸರಸಾಂ ಗಣಾಃ ।
ಗ್ರಾಮಣ್ಯಶ್ಚ ತಥಾ ಯಕ್ಷಾ ಯಾತುಧಾನಾಶ್ಚ ಭೂರಿಶಃ ॥ ೨೯ ॥

ಏತೇ ತಪಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ಚ ।
ಭೂತಾನಾಮಶುಭಂ ಕರ್ಮ ವ್ಯಪೋಹಂತೀಹ ಕೀರ್ತಿತಾಃ ॥ ೩೦ ॥

ಮಾನವಾನಾಂ ಶುಭಂ ಹ್ಯೇತೇ ಹರಂತಿ ದುರಿತಾತ್ಮನಾಂ ।
ದುರಿತಂ ಹಿ ಪ್ರಚಾರಾಣಾಂ ವ್ಯಾಪೋಹಂತಿ ಕ್ವಚಿತ್ ಕ್ವಚಿತ್ ॥ ೩೧ ॥

---

೨೭-೨೮. ಮೇಲೆ ಹೇಳಿದ ದೇವತೆಗಳ ವೀರ್ಯ, ತಪಸ್ಸು, ಯೋಗ, ಸತ್ಯ, ಧರ್ಮ, ಶಕ್ತಿ ಇವುಗಳಿಗನುಸಾರವಾಗಿ ಸೂರ್ಯನ ಶಕ್ತಿ ಸಾಮರ್ಥ್ಯಾದಿಗಳು ಇರುತ್ತವೆ. ಸೂರ್ಯನು ಹೇಗೆ ಹೊಳೆಯುತ್ತಾನೆಯೋ ಅವರ ಸಿದ್ಧಗಳೂ ಹಾಗೆ ಇರುತ್ತವೆ. ಮೇಲೆ ತಿಳಿಸಿರುವ ದೇವತೆಗಳು ಸೂರ್ಯನಲ್ಲಿ ಎರಡೆರಡು ತಿಂಗಳು ವಾಸಿಸುತ್ತಾರೆ.

೨೯-೩೦. ಋಷಿಗಳು, ದೇವತೆಗಳು, ಗಂಧರ್ವರು, ಸರ್ಪಗಳು, ಅಪ್ಸರಸಿಯರ ಗಣಗಳು, ಗ್ರಾಮಾಧಿಕಾರಿಗಳು, ಯಕ್ಷರು, ಯಾತುಧಾನರು ಇವರು ಅತ್ಯಂತವಾಗಿ ತಪಿಸುತ್ತಲೂ, ಮಳೆಯನ್ನು ಕರೆಸುತ್ತಲೂ, ಪ್ರಕಾಶಿಸುತ್ತಲೂ, ಬೀಸುತ್ತಲೂ, ಬಿಡುತ್ತಲೂ, ಪ್ರಾಣಿಗಳ ದುಷ್ಕರ್ಮಗಳನ್ನು ಪರಿಹರಿಸುತ್ತಲೂ ಪ್ರಖ್ಯಾತರಾಗಿರುವರು.

೩೧. ಈ ಮೇಲೆ ಹೇಳಿದ ದೇವತೆಗಳು ದುರಾತ್ಮರಾದ ಪುರುಷರಿಗೆ ಪುಣ್ಯವೇನಾದರೂ ಇದ್ದರೆ ಆ ಪುಣ್ಯವನ್ನು ಅಪಹರಿಸುವರು. ಮತ್ತು ಮಹಾತ್ಮರಲ್ಲಿ ಪಾಪವೇನಾದರೂ ಇದ್ದರೆ ಅವನ್ನು ಪರಿಹರಿಸುವರು. ಅವರು ಅಲ್ಲಲ್ಲಿಯೂ ಪಾಪ ಪರಿಹಾರಕ್ಕಾಗಿಯೇ ವಿಶೇಷವಾಗಿ ಸಂಚರಿಸುವರು.

**ವಿಮಾನೇಽವಸ್ಥಿತಾ ದಿವ್ಯೇ ಕಾಮಗಾ ವಾತರಂಹಸಃ ।**
**ಏತೇ ಸಹೈವ ಸೂರ್ಯೇಣ ಭ್ರಮಂತಿ ದಿವಸಾನುಗಾಃ ॥ ೩೨ ॥**

**ವರ್ಷಂತಶ್ಚ ತಪಂತಶ್ಚ ಹ್ಲಾದಯಂತಶ್ಚ ವೈ ಪ್ರಜಾಃ ।**
**ಗೋಪಯಂತಿ ತು ಭೂತಾನಿ ಸರ್ವಾಣೀಹಾಮನುಕ್ಷಯಾತ್ ॥ ೩೩ ॥**

**ಸ್ಥಾನಾಭಿಮಾನಿನಾಮೇತತ್ ಸ್ಥಾನಂ ಮನ್ವಂತರೇಷು ವೈ ।**
**ಅತೀತಾನಾಗತಾನಾಂ ವೈ ವರ್ತಂತೇ ಸಾಂಪ್ರತಂ ತು ಯೇ ॥ ೩೪ ॥**

**ಏವಂ ವಸಂತಿ ವೈ ಸೂರ್ಯೇ ಸಪ್ತಕಾಸ್ತೇ ಚತುರ್ದಿಶಂ ।**
**ಚತುರ್ದಶಸ್ತು ಸರ್ಗೇಷು ಗಣಾ ಮನ್ವಂತರೇಷು ಚ ॥ ೩೫ ॥**

---

೩೨. ಸ್ವೇಚ್ಛಾಚಾರಿಗಳಾದ ದೇವಾದಿಗಳು ವಾಯುವೇಗವೂ ದಿವ್ಯವೂ ಆದ ಸೂರ್ಯನ ರಥದಲ್ಲಿ ಕುಳಿತುಕೊಂಡು ಅವನ ಸಂಗಡಲೇ ಹಗಲೆಲ್ಲವೂ ಸಂಚಾರ ಮಾಡುವರು.

೩೩. ದೇವತೆಗಳು ಆ ಮನುಕಲ್ಪವು ಕಳೆಯುವವರೆಗೂ ಭೂತಗಳ ಕಲ್ಯಾಣಕ್ಕಾಗಿ ವೃಷ್ಟಿಯನ್ನೂ ಶಾಖವನ್ನೂ ಉಂಟುಮಾಡುತ್ತಲೂ, ಪ್ರಜೆಗಳನ್ನು ರಕ್ಷಿಸುತ್ತಲೂ, ಸಂತೋಷಗೊಳಿಸುತ್ತಲೂ, ಭೂತಗಳ ಹಿತಗಳನ್ನು ಚಿಂತಿಸುತ್ತಲೂ ಇರುವರು.

೩೪. ಹೀಗೆ ಮನ್ವಂತರಗಳಲ್ಲಿ ಸ್ಥಾನಾಭಿಮಾನಿಗಳಾದ ದೇವಋಷ್ಯಾದಿಗಳಿಗೆ ಪೂರ್ವೋಕ್ತವಾದ ಈ ಸ್ಥಾನವು ಕ್ಲಿಪ್ತವಾಗಿದೆ. ಈ ವರ್ತಮಾನ ಮನ್ವಂತರದಲ್ಲಿರುವಂತೆ ಅತೀತಾನಾಗತಮನ್ವಂತರಗಳಲ್ಲಿಯೂ ಕೂಡ ದೇವಾದಿಗಳು ಸೂರ್ಯನ ಸಂಗಡವೇ ಲೋಕಹಿತಕ್ಕಾಗಿ ಇರುವರು.

೩೫. ಹೀಗೆ ಆ ಸಪ್ತಗಣಗಳು ಲೋಕಕಲ್ಯಾಣಕ್ಕಾಗಿ ಸೂರ್ಯನ ಜೊತೆಯಲ್ಲಿಯೇ ನಾಲ್ಕು ದಿಕ್ಕುಗಳಲ್ಲಿಯೂ ವಾಸಿಸುವರು. ಹೀಗೆಯೇ ಈ ದೇವಗಣಗಳು ಚತುರ್ದಶ ಮನುಗಳ ಸೃಷ್ಟಿಕ್ರಮದಲ್ಲಿಯೂ ಇರುವರು. ಹದಿನಾಲ್ಕು ಮನ್ವಂತರಗಳಲ್ಲಿಯೂ ಒಂದೇ ಕ್ರಮವಿರುವುದು.

ಗ್ರೀಷ್ಮೇ ಹಿಮೇ ಚ ವರ್ಷಾಸು ಮುಂಚಮಾನಾ
ಧರ್ಮಂ ಹಿಮಂ ಚ ವರ್ಷಂ ಚ ದಿನಂ ನಿಶಾಂ ಚ ।
ಕಾಲೇನ ಗಚ್ಛತ್ಯೃತುವಶಾತ್ ಪರಿವೃತ್ತರಶ್ಮಿಃ
ದೇವಾನ್ ಪಿತ್ರ್ಯಾಂಶ್ಚ ಮನುಜಾಂಶ್ಚ ತರ್ಪಯನ್ ವೈ ॥ ೩೬ ॥

ಪ್ರೀಣಾತಿ ದೇವಾನಮೃತೇನ ಸೂರ್ಯಃ
ಸೋಮಂ ಸುಷುಮ್ನೇನ ವಿವರ್ಧಯಿತ್ವಾ ।
ಶುಕ್ಲೇ ತು ಪೂರ್ಣಂ ದಿವಸಕ್ರಮೇಣ
ತಂ ಕೃಷ್ಣಪಕ್ಷೇ ವಿಬುಧಾಃ ಪಿಬಂತಿ ॥ ೩೭ ॥

ಪೀತಂ ತು ಸೋಮಂ ದ್ವಿಕಲಾವಶಿಷ್ಟಂ
ಕೃಷ್ಣಕ್ಷಯೇ ರಶ್ಮಿಭಿಸ್ತಿಂ ಕ್ಷರಂತಂ ।
ಸುಧಾಮೃತಂ ತತ್ಪಿತರಃ ಪಿಬಂತಿ
ದೇವಾಶ್ಚ ಸೌಮ್ಯಾಶ್ಚ ತಥೈವ ಕವ್ಯಂ ॥ ೩೮ ॥

---

೩೬. ಸೂರ್ಯದೇವನು ಗ್ರೀಷ್ಮ ಹಿಮ ಮಳೆ ಈ ಕಾಲಗಳಲ್ಲಿ ಬಿಸಲು ಹಿಮ ಮಳೆ ಇವುಗಳನ್ನುಂಟುಮಾಡುತ್ತಾ ಆಯಾ ಋತುಗಳಿಗನುಕೂಲವಾಗಿಯೂ ಕಾಲಾನುಗುಣವಾಗಿಯೂ ಹಗಲು ರಾತ್ರಿಗಳನ್ನುಂಟುಮಾಡುತ್ತಾ ಬದಲಾಯಿಸಿಕೊಂಡು ರಶ್ಮಿಗಳುಳ್ಳವನಾಗಿ ದೇವತೆಗಳು ಋಷಿಗಳು ಮನುಷ್ಯರು ಇವರನ್ನು ಸಂತೋಷಪಡಿಸುತ್ತಾ ಸಂಚರಿಸುವನು.

೩೭. ಸೂರ್ಯನು ಅಮೃತದಿಂದ ದೇವತೆಗಳನ್ನು ತೃಪ್ತಿಪಡಿಸುತ್ತಾನೆ. ಶುಕ್ಲಪಕ್ಷದಲ್ಲಿ ಚಂದ್ರನನ್ನು ಕಲೆಗಳಿಂದ ವೃದ್ಧಿಪಡಿಸುತ್ತಾನೆ. ದೇವತೆಗಳು ಕೃಷ್ಣಪಕ್ಷದಲ್ಲಿ ಕ್ರಮವಾಗಿ ಚಂದ್ರನಲ್ಲಿರುವ ಅಮೃತವನ್ನು ಸಂಪೂರ್ಣವಾಗಿ ಪಾನಮಾಡುವರು.

೩೮. ಹೀಗೆ ದೇವತೆಗಳು ಕೃಷ್ಣಪಕ್ಷದಲ್ಲಿ ಚಂದ್ರಕಲೆಗಳನ್ನು ಪಾನಮಾಡುವರು. ಕೊನೆಗೆ ಚಂದ್ರನು ಕ್ಷಯಿಸಿ ಎರಡು ಕಲೆಗಳಿಂದ ಮಾತ್ರಾವಿಶಿಷ್ಟನಾಗುವನು. ಆಗ ಪಿತೃಗಳು, ದೇವತೆಗಳು, ಸೌಮ್ಯರು ಇವರು ಕವ್ಯವನ್ನು ಅಂದರೆ ಪಿತೃಕಾರ್ಯದಲ್ಲಿ ಕೊಡುವ ಹವಿಸ್ಸೇ ಮೊದಲಾದುವನ್ನು ಪಾನಮಾಡುವರು.

**ಸೂರ್ಯೇಣ ಗೋಭಿಸ್ತು ಸಮುದ್ಧೃತಾಭಿಃ**
**ಅದ್ಭಿಃ ಪುನಶ್ಚೈವ ಸಮುದ್ಧೃತಾನಿ ।**
**ವೃಷ್ಟ್ಯಾತಿವೃದ್ಧಾಭಿರಥೌಷಧೀಭಿಃ**
**ಮರ್ತ್ಯಾಃ ಕ್ಷುಧಂತ್ವನ್ನಪಾನೈರ್ಜಯಂತಿ ॥ ೩೯ ॥**

**ಅಮೃತೇನ ತೃಪ್ತಿಸ್ತ್ವರ್ಧಮಾಸಂ ಸುರಾಣಾಂ**
**ಮಾಸಾರ್ಧತೃಪ್ತಿಃ ಸ್ವಧಯಾ ಪಿತೄಣಾಂ ।**
**ಅನ್ನೇನ ಶಶ್ವತ್ತು ದಧಾತಿ ಮರ್ತ್ಯಾನ್**
**ಸೂರ್ಯಃ ಸ್ವಯಂ ತಚ್ಚ ಬಿಭರ್ತಿ ಗೋಭಿಃ ॥ ೪೦ ॥**

**ಅಯಂ ಹರಿಸ್ತೈರ್ಹರಿಭಿಸ್ತುರಂಗೈ-**
**ರರ್ಯ್ಯಾ ಹಿ ಚಾಪೋ ಹರತೀತಿ ರಶ್ಮಿಭಿಃ ।**
**ವಿಸರ್ಗಕಾಲೇ ವಿಸೃಜಂಶ್ಚ ತಾಃ ಪುನಃ ।**
**ಬಿಭರ್ತಿ ಶಶ್ವತ್ ಸವಿತಾ ಚರಾಚರಂ ॥ ೪೧ ॥**

---

೩೯. ಸೂರ್ಯನು ತನ್ನ ಪೂರ್ಣವಾದ ಕಿರಣಗಳಿಂದ ಜಲವನ್ನು ಸ್ವೀಕರಿಸಿ ಅದಕ್ಕೆ ಸಹಸ್ರಪಾಲು ಅಧಿಕವಾಗಿ ಮಳೆಯನ್ನು ಸುರಿಸಿ ಸಸ್ಯಲತಾದಿಗಳನ್ನು ವೃದ್ಧಿಮಾಡುತ್ತಾನೆ. ಹೀಗೆ ಮಳೆಯಿಂದ ಬೆಳೆದ ದವಸ ಧಾನ್ಯಾದಿಗಳಿಂದ ಮನುಷ್ಯರು ತಮ್ಮ ಹಸಿವನ್ನು ಪರಿಹರಿಸಿಕೊಳ್ಳುತ್ತಾರೆ. ಹೀಗೆ ಸೂರ್ಯನು ಅನ್ನಪಾನಗಳ ಮೂಲಕ ಪ್ರಜಾರಕ್ಷಣೆಗೆ ಮುಖ್ಯಕಾರಣನಾಗಿರುವನು.

೪೦. ದೇವತೆಗಳು ಶುಕ್ಲಪಕ್ಷದ ಹದಿನೈದು ದಿವಸಗಳಲ್ಲಿ ಚಂದ್ರಕಿರಣಗಳಿಂದ ತೃಪ್ತರಾಗುತ್ತಾರೆ. ಪಿತೃಗಳು ಕೃಷ್ಣಪಕ್ಷದ ಹದಿನೈದು ದಿವಸಗಳಲ್ಲಿ ಸ್ವಧಾಕಾರದಿಂದ ಕವ್ಯದಿಂದ ತೃಪ್ತರಾಗುತ್ತಾರೆ. ಮನುಷ್ಯರು ಅನ್ನಪಾನಾದಿಗಳಿಂದ ಜೀವಿಸುವರು. ಇವೆಲ್ಲಕ್ಕೂ ಸೂರ್ಯರಶ್ಮಿಗಳೇ ಕಾರಣಗಳಾಗಿವೆ. ಆದುದರಿಂದ ಸೂರ್ಯನೇ ದೇವಪಿತೃ ಮನುಷ್ಯರ ಜೀವನಕ್ಕೆ ಕಾರಣನಾಗಿರುತ್ತಾನೆ.

೪೧. ಹೀಗೆ ಸೂರ್ಯನು ಹಸುರಾದ ತನ್ನ ಕುದರೆಗಳಿಂದ ಸಂಚರಿಸುತ್ತಾ ರಶ್ಮಿಗಳಿಂದ ಜಲವನ್ನು ಸ್ವೀಕರಿಸಿ ಕಾಲಾನುಗುಣವಾಗಿ ಆ ಜಲವನ್ನು ಸುರಿಸುತ್ತಾ ಚರಾಚರಾತ್ಮಕವಾದ ಜಗತ್ತನ್ನು ರಕ್ಷಿಸುತ್ತಾನೆ.

ಹರಿಹರ್ರಿದ್ಭಿರ್ಹಿರ್ಯತೇ ತುರಂಗನ್ಮೈಃ
ಪಿಬಂತ್ಯಥಾಪೋ ಹರಿಭಿಃ ಸಹಸ್ರಧಾ ।
ತತಃ ಪ್ರಮುಂಚತ್ಯಪಿ ತಾಸ್ತ್ವಸೌ ಹರಿಃ
ಸ ಮುಹ್ಯಮಾನೋ ಹರಿಭಿಸ್ತುರಂಗನ್ಮೈಃ ॥ ೪೨ ॥

ಇತ್ಯೇಷ ಏಕಚಕ್ರೇಣ ಸೂರ್ಯಸ್ತೂರ್ಣಂ ರಥೇನ ತು ।
ಭದ್ರೈಸ್ತೈರಕ್ಷತೈರಶ್ವೈಃ ಸರ್ಪತೇಽಸೌ ದಿವಿ ಕ್ಷಯೇ ॥ ೪೩ ॥

ಅಹೋರಾತ್ರಾದ್ರಥೇನಾಽಸೌ ಏಕಚಕ್ರೇಣ ತು ಭ್ರಮನ್ ।
ಸಪ್ತದ್ವೀಪಸಮುದ್ರಾಂತಂ ಸಪ್ತಭಿಃ ಸಪ್ತಭಿರ್ಹಯೈಃ ॥ ೪೪ ॥

ಛಂದೋಭಿರಶ್ವರೂಪೈಸ್ತೈರ್ಯತಶ್ಚಕ್ರಂ ತತಃ ಸ್ಥಿತೈಃ ।
ಕಾಮರೂಪೈಃ ಸಕೃದ್ಯುಕ್ತೈರಮಿತೈಸ್ತೈರ್ಮನೋಜವೈಃ ॥ ೪೫ ॥

---

೪೨. ಈ ಸೂರ್ಯನು ಹಸುರಾದ ಅಶ್ವಗಳಿರುವ ರಥದಲ್ಲಿ ಕುಳಿತು ಸಂಚರಿಸುತ್ತಾ ತನ್ನ ಕಿರಣಗಳಿಂದ ಜಲವನ್ನು ಸ್ವೀಕರಿಸುವನು. ಅನಂತರ ಸಕಾಲದಲ್ಲಿ ಆ ಜಲವನ್ನು ಸಹಸ್ರಾಧಿಕವಾಗಿ ಸುರಿಸುವನು. ಇದರಿಂದ ಬೆಳೆಯಾಗಿ ಜನರು ಜೀವಿಸುವರು. ಹೀಗೆ ಸೂರ್ಯನೇ ಜಗದ್ರಕ್ಷಣೆಗೆ ಕಾರಣನಾಗಿರುವನು.

೪೩. ಹೀಗೆ ಸೂರ್ಯದೇವನು ಒಂದೇ ಚಕ್ರವಿರುವ ರಥದಿಂದ ಅತಿ ವೇಗವಾಗಿ ಸಂಚರಿಸುತ್ತಾ ಇರುವನು. ಮಂಗಳಕರಗಳೂ, ನಾಶರಹಿತವೂ ಆದ ಅಶ್ವಗಳಿಂದ ಸಹಿತವಾದ ಅವನ ರಥವು ಪ್ರಲಯಕಾಲದವರೆಗೂ ಆಕಾಶದಲ್ಲಿ ಸಂಚರಿಸುವುದು.

೪೪-೪೫. ಸೂರ್ಯದೇವನು ಅಹೋರಾತ್ರಿಗಳಲ್ಲಿಯೂ ಏಕಚಕ್ರವೂ ಏಳು ಅಶ್ವಗಳೂ ಇರುವ ತನ್ನ ರಥದಿಂದ ಸಪ್ತದ್ವೀಪಗಳು ಸಮುದ್ರಗಳು ಇವೆ ಎಲ್ಲೆಯಾಗಿರುವ ಭೂಮಂಡಲದಲ್ಲಿ ಸಂಚರಿಸುತ್ತಾನೆ. ಅವನ ಅಶ್ವಗಳು ಛಂದೋರೂಪಗಳೂ, ಕಾಮರೂಪಿಗಳೂ, ಮನೋವೇಗಿಗಳೂ, ಸ್ವೇಚ್ಛಾಚಾರಿಗಳೂ ಆಗಿವೆ. ಅಂತಹ ಅಶ್ವನಿರುವ ಅತಿ ವೇಗವಾದ ರಥದಿಂದ ಸೂರ್ಯನು ಪ್ರತಿದಿನವೂ ಸ್ವಕಾರ್ಯಗಳನ್ನು ಸಾಧಿಸುತ್ತಾ ಜಗದ್ರಕ್ಷಕನಾಗಿರುತ್ತಾನೆ.

**ಹರಿತೈರವ್ಯಯೈಃ ಪಿಂಗೈರೀಶ್ವರೈರ್ಬ್ರಹ್ಮವಾದಿಭಿಃ ।**
**ಅಶೀತಿಮಂಡಲಶತಂ ಭ್ರಮಂತ್ಯಬ್ದೇನ ತೇ ಹಯಾಃ ॥ ೪೬ ॥**

**ಬಾಹ್ಯಮಭ್ಯಂತರಂ ಚೈವ ಮಂಡಲಂ ದಿವಸಕ್ರಮಾತ್ ।**
**ಕಲ್ಪಾದೌ ಸಂಪ್ರಯುಕ್ತಾಸ್ತೇ ವಹಂತ್ಯಾಭೂತಸಂಪ್ಲವಾತ್ ॥**
**ಆವೃತಾ ವಾಲಖಿಲ್ಯೈಸ್ತೇ ಭ್ರಮಂತೇ ರಾತ್ರ್ಯಹಾನಿ ತು ॥ ೪೭ ॥**

**ಪ್ರಥಿತೈರ್ವರ್ಚೋಭಿರಗ್ರ್ಯೈಃ ಸ್ತೂಯಮಾನೋ ಮಹರ್ಷಿಭಿಃ ।**
**ಸೇವ್ಯತೇ ಗೀತನೃತ್ಯೈಶ್ಚ ಗಂಧರ್ವೈರಪ್ಸರೋಗಣೈಃ ॥**
**ಪತಂಗಃ ಪತಗೈರಶ್ವೈರ್ಭ್ರಮಮಾಣೋ ದಿವಸ್ಪತಿಃ ॥ ೪೮ ॥**

**ವೀಥ್ಯಾಶ್ರಯಾಣಿ ಚರತಿ ನಕ್ಷತ್ರಾಣಿ ತಥಾ ಶಶೀ ।**
**ಹ್ರಾಸವೃದ್ಧೀ ತಥೈವಾಸ್ಯ ರಶ್ಮೀನಾಂ ಸೂರ್ಯವತ್ ಸ್ಮೃತೇ ॥ ೪೯ ॥**

---

೪೬. ಸೂರ್ಯನ ಆ ಅಶ್ವಗಳು ಹಸುರಾಗಿಯೂ, ಅವ್ಯಯವಾಗಿಯೂ, ಪಿಂಗಳವಾಗಿಯೂ, ಸ್ವತಂತ್ರವಾಗಿಯೂ, ಬ್ರಹ್ಮಜ್ಞಾನಿಯಾಗಿಯೂ ಆಗಿ ಒಂದು ವರ್ಷಕ್ಕೆ ಎಂಟುನೂರು ಮಂಡಲಗಳನ್ನು ಸುತ್ತುತ್ತವೆ.

೪೭. ಕಲ್ಪ ಪ್ರಾರಂಭದಿಂದ ಮೇರುವಿನ ಕೆಳಗೂ ಮೇಲೂ ದಿವಸಕ್ರಮದಿಂದ ಮಂಡಲಾಕಾರವಾಗಿ ತಿರುಗಾಡುವ ಆ ಸೂರ್ಯಾಶ್ವಗಳು ಪ್ರಲಯಕಾಲದವರೆಗೂ ವಾಲಖಿಲ್ಯಾದಿ ಮಹರ್ಷಿಗಳಿಂದ ಸಹಿತವಾಗಿ ಹಗಲೂ ರಾತ್ರಿಗಳಲ್ಲಿಯೂ ಸಂಚರಿಸುತ್ತವೆ.

೪೮. ಮಹರ್ಷಿಗಳು ದಿವಸ್ಪತಿಯಾದ ಸೂರ್ಯನನ್ನು ಅನ್ವರ್ಥಕವೂ ಪ್ರಸಿದ್ಧವೂ ಆದ ಸ್ತುತಿಗಳಿಂದ ಹೊಗಳುತ್ತಾರೆ. ಗಂಧರ್ವರೂ, ಅಪ್ಸರಸಿಯರೂ ನೃತ್ಯಗೀತಾದಿಗಳಿಂದ ಸೂರ್ಯನನ್ನು ಸೇವಿಸುವರು. ಹೀಗೆ ಇವರಿಂದ ಹೊಗಳಲ್ಪಟ್ಟ ಸೂರ್ಯನು ದಿವ್ಯಾಶ್ವಯುಕ್ತವಾದ ರಥದಿಂದ ಸಂಚರಿಸುವನು.

೪೯. ಸೂರ್ಯನ ಹಾಗೆ ಚಂದ್ರನೂ ಕೂಡ ಅಜವೀಥ್ಯಾದಿಗಳನ್ನು ಆಶ್ರಯಿಸಿರುವ ನಕ್ಷತ್ರಗಳ ಸಂಗಡ ಸಂಚರಿಸುವನು. ಸೂರ್ಯರಶ್ಮಿಗಳಂತೆ ಚಂದ್ರನಿಗೂ ವೃದ್ಧಿಹ್ರಾಸಗಳು ಉಂಟಾಗುವುವು.

ತ್ರಿಚಕ್ರೋಭಯಪಾರ್ಶ್ವಸ್ಥೋ ವಿಜ್ಞೇಯಃ ಶಶಿನೋ ರಥಃ ।
ಅಪಾಂಗರ್ಭಸಮುತ್ಪನ್ನೋ ರಥಃ ಸಾಶ್ವಃ ಸ ಸಾರಥೀ ॥
ಶತಾರೈಶ್ಚ ತ್ರಿಭಿಶ್ಚಕ್ರೈರ್ಯುಕ್ತಃ ಶುಕ್ಲೈರ್ಹಯೋತ್ತಮೈಃ ॥ ೫೦ ॥

ದಶಭಿಸ್ತು ಕೃಶೈರ್ದಿವ್ಯೈರಸಂಗೈಸ್ತೈರ್ಮನೋಜವೈಃ ।
ಸಕೃದ್ಯುಕ್ತೇ ರಥೇ ತಸ್ಮಿನ್ ವಹಂತೇ ಚಾ ಯುಗಕ್ಷಯಾತ್ ॥ ೫೧ ॥

ಸಂಗೃಹೀತೇ ರಥೇ ತಸ್ಮಿನ್ ಶ್ವೇತಶ್ಚಕ್ಷುಃಶ್ರವಾಸ್ತು ವೈ ।
ಅಶ್ವಾಸ್ತಮೇಕವರ್ಣಾಸ್ತೇ ವಹಂತೇ ಶಂಖವರ್ಚಸಂ ॥ ೫೨ ॥

ಯಯುಶ್ಚ ತ್ರಿಮನಾಶ್ಚೈವ ವೃಷೋ ರಾಜೀವಲೋ ಹಯಃ ।
ಅಶ್ವೋ ವಾಮಸ್ತುರಣ್ಯಶ್ಚ ಹಂಸೋ ವ್ಯೋಮಿ ಮೃಗಸ್ತಥಾ ॥ ೫೩ ॥

---

೫೦. ಚಂದ್ರನ ರಥಕ್ಕೆ ಉಭಯಪಾರ್ಶ್ವಗಳಲ್ಲಿಯೂ ಮೂರು ಚಕ್ರಗಳಿವೆ. ಅವನ ರಥ, ಅಶ್ವ, ಸಾರಥಿ ಇವರು ಜಲದಿಂದಲೇ ಉತ್ಪನ್ನರಾಗಿರುವರು. ಆ ರಥವು ನೂರಾರು ಆರೇ ಕೋಲುಗಳಿರುವ ಮೂರು ಚಕ್ರಗಳಿಂದಲೂ ಶುಭ್ರವೂ ಉತ್ತಮವೂ ಆದ ಹತ್ತು ಅಶ್ವಗಳಿಂದ ಯುಕ್ತವೂ ಆಗಿದೆ.

೫೧. ಚಂದ್ರನು ದಿವ್ಯವೂ, ಕೃಶವೂ, ಅಸಂಗವೂ, ಮನೋಜವವೂ ಆದ ದಶಾಶ್ವಗಳಿಂದ ಯುಕ್ತವಾದ ರಥದಲ್ಲಿ ಕುಳಿತು ಪ್ರಲಯಕಾಲದವರೆಗೂ ಸಂಚರಿಸುವನು. ಮತ್ತು ಪ್ರಜಾಪಾಲಕನಾಗುವನು.

೫೨. ಚಂದ್ರನ ರಥದಲ್ಲಿ ನಿಯುಕ್ತವಾದ ಅಶ್ವಗಳು ಬಿಳುಪಾದ ಕಣ್ಣು, ಕಿವಿ ಇವುಗಳುಳ್ಳವುಗಳೂ, ಸಮಾನವರ್ಣಗಳೂ ಆಗಿ ಶಂಖದಂತೆ ಶುಭ್ರವಾದ ಆ ರಥವನ್ನು ಒಯ್ಯುತ್ತವೆ.

೫೩. ಚಂದ್ರನ ರಥದಲ್ಲಿ ಹತ್ತು ಅಶ್ವಗಳು ಇವೆ. ಅವು ಯಯು, ತ್ರಿಮನಾ, ವೃಷ, ರಾಜೀ, ವಲ, ವಾಮ, ತುರಣ್ಯ, ಹಂಸ, ವ್ಯಾವಿಾ ಮತ್ತು ಮೃಗ ಎಂಬ ನಾಮಗಳಿಂದ ಪ್ರಖ್ಯಾತವಾಗಿವೆ.

ಇತ್ಯೇತೇ ನಾಮಭಿಃ ಸರ್ವೇ ದಶ ಚಂದ್ರಮಸೋ ಹಯಾಃ।
ಏತೇ ಚಂದ್ರಮಸಂ ದೇವಂ ವಹಂತಿ ದಿವಸಕ್ಷಯಾತ್ ॥ ೫೪ ॥

ದಿವ್ಯೈಃ ಪರಿವೃತಃ ಸೌಮ್ಯೈಃ ಪಿತೃಭಿಶ್ಚೈವ ಗಚ್ಛತಿ।
ಸೋಮಸ್ಯ ಶುಕ್ಲಪಕ್ಷಾದೌ ಭಾಸ್ಕರೇ ಪುರತಃ ಸ್ಥಿತೇ ॥
ಆಪೂರ್ಯತೇ ಪುರಸ್ಯಾಂತಃ ಸತತಂ ದಿವಸಕ್ರಮಾತ್ ॥ ೫೫ ॥

ದಿವ್ಯೈಃ ಪೀತಂ ಕ್ಷಯೇ ಸೋಮಮಾಪ್ಯಾಯಯತಿ ನಿತ್ಯದಾ ।
ಪೀತಂ ಪಂಚದಶಾಹಂ ತು ರಶ್ಮಿನೈಕೇನ ಭಾಸ್ಕರಃ ॥ ೫೬ ॥

ಆಪೂರಯರ್ನ ಸುಷುಮ್ನೇನ ಭಾಗಂ ಭಾಗಮಹಃ ಕ್ರಮಾತ್ ।
ಸುಷುಮ್ನಾಪ್ಯಾಯಮಾನಸ್ಯ ಶುಕ್ಲಾ ವರ್ಧಂತಿ ವೈ ಕಲಾಃ ॥ ೫೭ ॥

---

೫೪. ಮೇಲೆ ನಿರೂಪಿಸಿದ ಹತ್ತು ನಾಮಗಳಿರುವ ಹತ್ತು ಕುದುರೆಗಳು ಪ್ರಲಯಕಾಲದವರೆಗೂ ಚಂದ್ರನ ರಥವನ್ನು ಎಳೆದುಕೊಂಡು ಹೋಗುತ್ತವೆ.

೫೫. ಚಂದ್ರನು ದೇವತೆಗಳಿಂದಲೂ ಪಿತೃಗಳಿಂದಲೂ ಕೂಡಿ ಪ್ರತಿನಿತ್ಯವೂ ಸಂಚರಿಸುತ್ತಾನೆ. ಶುಕ್ಲಪಕ್ಷದಲ್ಲಿ ಚಂದ್ರನು ಸೂರ್ಯನ ಎದುರಿಗೆ ಇರುವುದರಿಂದ ನಿತ್ಯವೂ ಕ್ರಮವಾಗಿ ಕಲೆಗಳಿಂದ ವೃದ್ಧಿಯಾಗುತ್ತಾನೆ.

೫೬. ದೇವತೆಗಳು ಚಂದ್ರನ ಅಮೃತಮಯವಾದ ಕಲೆಗಳನ್ನು ಪಾನ ಮಾಡುವುದರಿಂದ ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷೀಣನಾಗುವನು. ಹೀಗೆ ಕ್ಷೀಣವಾದ ಕಲೆಗಳನ್ನು ಸೂರ್ಯನು ನಿತ್ಯವೂ ಒಂದೊಂದು ಕಲೆಯಂತೆ ತನ್ನ ಕಿರಣಗಳ ಮೂಲಕ ಪೂರ್ಣವಾಡುವನು.

೫೭. ಸೂರ್ಯನು ಸುಷುಮ್ನಾನಾಡಿಯಿಂದ ದಿವಸ ಕ್ರಮವಾಗಿ ಚಂದ್ರನನ್ನು ಪೂರ್ಣಗೊಳಿಸುವನು. ಹೀಗೆ ಸುಷುಮ್ನೆಯಿಂದ ಚಂದ್ರನ ಕಲೆಗಳು ಪ್ರತಿ ದಿವಸ ದಲ್ಲಿಯೂ ಶುಭ್ರವಾಗಿ ಬೆಳೆಯುತ್ತವೆ.

ತಸ್ಮಾದ್ಧ್ರಸಂಸಿ ವೈ ಕೃಷ್ಣೇ ಶುಕ್ಲ ಆಪ್ಯಾಯಯಂತಿ ಚ ।
ಇತ್ಯೇವಂ ಸೂರ್ಯವೀರ್ಯೇಣ ಚಂದ್ರಸ್ಯಾಪ್ಯಾಯಿತಾ ತನುಃ ॥ ೫೮ ॥

ಪೌರ್ಣಮಾಸ್ಯಾಂ ಸ ದೃಶ್ಯೇತ ಶುಕ್ಲಸಂಪೂರ್ಣಮಂಡಲಃ ।
ಏವಮಾಪ್ಯಾಯಿತಃ ಸೋಮಃ ಶುಕ್ಲಪಕ್ಷೇ ದಿನಕ್ರಮಾತ್ ॥ ೫೯ ॥

ತತೋ ದ್ವಿತೀಯಾಪ್ರಭೃತಿ ಬಹುಲಸ್ಯ ಚತುರ್ದಶೀ ।
ಅಪಾಂ ಧಾರಮಯಸ್ಯೇಂದೋ ರಸಮಾತ್ರಾತ್ಮಕಸ್ಯ ಚ ॥
ಪಿಬಂತ್ಯಂಬುಮಯಂ ದೇವಾ ಮಧು ಸೌಮ್ಯಂ ಸುಧಾಮಯಂ ॥ ೬೦ ॥

ಸಂಭೃತಂ ಚಾರ್ಧಮಾಸೇನ ಅಮೃತಃ ಸೂರ್ಯತೇಜಸಾ ।
ಭೃಶಾರ್ಥಮಮೃತಂ ಸೌಮ್ಯಂ ಪೌರ್ಣಮಾಸ್ಯಾಮುಪಾಸತೇ ॥ ೬೧ ॥

---

೫೮. ಆದುದರಿಂದ ಕೃಷ್ಣಪಕ್ಷದಲ್ಲಿ ಕ್ಷೀಣವಾದ ಕಲೆಗಳು ಶುಕ್ಲಪಕ್ಷದಲ್ಲಿ ವೃದ್ಧಿಯಾಗುತ್ತವೆ. ಹೀಗೆ ಸೂರ್ಯನ ಶಕ್ತಿಯಿಂದ ಚಂದ್ರನ ಶರೀರವು ಪ್ರತಿ ತಿಂಗಳಲ್ಲಿಯೂ ಪೂರ್ಣವಾಗುವುದು.

೫೯. ಹುಣ್ಣಿಮೆಯ ದಿವಸದಲ್ಲಿ ಚಂದ್ರನು ಶುಭ್ರವಾಗಿಯೂ ಸಂಪೂರ್ಣ ಮಂಡಲನಾಗಿಯೂ ಪ್ರಕಾಶಿಸುವನು. ಹೀಗೆ ಶುಕ್ಲಪಕ್ಷದಲ್ಲಿ ಚಂದ್ರನು ದಿನಕ್ರಮವಾಗಿ ಸೂರ್ಯನ ಸಹಾಯದಿಂದ ಪೂರ್ಣನಾಗುತ್ತಾನೆ.

೬೦. ಅನಂತರ ಕೃಷ್ಣಪಕ್ಷದ ದ್ವಿತೀಯಾ ಮೊದಲುಗೊಂಡು ಚತುರ್ದಶೀ ದಿವಸದವರೆಗೂ, ಜಲದ ಸಾರರೂಪನೂ ಕೇವಲ ರಸಸ್ವರೂಪಿಯೂ ಸುಧಾಮಯನೂ ಆದ ಚಂದ್ರನ ಅಮೃಯವಾದ ಅಮೃತವನ್ನು ದೇವತೆಗಳು ಕ್ರಮವಾಗಿ ಪಾನ ಮಾಡುತ್ತಾರೆ.

೬೧. ಹೀಗೆ ಸೂರ್ಯನ ಶಕ್ತಿಯಿಂದ ಅರ್ಧಮಾಸದಲ್ಲಿ ಪೂರ್ಣವಾದ ಅಮೃತವನ್ನು ಪಾನಮಾಡುವುದಕ್ಕಾಗಿ ಹುಣ್ಣಿಮೆಯ ದಿವಸದಲ್ಲಿ ದೇವತೆಗಳು ಚಂದ್ರನನ್ನು ಸೇವಿಸುವರು.

ಏಕಮಾತ್ರಂ ಸುರೈಃ ಸರ್ವೈಃ ಪಿತೃಭಿಶ್ಚ ಮಹರ್ಷಿಭಿಃ ।
ಸೋಮಸ್ಯ ಕೃಷ್ಣಪಕ್ಷಾದೌ ಭಾಸ್ಕರಾಭಿಮುಖಸ್ಯ ಚ ॥ ೬೨ ॥

ಪ್ರಕ್ಷೀಯತೇ ಪುರಸ್ತಾಂತಃ ಪೀಯಮಾನಾಃ ಕಲಾಃ ಕ್ರಮಾತ್ ।
ಕ್ಷೀಯಂತೇ ತಸ್ಮಾತ್ ಕೃಷ್ಣೇ ಯಾಃ ಶುಕ್ಲೇ ಹ್ಯಾಪ್ಯಾಯಯಂತಿ ತಾಃ॥೬೩॥

ಏವಂ ದಿನಕ್ರಮಾತೀತೇ ವಿಬುಧಾಸ್ತು ನಿಶಾಕರಂ ।
ಪೀತ್ವಾರ್ಧಮಾಸಂ ಗಚ್ಛಂತಿ ಅಮಾವಾಸ್ಯಾಂ ಸುರೋತ್ತಮಾಃ ॥
ಪಿತರಶ್ಚೋಪತಿಷ್ಠಂತಿ ಅಮಾವಾಸ್ಯಾಂ ನಿಶಾಕರಂ ॥ ೬೪ ॥

ತತಃ ಪಂಚದಶೇ ಭಾಗೇ ಕಿಂಚಿಚ್ಛಿಷ್ಟೇ ಕಲಾತ್ಮಕೇ ।
ಅಪರಾಹ್ಣೇ ಪಿತೃಗಣೈರ್ಜಘನ್ಯಂ ಪರ್ಯುಪಾಸ್ಯತೇ ॥ ೬೫ ॥

ಪಿಬಂತಿ ದ್ವಿಕಲಾಕಾಲಂ ಶಿಷ್ಟಾ ತಸ್ಯ ತು ಯಾ ಕಲಾ ।
ನಿಃಸೃತಂ ತದಮಾವಾಸ್ಯಾಂ ಗಭಸ್ತಿಭ್ಯಃ ಸ್ವಧಾಮೃತಂ ॥
ತಾಂ ಸ್ವಧಾಂ ಮಾಸತೃಪ್ತ್ಯೈ ತು ಪೀತ್ವಾ ಗಚ್ಛಂತಿ ತೇಽಮೃತಂ ॥ ೬೬ ॥

---

೬೨-೬೩. ಸಮಸ್ತ ದೇವತೆಗಳು, ಪಿತೃಗಳು, ಮಹರ್ಷಿಗಳು ಇವರೆಲ್ಲರೂ ಹುಣ್ಣಿಮೆಯನ್ನು ಕಾದುಕೊಂಡಿದ್ದು ಚಂದ್ರನನ್ನು ಹೊಂದುವರು. ಚಂದ್ರನು ಕೃಷ್ಣಪಕ್ಷದ ಆದಿಯಲ್ಲಿ ಸೂರ್ಯನಿಗೆ ಅಭಿಮುಖನಾಗುವಾಗ ಕ್ರಮವಾಗಿ ಕಲೆಗಳು ಪಾನದಿಂದ ಕುಂದಿ ಕೃಷ್ಣಪಕ್ಷದಲ್ಲಿ ಕ್ಷಯಿಸುತ್ತವೆ. ಹೀಗೆ ಕ್ಷೀಣವಾದ ಚಂದ್ರಕಲೆಗಳು ಶುಕ್ಲಪಕ್ಷದಲ್ಲಿ ಪುನಃ ವೃದ್ಧಿಯಾಗುತ್ತವೆ.

೬೪. ಹೀಗೆ ದಿನಕ್ರಮವು ಅತೀತವಾಗಲು ದೇವತೆಗಳು ಚಂದ್ರನನ್ನು ಪಾನಮಾಡಿ ಅರ್ಧಮಾಸಾನಂತರ, ಹೊರಡುವರು. ಅಮಾವಾಸ್ಯೆಯಲ್ಲಿ ಪಿತೃಗಳು ಚಂದ್ರನನ್ನು ಹೊಂದಿ ಸೇವಿಸುವರು.

೬೫. ಹೀಗೆ ಹದಿನೈದನೆಯ ಭಾಗಮಾತ್ರ ಉಳಿದು ಇರಲಾಗಿ ಅಪರಾಹ್ಣದಲ್ಲಿ ಪಿತೃಗಣಗಳು ಚಂದ್ರನ ಜಘನಭಾಗವನ್ನು ಸೇವಿಸುವರು.

೬೬. ಅಮಾವಾಸ್ಯೆಯಲ್ಲಿ ಚಂದ್ರನಲ್ಲಿ ಯಾವ ಕಲಾದ್ವಯಗಳು ಇರುತ್ತವೆಯೋ ದೇವತೆಗಳು ಪಾನಮಾಡಿ ಅವಶಿಷ್ಟವಾದ ಆ ಎರಡು ಕಲೆಗಳನ್ನು ಪಿತೃಗಳು ಅಮಾವಾಸ್ಯೆಯಲ್ಲಿ ಪಾನಮಾಡಿ ತೃಪ್ತರಾಗುವರು. ಅವು ಸೂರ್ಯನ ಕಿರಣಗಳಿಂದ

ಸೌಮ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಸ್ತಥೈವ ಚ ।
ಕವ್ಯಾಶ್ಚೈವ ತು ಯೇ ಪ್ರೋಕ್ತಾಃ ಪಿತರಃ ಸರ್ವ ಏವ ತೇ ॥ ೬೭ ॥

ಸಂವತ್ಸರಾಸ್ತು ವೈ ಕವ್ಯಾಃ ಪಂಚಬ್ದಾ ಯೇ ದ್ವಿಜೈಃ ಸ್ಮೃತಾಃ ।
ಸೌಮ್ಯಾಸ್ತು ಋತವೋ ಜ್ಞೇಯಾ ಮಾಸಾ ಬರ್ಹಿಷದಃ ಸ್ಮೃತಾಃ ॥
ಅಗ್ನಿಷ್ವಾತ್ತಾರ್ತವಶ್ಚೈವ ಪಿತೃಸರ್ಗಾ ಹಿ ವೈ ದ್ವಿಜಾಃ ॥ ೬೮ ॥

ಪಿತೃಭಿಃ ಪೀಯಮಾನಸ್ಯ ಪಂಚದಶ್ಯಾಂ ಕಲಾತು ವೈ ।
ಯಾವನ್ನ ಕ್ಷೀಯತೇ ತಸ್ಯ ಭಾಗಃ ಪಂಚದಶಸ್ತು ಸಃ ॥ ೬೯ ॥

ಅಮಾವಾಸ್ಯಾಂತದಾ ತಸ್ಯ ಅಂತಮಾಪೂರ್ಯತೇ ಪರಂ ।
ವೃದ್ಧಿಕ್ಷಯೌ ವೈ ಪಕ್ಷಾದೌ ಷೋಡಶ್ಯಾಂ ಶಶಿನಃ ಸ್ಮೃತೌ ॥ ೭೦ ॥

---

ಚಂದ್ರನಿಗೆ ಬಂದಿರುತ್ತವೆ. ಸ್ವಧಾರೂಪವಾದ ಆ ಅಮೃತವನ್ನು ಪಿತೃಗಳು ಪಾನ ಮಾಡಿ ಹೋಗುವರು.

೬೭. ಆ ಸಮಸ್ತವಾದ ಪಿತೃಗಳು, ಸೌಮ್ಯರು, ಬರ್ಹಿಷದರು, ಅಗ್ನಿಷ್ವಾತ್ತರು, ಕವ್ಯರು ಎಂಬುದಾಗಿ ನಾಲ್ಕು ವಿಧರಾಗಿರುವರು. ನಾಲ್ಕು ಪಂಗಡವಾಗಿರುವರು.

೬೮. ಪಂಚಸಂವತ್ಸರಾಭಿಮಾನಿಗಳು ಕವ್ಯರೆಂದೂ, ಋತುಗಳ ಅಭಿಮಾನಿಗಳು ಸೌಮ್ಯರೆಂದೂ, ಮಾಸಾಭಿಮಾನಿಗಳು ಬರ್ಹಿಷದರೆಂದೂ, ಪಕ್ಷಾಭಿಮಾನಿಗಳು ಅಗ್ನಿಷ್ವಾತ್ತರೆಂದೂ, ಬ್ರಾಹ್ಮಣರು ಪಿತೃಗಳನ್ನು ಪ್ರತಿಸರ್ಗದಲ್ಲಿಯೂ ಇರುವುರೆಂದೂ ಹೇಳುವರು.

೬೯-೭೦. ಪಿತೃಗಳು ಅಮಾವಾಸ್ಯೆಯಲ್ಲಿ ಅವಶಿಷ್ಟಕಲೆಯನ್ನು ಪಾನಮಾಡಲಾಗಿ ಯಾವಾಗ ಹದಿನೈದನೆಯ ಭಾಗವು ಸಂಪೂರ್ಣವಾಗಿ ನಾಶವಾಗುವುದಿಲ್ಲವೋ ಆಗ ಅಮಾವಾಸ್ಯೆಯಾಗುವುದಿಲ್ಲ. ಅಮಾವಾಸ್ಯೆಯಲ್ಲಿ ಹದಿನಾರನೆಯ ಕಲೆಯು ನಾಶವಾಗುವುದು. ಹೀಗೆ ಚಂದ್ರನ ಕಲೆಗಳು ಮೊದಲನೆಯ ಹದಿನೈದನೆಯ ದಿವಸ ಅಂದರೆ ಹುಣ್ಣಿಮೆಯಲ್ಲಿ ವೃದ್ಧಿಯೂ ತಿಂಗಳಿನ ಅಮಾವಾಸ್ಯೆಯಲ್ಲಿ ಕ್ಷಯವೂ ಆಗುವುವು.

ಏವಂ ಸೂರ್ಯನಿಮಿತ್ತೈಷಾ ಕ್ಷಯವೃದ್ಧಿರ್ನಿಶಾಕರೇ ।
ತಾರಾಗ್ರಹಾಣಾಂ ವಕ್ಷ್ಯಾಮಿ ಸ್ವರ್ಭಾನೋಶ್ಚ ರಥಂ ಪುನಃ ॥ ೭೧ ॥

ತೋಯತೇಜೋಮಯಃ ಶುಭ್ರಃ ಸೋಮಪುತ್ರಸ್ಯ ವೈ ರಥಃ ।
ಯುಕ್ತೋ ಹಯೈಃ ಪಿಶಂಗೈಸ್ತು ಅಷ್ಟಾಭಿರ್ವಾತರಂಹಸೈಃ ॥ ೭೨ ॥

ಸವರೂಥಃ ಸಾನುಕರ್ಷಃ ಸೂಪೋ ದಿವ್ಯೋ ರಥೋ ಮಹಾನ್ ।
ಸೋಪಾಸಂಗಪತಾಕಸ್ತು ಸಧ್ವಜೋ ಮೇಘಸನ್ನಿಭಃ ॥ ೭೩ ॥

ಭಾರ್ಗವಸ್ಯ ರಥಃ ಶ್ರೀಮಾಂಸ್ತೇಜಸಾ ಸೂರ್ಯಸನ್ನಿಭಃ ।
ಪೃಥಿವೀಸಂಭವೈರ್ಯುಕ್ತೋ ನಾನಾವರ್ಣೈರ್ಹಯೋತ್ತಮೈಃ ॥ ೭೪ ॥

---

೭೧-೭೨. ಮೇಲೆ ಹೇಳಿದ ರೀತಿಯಲ್ಲಿ ಚಂದ್ರನ ವೃದ್ಧಿಕ್ಷಯಗಳು ಸೂರ್ಯನ ಅಧೀನವಾಗಿರುತ್ತವೆ ಚಂದ್ರನಂತೆಯೇ ತಾರಾಗ್ರಹಗಳೂ ಕೂಡ ಸೂರ್ಯನ ವಶವಾಗಿರುತ್ತವೆ. ಈಗ ರಾಹುವಿನ ರಥವನ್ನು ವರ್ಣಿಸುವೆನು ಕೇಳೆಂದನು. ರಾಹುವಿನ ರಥವು ತೇಜೋಮಯವೂ ಶುಭ್ರವೂ ಆಗಿರುವುದು. ಚಂದ್ರಪುತ್ರನಾದ ಬುಧನ ರಥವು ಪಿಶಂಗವರ್ಣವಾಗಿಯೂ ವಾಯುವೇಗವಾಗಿಯೂ ಇರುವ ಎಂಟು ಅಶ್ವಗಳಿಂದ ಯುಕ್ತವಾಗಿಯೂ ಇರುವುದು.

೭೩. ಬುಧನ ರಥವು ಶಸ್ತ್ರಾಧಾರವಾದ ಲೋಹಮಯ ಪೆಟ್ಟಿಗೆಯಿಂದ ಮಂಡಿತವೂ, ರಥಾಧಾರವಾದ ಅಚ್ಚಿನಿಂದ ಯುಕ್ತವೂ, ಸಾರಥಿವಿಶಿಷ್ಟವೂ, ಮಹತ್ತೂ, ಬಾಣಬತ್ತಳಿಕೆಗಳಿಂದ ಭೂಷಿತವೂ, ಧ್ವಜಪತಾಕಾಲಂಕೃತವೂ, ಮೇಘ ಸಮಾನವಾದ ಕಾಂತಿಯುಕ್ತವೂ ಸುಂದರವೂ ಆಗಿದೆ.

೭೪-೭೫. ಶುಕ್ರನ ರಥವು ಸೂರ್ಯನಂತೆ ತೇಜೋಮಯವೂ, ಪೃಥಿವೀ ಜನ್ಯವಾದ ನಾನಾ ಬಣ್ಣದ ಅಶ್ವಗಳಿಂದ ಯುಕ್ತವೂ, ಕಾಂತಿಯುಕ್ತವೂ, ಮಹಾ ಭಾಗ್ಯಶಾಲಿಯೂ, ಸ್ಥೂಲವೂ, ವಾಯುವೇಗಿಯೂ ಆದ ಶ್ವೇತ, ಪಿಶಂಗ, ಸಾರಂಗ,

**ಶ್ವೇತಃ ಪಿಶಂಗ ಸಾರಂಗೋ ನೀಲಃ ಪೀತೋ ವಿಲೋಹಿತಃ ।**
**ಕೃಷ್ಣಶ್ಚ ಹರಿತಶ್ಚೈವ ಪೃಷತಃ ಪೃಷ್ಣಿರೇವ ಚ ॥**
**ದಶಭಿಸ್ತೈರ್ಮಹಾಭಾಗ್ಯೈರಕೃಶೈರ್ವಾತವೇಗಿತೈಃ ॥ ೭೫ ॥**

**ಅಷ್ಟಾಶ್ವಃ ಕಾಂಚನಃ ಶ್ರೀಮಾನ್ ಸೋಮಸ್ಯಾಪಿ ರಥೋಽಭವತ್ ।**
**ಅಸಂಗೈರ್ಲೋಹಿತೈರಶ್ವೈಃ ಸರ್ವಗೈರಗ್ನಿಸಂಭವೈಃ ॥**
**ಸರ್ಪತೇಽಸೌ ಕುಮಾರೋ ವೈ ಋಜುವಕ್ರಾನುಚಕ್ರಗಃ ॥ ೭೬ ॥**

**ತತಸ್ತ್ವಾಂಗಿರಸೋ ವಿದ್ವಾನ್ ದೇವಾಚಾರ್ಯೋ ಬೃಹಸ್ಪತಿಃ ।**
**ಶೋಣೈರಶ್ವೈಃ ಕಾಂಚನೇನ ಸ್ಯಂದನೇನ ಪ್ರಸರ್ಪತಿ ॥ ೭೭ ॥**

**ಯುಕ್ತಸ್ತು ವಾಜಿಭಿರ್ದಿವ್ಯೈರಷ್ಟಾಭಿರ್ವಾತ ಸಮ್ಮಿತೈಃ ।**
**ನಕ್ಷತ್ರೇಽಬ್ದಂ ನಿವಸತಿ ಸ ವೇಗಸ್ತೇನ ಗಚ್ಛತಿ ॥ ೭೮ ॥**

---

ನೀಲ, ಪೀತ, ವಿಲೋಹಿತ, ಕೃಷ್ಣ, ಹರಿತ, ಪೃಷತ, ಪೃಷ್ಣಿ ಈ ನಾಮಕವಾದ ದಶಾಶ್ವಗಳಿಂದ ಸಹಿತವೂ ಆಗಿದೆ.

೭೬. ಸೋಮದೇವನ ರಥವು ಅಷ್ಟಾಶ್ವಯುಕ್ತವೂ, ಸುವರ್ಣಮಯವೂ, ಕಾಂತಿಯುಕ್ತವೂ, ಅಸಂಗವೂ, ಅಗ್ನಿಸಮವೂ, ಸರ್ವತ್ರ ಸಂಚಾರಿಯೂ, ರಕ್ತ ವರ್ಣವೂ ಆದ ಅಶ್ವಗಳಿಂದ ಮಂಡಿತವೂ ಆಗಿದೆ.

೭೭. ಅನಂತರ ಅಂಗಿರಸಪುತ್ರನೂ, ಜ್ಞಾನಿಯೂ, ದೇವಗುರುವೂ ಆದ ಬೃಹಸ್ಪತಿಯು ಕೆಂಪು ಕುದುರೆಗಳಿಂದ ಯುಕ್ತವೂ ಸುವರ್ಣಮಯವೂ ಆದ ರಥದಲ್ಲಿ ಸಂಚರಿಸುವನು.

೭೮. ಅಂತಹ ಬೃಹಸ್ಪತಿಯು ದಿವ್ಯವೂ ವಾಯುವೇಗಿಯೂ ಆದ ಎಂಟು ಅಶ್ವಯುಕ್ತವಾದ ರಥದಲ್ಲಿ ಕುಳಿತು ನಕ್ಷತ್ರಮಂಡಲದಲ್ಲಿ ಒಂದು ವರ್ಷ ವಾಸಿಸುತ್ತಾನೆ. ತರುವಾಯ ನಕ್ಷತ್ರಗಳೊಡನೆ ವೇಗವಾಗಿ ಸಂಚರಿಸುತ್ತಾನೆ.

ತತಃ ಶನೈಶ್ಚರೋಽಶ್ವೈಶ್ಚಿತ್ರೈಃ ಶಬಲೈರ್ವ್ಯೋಮಸಂಭವೈಃ ।
ಕಾರ್ಷ್ಣಾಯಸಂ ಸಮಾರುಹ್ಯ ಸ್ಯಂದನಂ ಯಾತಿ ವೈ ಶನೈಃ ॥ ೭೯ ॥

ಸ್ವರ್ಭಾನೋಽಸ್ತು ತಥೈವಾಶ್ವಾಃ ಕೃಷ್ಣಾ ಹ್ಯಷ್ಟೌ ಮನೋಜವಾಃ ।
ರಥಂತಮೋಮಯಂತಸ್ಯ ಸಕೃದ್ಯುಕ್ತಾ ವಹಂತ್ಯುತ ॥ ೮೦ ॥

ಆದಿತ್ಯಾನ್ನಿಃಸೃತೋ ರಾಹುಃ ಸೋಮಂ ಗಚ್ಛತಿ ಪರ್ವಸು ।
ಆದಿತ್ಯಮೇತಿ ಸೋಮಾಚ್ಚ ಪುನಃ ಸೌರೇಷು ಪರ್ವಸು ॥ ೮೧ ॥

ಅಥ ಕೇತುರಥಸ್ಯಾಶ್ವಾ ಅಷ್ಟಾವಷ್ಟೌ ವಾತರಂಹಸಃ ।
ಪಲಾಲಧೂಮ ಸಂಕಾಶಾ ಶಬಲಾರಾಸಭಾರುಣಾಃ ॥ ೮೨ ॥

---

೭೯. ತರುವಾಯ ಶನೈಶ್ಚರನು ವಿಚಿತ್ರವರ್ಣವೂ ಆಕಾಶಸಂಭೂತವೂ ಆದ ಅಶ್ವಗಳಿಂದ ಯುಕ್ತವೂ ಆಯಸಮಯವೂ (ಅಯೋಮಯವೂ) ಆದ ರಥದಲ್ಲಿ ಕುಳಿತು ಜ್ಯೋತಿರ್ಮಂಡಲದಲ್ಲಿ ಸಂಚರಿಸುತ್ತಾನೆ.

೮೦. ರಾಹುವಿನ ರಥವೂ ಸಹ ಕೃಷ್ಣವರ್ಣಗಳೂ, ಅತಿವೇಗವುಳ್ಳವುಗಳೂ ಆದ ಎಂಟು ಕುದುರೆಗಳಿಂದ ಯುಕ್ತವಾಗಿದೆ. ಆ ರಥವು ಅಂಧಕಾರಮಯವಾಗಿದೆ. ಈ ವಿಧವಾದ ರಥದಲ್ಲಿ ರಾಹುವು ಸಂಚರಿಸುವನು.

೮೧. ಸೂರ್ಯನ ಸಂಗಡವಿದ್ದ ರಾಹುವು ಪರ್ವಕಾಲದಲ್ಲಿ ಸೂರ್ಯನನ್ನು ಬಿಟ್ಟು ಚಂದ್ರನ ಬಳಿಗೆ ಹೋಗುವನು. ಸೂರ್ಯಗ್ರಹಣ ಕಾಲದಲ್ಲಿ ಚಂದ್ರನನ್ನು ಬಿಟ್ಟು ಸೂರ್ಯನ ಬಳಿಗೆ ಹೋಗುವನು.

೮೨. ರಾಹುವಿನ ರಥದಂತೆ ಕೇತುವಿನ ರಥಕ್ಕೂ ಕೂಡ ಅತಿ ವೇಗವಾದ ಎಂಟು ಅಶ್ವಗಳು ಕಟ್ಟಲ್ಪಟ್ಟಿವೆ. ಅವುಗಳಲ್ಲಿ ಕೆಲವು ಹುಲ್ಲಿನ ಧೂಮ್ರವರ್ಣಗಳಾಗಿಯೂ ಮತ್ತೆ ಕೆಲವು ವಿಚಿತ್ರವರ್ಣವುಳ್ಳವುಗಳಾಗಿಯೂ ಇನ್ನು ಕೆಲವು ಕತ್ತೆಯ ಬಣ್ಣಗಳಾಗಿಯೂ ಇವೆ.

ಏತೇ ವಾಹಾ ಗ್ರಹಾಣಾಂ ವೈ ಮಯಾ ಪ್ರೋಕ್ತಾ ರಥೈಃ ಸಹ।
ಸರ್ವೇ ಧ್ರುವನಿಬದ್ಧಾಸ್ತೇ ಪ್ರಬದ್ಧಾ ವಾತರಶ್ಮಿಭಿಃ ॥ ೮೩ ॥

ಏತೇ ವೈ ಭ್ರಾಮ್ಯಮಾಣಾಸ್ತು ಯಥಾಯೋಗಂ ಭ್ರಮಂತಿ ವೈ ।
ವಾಯುವ್ಯಾಭಿರದೃಶ್ಯಾಭಿಃ ಪ್ರಬದ್ಧಾ ವಾತರಶ್ಮಿಭಿಃ ॥ ೮೪ ॥

ಪರಿಭ್ರಮಂತಿ ತದ್ಬದ್ಧಾಶ್ಚಂದ್ರಸೂರ್ಯಗ್ರಹಾ ದಿವಿ ।
ಭ್ರಮಂತಮನುಗಚ್ಛಂತಿ ಧ್ರುವಂತೇ ಜ್ಯೋತಿಷಾಂ ಗಣಾಃ ॥ ೮೫ ॥

ಯಥಾ ನದ್ಯುದಕೇ ನೌಸ್ತು ಸಲಿಲೇನ ಸಹೋಹ್ಯತೇ ।
ತಥಾ ದೇವಾಲಯಾ ಹ್ಯೇತೇ ಉಹ್ಯಂತೇ ವಾತರಶ್ಮಿಭಿಃ ॥
ತಸ್ಮಾತ್ಸರ್ವೇಣ ದೃಶ್ಯಂತೇ ವ್ಯೋಮ್ನಿ ದೇವಗಣಾಸ್ತು ತೇ ॥ ೮೬ ॥

---

೮೩. ಹೀಗೆ ಸೂರ್ಯಾದಿ ನವಗ್ರಹಗಳ ಅಶ್ವಗಳನ್ನೂ ರಥಗಳನ್ನೂ ಸಹ ನಿಮಗಾಗಿ ನಿರೂಪಿಸಿರುವೆನು. ಆ ರಥಗಳೆಲ್ಲವೂ ವಾತವೆಂಬ ಹಗ್ಗದಿಂದ ಕಟ್ಟಲ್ಪಟ್ಟು ಧ್ರುವನ ಅಧೀನವಾಗಿವೆ.

೮೪. ಮೇಲೆ ಹೇಳಿದ ಸೂರ್ಯಾದಿಗ್ರಹಗಳ ರಥಗಳು ಧ್ರುವನಿಂದ ಪ್ರೇರಿತವಾಗಿ ಯಥಾಯೋಗ್ಯವಾಗಿ ಚಲಿಸುವುವು. ಆ ರಥಗಳು ವಾಯುಸಂಬಂಧವಾದ ಅಥವಾ ವಾತವೆಂಬ ಹಗ್ಗದಿಂದ ಕಟ್ಟಲ್ಪಟ್ಟಿರುತ್ತವೆ.

೮೫. ವಾತವೆಂಬ ಹಗ್ಗದಿಂದ ಕಟ್ಟಲ್ಪಟ್ಟ ಚಂದ್ರಸೂರ್ಯಾದಿಗ್ರಹಗಳು ಆಕಾಶದಲ್ಲಿ ಸಂಚರಿಸುತ್ತವೆ. ಆ ಜ್ಯೋತಿರ್ಗಣಗಳು ಆಕಾಶದಲ್ಲಿ ಸಂಚರಿಸುವ ಧ್ರುವನನ್ನು ಅನುಸರಿಸಿ ಸಂಚರಿಸುವುವು.

೮೬. ನದಿಯ ನೀರಿನಲ್ಲಿ ದೋಣಿಯು ತೇಲಿ ಸಂಚರಿಸುವಂತೆ ದೇವತೆಗಳ ಆಲಯಗಳು ವಾತರಶ್ಮಿಗಳಿಂದ ಧರಿಸಲ್ಪಟ್ಟಿವೆ. ಆದುದರಿಂದ ಆಕಾಶದಲ್ಲಿ ದೇವಾಲಯವಿರುವುದು ಆಶ್ಚರ್ಯವೇನೂ ಅಲ್ಲ. ಆದುದರಿಂದ ಸಮಸ್ತ ದೇವತೆಗಳು ವಾತರಶ್ಮಿಗಳಿಂದ ಧರಿಸಲ್ಪಟ್ಟು ಸರ್ವರಿಂದಲೂ ಕಾಣಲ್ಪಡುತ್ತಾರೆ.

ಯಾವಂತ್ಯಶ್ಚೈವ ತಾರಾಸ್ತು ತಾವಂತೋ ವಾತರಶ್ಮಯಃ ।
ಸರ್ವಾ ಧ್ರುವನಿಬದ್ಧಾಸ್ತಾ ಭ್ರಮಂತ್ಯೋ ಭ್ರಾಮಯಂತಿ ತಂ ॥ ೮೭ ॥

ತೈಲಪೀಡಾಕರಂ ಚಕ್ರಂ ಭ್ರಮದ್ಭ್ರಾಮಯತೇ ತಥಾ ।
ತಥಾ ಭ್ರಮಂತಿ ಜ್ಯೋತೀಂಷಿ ವಾತಬದ್ಧಾನಿ ಸರ್ವಶಃ ॥ ೮೮ ॥

ಅಲಾತಚಕ್ರವದ್ಯಾಂತಿ ವಾತಚಕ್ರೇರಿತಾನಿ ತು ।
ತಸ್ಮಾಜ್ಜ್ಯೋತೀಂಷಿ ವಹತೇ ಪ್ರವಹಂಸ್ತೇನ ಸಸ್ಮೃತಃ ॥ ೮೯ ॥

ಏವಂ ಧ್ರುವನಿಬದ್ಧೋಽಸೌ ಸರ್ಪತೇ ಜ್ಯೋತಿಷಾಂ ಗಣಃ ।
ಸೈಷ ತಾರಾಮಯೋ ಜ್ಞೇಯಃ ಶಿಶುಮಾರೋ ಧ್ರುವೋ ದಿವಿ ॥
ಯದಹ್ನಾ ಕುರುತೇ ಪಾಪಂ ದೃಷ್ಟ್ವಾ ತಂ ನಿಶಿ ಮುಚ್ಯತೇ ॥ ೯೦ ॥

---

೮೭. ಆಕಾಶದಲ್ಲಿ ಎಷ್ಟು ನಕ್ಷತ್ರಗ್ರಹಾದಿಗಳಿರುತ್ತವೆಯೋ ಅಷ್ಟು ವಾತರಶ್ಮಿಗಳು ಅವನ್ನು ಧರಿಸಿರುತ್ತವೆ. ಅವೆಲ್ಲವೂ ಧ್ರುವಾಧೀನಗಳಾಗಿವೆ. ಧ್ರುವನು ತಾನು ಸಂಚರಿಸುತ್ತಾ ಅವನ್ನೂ ಸುತ್ತಿಸುವನು.

೮೮. ಎಣ್ಣೆಯನ್ನು ತೆಗೆಯುವ ಯಂತ್ರದ ಚಕ್ರವು ತಿರುಗುತ್ತಾ ಇತರ ಭಾಗಗಳನ್ನು ತಿರುಗಿಸುವಂತೆ ಧ್ರುವನು ಸಂಚರಿಸುತ್ತಾ ವಾತಬದ್ಧವಾದ ಜ್ಯೋತಿರ್ಗಣವನ್ನು ಸಂಪೂರ್ಣವಾಗಿಯೂ ಸುತ್ತಿಸುತ್ತಾನೆ.

೮೯. ವಾತಚಕ್ರದಿಂದ ಪ್ರೇರಿತವಾದ ಜ್ಯೋತಿರ್ಗಣವು ಅಲಾತ ಚಕ್ರದಂತೆ ಭ್ರಮಿಸುತ್ತದೆ. ಹೀಗೆ ವಾತವು ಜ್ಯೋತಿರ್ಮಂಡಲವನ್ನು ವಹಿಸುವುದರಿಂದ ಪ್ರವಹಣವಾತವೆಂದು ಪ್ರಸಿದ್ಧವಾಗಿದೆ.

೯೦. ಹೀಗೆ ಜ್ಯೋತಿರ್ಗಣವು ಧ್ರುವಾಧೀನವಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತದೆ. ಹೀಗೆ ತಾರಾಗಣದಿಂದ ಕೂಡಿದ ಧ್ರುವನು ಆಕಾಶದಲ್ಲಿರುವ ಶಿಶುಮಾರ ಮೂರ್ತಿಯ ಅಧೀನನಾಗಿರುವನು. ಈ ರೀತಿಯಾಗಿರುವ ಧ್ರುವನನ್ನು ಯಾವನು ತಿಳಿಯುತ್ತಾನೋ ಅವನ ಹಗಲು ಮಾಡಿದ ಪಾಪವೆಲ್ಲವೂ ರಾತ್ರಿಯಲ್ಲಿ ಪರಿಹಾರವಾಗುವುವು.

ಯಾವತ್ಯಶ್ಚೈವ ತಾರಾಸ್ತಾಃ ಶಿಶುಮಾರಾಶ್ರಿತಾ ದಿವಿ ।
ತಾವಂತ್ಯೇವ ತು ವರ್ಷಾಣಿ ಜೀವಂತ್ಯಭ್ಯಧಿಕಾನಿ ತು ॥ ೯೧ ॥

ಶಾಶ್ವತಃ ಶಿಶುಮಾರೋಽಸೌ ವಿಜ್ಞೇಯಃ ಪ್ರವಿಭಾಗಶಃ ।
ಉತ್ತಾನಪಾದಸ್ತಸ್ಯಾಥ ವಿಜ್ಞೇಯೋ ಹ್ಯುತ್ತರೋ ಹನುಃ ॥ ೯೨ ॥

ಯಜ್ಞೋಽಧರಸ್ತು ವಿಜ್ಞೇಯೋ ಧರ್ಮೋ ಮೂರ್ಧಾನಮಾಶ್ರಿತಃ ।
ಹೃದಿ ನಾರಾಯಣಃ ಸಾಧ್ಯಃ ಅಶ್ವಿನೌ ಪೂರ್ವಪಾದಯೋಃ ॥ ೯೩ ॥

ವರುಣಶ್ಚಾರ್ಯಮಾ ಚೈವ ಪಶ್ಚಿಮೇ ತಸ್ಯ ಸಕ್ಥಿನಿ ।
ಶಿಶ್ನಃ ಸಂವತ್ಸರಸ್ತಸ್ಯ ಮಿತ್ರೋಽಪಾನೇ ಸಮಾಶ್ರಿತಃ ॥ ೯೪ ॥

ಪುಚ್ಛೇಽಗ್ನಿಶ್ಚ ಮಹೇಂದ್ರಶ್ಚ ಮರೀಚಿಃ ಕಶ್ಯಪೋ ಧ್ರುವಃ ।
ತಾರಕಾಃ ಶಿಶುಮಾರಾಶ್ಚ ನಾಸ್ತಮೇತಿ ಚತುಷ್ಟಯಂ ॥ ೯೫ ॥

---

೯೧. ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆಯೋ ಅವೆಲ್ಲವೂ ಶಿಶುಮಾರರೂಪಿಯಾದ ಮಹಾವಿಷ್ಣುವನ್ನು ಆಶ್ರಯಿಸಿಕೊಂಡಿರುತ್ತವೆ. ಎಷ್ಟು ನಕ್ಷತ್ರಗಳಿವೆಯೋ ಅಷ್ಟು ಕಾಲವೂ, ಅದಕ್ಕಿಂತ ಹೆಚ್ಚು ಕಾಲವೂ ಕೂಡ ಇರುತ್ತವೆ.

೯೨. ಆ ಶಿಶುಮಾರ ಮೂರ್ತಿಯು ಶಾಶ್ವತನೆಂದು ತಿಳಿಯಬೇಕು. ವಿಭಾಗ ಕ್ರಮವಾಗಿ ಆ ಮೂರ್ತಿಯನ್ನು ಅನೇಕ ದೇವತೆಗಳು ಆಶ್ರಯಿಸಿಕೊಂಡು ಶಾಶ್ವತವಾಗಿರುವರು. ಆ ಶಿಶುಮಾರ ಮೂರ್ತಿಯ ಉತ್ತರ ಕಪೋಲವನ್ನು ಆಶ್ರಯಿಸಿಕೊಂಡು ಉತ್ತಾನಪಾದರಾಯನ ಪುತ್ರನಾದ ಧ್ರುವನಿರುವನು.

೯೩-೯೫. ಯಜ್ಞಪುರುಷನು ಆ ಮೂರ್ತಿಯ ಅಧರೋಷ್ಠದಲ್ಲಿಯೂ, ಯಮಧರ್ಮನು ಶಿರಸ್ಸಿನಲ್ಲಿಯೂ, ನಾರಾಯಣನು ಹೃದಯದಲ್ಲಿಯೂ, ಅಶ್ವಿನೀ ದೇವತೆಗಳು ಪೂರ್ವಪಾದಗಳಲ್ಲಿಯೂ, ವರುಣನು ಪಶ್ಚಿಮಪಾದಗಳಲ್ಲಿಯೂ, ಸೂರ್ಯನು ಊರುವಿನಲ್ಲಿಯೂ, ಸಂವತ್ಸರವು ಲಿಂಗದಲ್ಲಿಯೂ, ಮಿತ್ರನು ಗುದದಲ್ಲಿಯೂ, ಅಗ್ನಿ, ಮಹೇಂದ್ರ, ಮರೀಚಿ, ಕಶ್ಯಪ, ಧ್ರುವ, ತಾರಾಗಣ ಇವು ಪುಚ್ಛದಲ್ಲಿಯೂ ಇರುತ್ತವೆ. ಕಶ್ಯಪ, ಧ್ರುವ, ತಾರಕ, ಶಿಶುಮಾರ ಈ ನಾಲ್ವರೂ ಶಾಶ್ವತವಾಗಿರುತ್ತಾರೆ. ಅಸ್ತಮಾನರಾಗುವುದಿಲ್ಲ.

ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹಾಸ್ತಾರಾಗಣೈಃ ಸಹ ।
ಉನ್ಮುಖಾಭಿಮುಖಾಃ ಸರ್ವೇ ಚಕ್ರೀಭೂತಾ ಶ್ರಿತಾ ದಿವಿ ॥ ೯೬ ॥

ಧ್ರುವೇಣಾಧಿಷ್ಠಿತಾಃ ಸರ್ವೇ ಧ್ರುವಮೇವ ಪ್ರದಕ್ಷಿಣಂ ।
ಪ್ರಯಾಂತೀಹ ವರಂ ಶ್ರೇಷ್ಠಮೇಢೀಭೂತಂ ಧ್ರುವಂ ದಿವಿ ॥ ೯೭ ॥

ಧ್ರುವಾಗ್ನಿಕಶ್ಯಪಾನಾಂ ತು ವರಶ್ಚಾಸೌ ಧ್ರುವಃ ಸ್ಮೃತಃ ।
ಏಕ ಏವ ಭ್ರಮತ್ಯೇಷ ಮೇರುಪರ್ವತಮೂರ್ಧನಿ ॥ ೯೮ ॥

ಜ್ಯೋತಿಷಾಂಚಕ್ರಮೇತದ್ಧಿ ಸದಾ ಕರ್ಷತ್ಯವಾಙ್ಮುಖಃ ।
ಮೇರುಮಾಲೋಕಯನ್ನೇಷ ಪ್ರಯಾತೀಹ ಪ್ರದಕ್ಷಿಣಂ ॥ ೯೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಧ್ರುವಚರ್ಯಾನಾಮ"
ದ್ವಿ ಪಂ ಚಾ ಶೋ ಽ ಧ್ಯಾ ಯಃ

---

೯೬. ಚಂದ್ರಸೂರ್ಯರು, ನಕ್ಷತ್ರ ಗ್ರಹಗಳು, ಸಾಮಾನ್ಯ ತಾರೆಗಳು, ಇವರ ಗಣಗಳು ಒಬ್ಬರಿಗೊಬ್ಬರು ಹಿಂದುಮುಂದಾಗಿಯೂ, ಮಂಡಲಾಕಾರವಾಗಿಯೂ ಆಕಾಶದಲ್ಲಿ ಭ್ರಮಿಸುತ್ತಾರೆ.

೯೭. ಧ್ರುವನನ್ನು ಆಶ್ರಯಿಸಿರುವ ಗ್ರಹಗಳೆಲ್ಲನೂ ಧ್ರುವನನ್ನೇ ಆಶ್ರಯಿಸಿಕೊಂಡು ಪ್ರದಕ್ಷಿಣಾಕಾರವಾಗಿ ತಿರುಗುತ್ತವೆ. ಆ ಗ್ರಹಗಳು ಧ್ರುವನನ್ನು ವೃದ್ಧಿಗೊಳಿಸಿ ಅವನಿಂದಲೇ ತಾವೂ ವೃದ್ಧಿ ಹೊಂದಿ ಆಕಾಶದಲ್ಲಿ ಸಂಚರಿಸುತ್ತವೆ.

೯೮. ಧ್ರುವ, ಅಗ್ನಿ, ಕಶ್ಯಪ ಇವರಲ್ಲಿ ಧ್ರುವನೇ ಶ್ರೇಷ್ಠನೆಂದು ಪ್ರಸಿದ್ಧವಾಗಿದೆ. ಆ ಧ್ರುವನೊಬ್ಬನೇ ಮೇರುಗಿರಿಯ ಶಿಖರದಲ್ಲಿ ಮಂಡಲಾಕಾರವಾಗಿ ತಿರುಗುತ್ತಾನೆ.

೯೯. ಈ ಧ್ರುವರಾಯನು ಮೇರುವಿನ ಮೇಲ್ಭಾಗದಲ್ಲಿದ್ದುಕೊಂಡು ಕೆಳಭಾಗದಲ್ಲಿನ ಜ್ಯೋತಿರ್ಮಂಡಲವನ್ನು ಬಗ್ಗಿನೋಡುತ್ತಾ ಎಳೆದುಕೊಂಡು ಮೇರುವನ್ನು ಪ್ರದಕ್ಷಿಣಾಕಾರವಾಗಿ ಸುತ್ತುತ್ತಾನೆ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಧ್ರುವನ ಸಂಚಾರವೆಂಬ
ಐವತ್ತೆರಡನೆಯ ಅಧ್ಯಾಯವು ಸಮಾಪ್ತವಾದುದು.

# ಐವತ್ತೆರಡನೆಯ ಅಧ್ಯಾಯದ ಸಾರಾಂಶವು

ಸೂರ್ಯನ ರಥವಲ್ಲಿ ದೇವತೆಗಳು, ಮಹರ್ಷಿಗಳು, ಆದಿತ್ಯರು, ಗಂಧರ್ವರು, ಅಪ್ಸರಸಿಯರು, ಸರ್ಪಗಳು, ರಾಕ್ಷಸರು ಇವರು ಕ್ರಮವಾಗಿ ಎರಡೆರಡು ತಿಂಗಳು ವಾಸಿಸುತ್ತಾರೆ. ಹೇಗೆಂದರೆ—ವಸಂತಋತುವಿನಲ್ಲಿ ಬ್ರಹ್ಮ, ಅರ್ಯಮಾ, ಪುಲಸ್ತ್ಯ, ಪುಲಹ, ಪ್ರಜಾಪತಿ, ವಾಸುಕಿ, ತುಂಬುರು, ನಾರದರು, ಅಪ್ಸರಸಿಯರು, ಗ್ರಾಮಾಧಿಕಾರಿ, ಹೇತಿಪ್ರೇತಿಗಳೆಂಬ ರಾಕ್ಷಸರು ಇವರು ಇರುತ್ತಾರೆ. ಗ್ರೀಷ್ಮಋತುವಿನಲ್ಲಿ ಮಿತ್ರ, ವರುಣ, ಅತ್ರಿ, ವಸಿಷ್ಠ, ತಕ್ಷಕ, ರಂಭೆ, ಮೇನಕೆ, ಹಾಹಾಹೂಹೂ ಎಂಬ ಗಂಧರ್ವರು, ಚಿತ್ರರಥ, ಪೌರುಷೇಯ ಇವರು ಸೂರ್ಯನ ಸಂಗಡ ವಾಸಿಸುವರು. ವರ್ಷರ್ತುವಿನಲ್ಲಿ ಇಂದ್ರ, ವಿವಸ್ವಂತ, ಅಂಗರಿಸ, ಭೃಗು, ಏಲಾವರ್ಣ, ಶಂಖಪಾಲ, ವಿಶ್ವಾವಸು, ಉಗ್ರಸೇನ, ನಿಮ್ಲೋಚಾದಿ ರಾಕ್ಷಸರು ಇವರು ವಾಸಿಸುತ್ತಾರೆ. ಶರದೃತುವಿನಲ್ಲಿ ಪೂಷಾಣ, ಭರದ್ವಾಜ, ಗೌತಮ, ವಿಶ್ವಾವಸು, ಸುರಭಿ, ವಿಶ್ವಾಚೀ, ಘೃತಾಚಿಯರೊ, ಐರಾವತ, ಧನಂಜಯ ಇವರೇ ಮೊದಲಾದವರೂ ವಾಸಿಸುವರು. ಹೇಮಂತ ಋತುವಿನಲ್ಲಿ ಕಶ್ಯಪ, ಮಹಾಪದ್ಮ, ಕರ್ಕೋಟಕ, ಚಿತ್ರಸೇನ, ಊರ್ಣಾಯು, ಊರ್ವಶೀ, ತಾರ್ಕ್ಷ್ಯ, ಅರಿಷ್ಟರು ಇವರು ಸೂರ್ಯನ ಸಂಗಡ ಅವನ ರಥವಲ್ಲಿ ವಾಸಮಾಡುವರು. ಶಿಶಿರಋತುವಿನಲ್ಲಿ ವಿಶ್ವಕರ್ಮ, ವಿಷ್ಣು, ಜಮದಗ್ನಿ, ವಿಶ್ವಾಮಿತ್ರ, ಕಂಬಲಾಶ್ವತಕರು, ಧೃತರಾಷ್ಟ್ರ, ರಂಭೆ, ತಿಲೋತ್ತಮೆ ಮೊದಲಾದವರು ವಾಸ ಮಾಡುವರು. ಸ್ಥಾನಾಭಿಮಾನಿಗಳಾದ ದೇವತೆಗಳು ಸೂರ್ಯನನ್ನು ಹೊಗಳುವರು. ಗಂಧರ್ವರು ಗಾನವನ್ನು ಮಾಡುವರು. ಅಪ್ಸರಸಿಯರು ನರ್ತನೆಯನ್ನು ಮಾಡುವರು. ಹೀಗೆ ದೇವಷ್ಯಾದಿಗಳು ಸೂರ್ಯದೇವನನ್ನು ಸೇವಿಸುವರು. ಇದನ್ನರಿತವರು ಸರ್ವಪಾಪದಿಂದಲೂ ಮುಕ್ತರಾಗುವರು. ದೇವತೆಗಳು ಪಾನಮಾಡಿದ ಚಂದ್ರ ಕಲೆಗಳು ಸೂರ್ಯನಿಂದ ಪೂರ್ಣವಾಗುವುವು. ಹೀಗೆ ಸೂರ್ಯನು ತನ್ನ ಏಕಚಕ್ರ ದಿವ್ಯಾಶ್ವಗಳಿರುವ ತನ್ನ ರಥದಿಂದ ಹಗಲೂ ರಾತ್ರಿ ಬಿಡುವಿಲ್ಲದೇ ಸಂಚರಿಸುವನು. ಚಂದ್ರನೂ ಕೂಡ ದಶಾಶ್ವವಿರುವ ರಥದಿಂದ ಸಂಚರಿಸುವನು. ಶುಕ್ಲಪಕ್ಷದಲ್ಲಿ ಕ್ಷೀಣವಾದ ಚಂದ್ರಕಲೆಗಳು ಶುಕ್ಲಪಕ್ಷದಲ್ಲಿ ವೃದ್ಧಿಯಾಗುವುವು. ಚಂದ್ರನ ವೃದ್ಧಿಕ್ಷಯ

ಗಳು ಸೂರ್ಯಾಧೀನಗಳಾಗಿವೆ. ಇವುಗಳಂತೆಯೇ ಶನೈಶ್ಚರ, ಬುಧ, ಶುಕ್ರ, ಬೃಹಸ್ಪತಿ, ರಾಹು, ಕೇತುಗಳ ರಥಗಳೂ, ಕಾಂಚನಮಯಗಳೂ, ದಿವ್ಯಾಶ್ವಯುಕ್ತಗಳೂ, ಸೂರ್ಯಾಧೀನಗಳೂ ಆಗಿವೆ. ಸೂರ್ಯಾದಿ ಗ್ರಹಗಳ ರಥಗಳು ವಾತರಶ್ಮಿಗಳಿಂದ ಬದ್ಧವಾಗಿ ಧ್ರುವಾಧೀನವಾಗಿವೆ. ಗ್ರಹಗಳ ಸಂಚಾರವು ಧ್ರುವಾಧೀನವಾಗಿದೆ. ದೋಣಿಗಳು ಜಲಾಧೀನವಾಗಿ ನದಿಗಳಲ್ಲಿ ಸಂಚರಿಸುವಂತೆ ಗ್ರಹಗಳ ರಥಗಳು ವಾತರಶ್ಮಿಗಳಿಗೆ ಅಧೀನವಾಗಿ ಆಕಾಶದಲ್ಲಿ ಸಂಚರಿಸುತ್ತವೆ. ಗ್ರಹಗತಿಗಳು ಧ್ರುವಾಧೀನಗಳು. ಆ ಧ್ರುವನೂ ಕೂಡ ವ್ಯಾಪ್ತನೂ ಸರ್ವಶಕ್ತನೂ ಆದ ಶ್ರೀಹರಿಯ ಅವತಾರನಾದ ಶಿಶುಮಾರ ಮೂರ್ತಿಯ ಪುಚ್ಛವನ್ನವಲಂಬಿಸಿ ಆಕಾಶದಲ್ಲಿರುವನು. ಮಿತ್ರಾವರುಣರು ಇಂದ್ರಾದಿ ದೇವತೆಗಳು, ಮರೀಚ್ಯಾದಿ ಋಷಿಗಳೂ ಕೂಡ ಶಿಶುಮಾರ ಮೂರ್ತಿಯ ವಶದಲ್ಲಿರುವರು. ಹೀಗೆ ಸರ್ವಾಶ್ರಿತನಾದ ಧ್ರುವನು ಮೇರುಗಿರಿಯನ್ನು ಪ್ರದಕ್ಷಿಣೆಯಾಗಿ ಸುತ್ತುವನು. ಈ ವಿಷಯಗಳು ವರ್ಣಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ತ್ರಿಪಂಚಾಶೋಽಧ್ಯಾಯಃ

**॥ ಶಾಂಶಪಾಯನ ಉವಾಚ ॥**

**ಏತಚ್ಛ್ರುತ್ವಾ ತು ಮುನಯಃ ಪುನಸ್ತೇ ಸಂಶಯಾನ್ವಿತಾಃ ।**
**ಪಪ್ರಚ್ಛುರುತ್ತರಂ ಭೂಯಸ್ತದಾ ತೇ ಲೋಮಹರ್ಷಣಂ ॥ ೧ ॥**

**॥ ಋಷಯ ಊಚುಃ ॥**

**ಯದೇತದುಕ್ತಂ ಭವತಾ ಗೃಹಾಣ್ಯೇತಾನಿ ವಿಶ್ರುತಂ ।**
**ಕಥಂ ದೇವಗೃಹಾಣಿ ಸ್ಯುಃ ಕಥಂ ಜ್ಯೋತೀಂಷಿ ವರ್ಣಯ ॥ ೨ ॥**

---

## ಐವತ್ತಮೂರನೆಯ ಅಧ್ಯಾಯವು

೧. ಶಾಂಶಪಾಯನ ಮುನಿಯು ಹೇಳಿದನು :—ನೈಮಿಷಾರಣ್ಯವಾಸಿಗಳಾದ ಸಮಸ್ತ ಮುನಿಗಳು ಸೂತಮುನಿಯು ಹೇಳಿದ ಈ ಮಾತನ್ನು ಕೇಳಿ ಸಂಶಯಯುಕ್ತರಾಗಿ ಪುನಃ ಸೂತರನ್ನು ಕುರಿತು ಇಂತೆಂದರು.

೨. ಮುನಿಗಳು ಹೇಳಿದರು:—ಎಲೈ ಸೂತಮುನಿಯೇ, ನೀನು ಹೇಳಿದ ದೇವತೆಗಳು ಮತ್ತು ಜ್ಯೋತಿರ್ಗಣಗಳು ಇವುಗಳ ಆಲಯಗಳ ವಿಷಯಗಳನ್ನು ಕೇಳಿ ನಮಗೆ ಬಹಳ ಆನಂದವಾಗಿದೆ.

ಏತತ್ಸರ್ವಂ ಸಮಾಚಕ್ಷ್ವ ಜ್ಯೋತಿಷಾಂ ಚೈವ ನಿಶ್ಚಯಂ ।
ಶ್ರುತ್ವಾ ತು ವಚನಂ ತೇಷಾಂ ತದಾ ಸೂತಃ ಸಮಾಹಿತಃ ॥ ೩ ॥

ಅಸ್ಮಿನ್ನರ್ಥೇ ಮಹಾಪ್ರಾಜ್ಞೈರ್ಯದುಕ್ತಂ ಜ್ಞಾನಬುದ್ಧಿಭಿಃ ।
ತದ್ವೋಽಹಂ ಸಂಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಭವಂ ॥
ಯಥಾ ದೇವಗೃಹಾಣೀಹ ಸೂರ್ಯಾಚಂದ್ರಮಸೋರ್ಗೃಹಂ ॥ ೪ ॥

ಅತಃಪರಂ ತ್ರಿವಿಧಾಗ್ನೇರ್ವಕ್ಷ್ಯೇಽಹಂ ತು ಸಮುದ್ಭವಂ ।
ದಿವ್ಯಸ್ಯ ಭೌತಿಕಸ್ಯಾಗ್ನೇರಥಾಗ್ನೇಃ ಪಾರ್ಥಿವಸ್ಯ ಚ ॥ ೫ ॥

ವ್ಯುಷ್ಟಾಯಾಂ ತು ರಜನ್ಯಾಂ ವೈ ಬ್ರಹ್ಮಣೋ ವ್ಯಕ್ತಜನ್ಮನಃ ।
ಅವ್ಯಾಕೃತಮಿದಂ ತ್ವಾಸೀನ್ನೈಶೇನ ತಮಸಾವೃತಂ ॥ ೬ ॥

---

೩-೪. ಆದರೆ ದೇವಾಲಯಗಳು, ಜ್ಯೋತಿರ್ಮಂಡಲಗಳು ಹೇಗೆ ಎಲ್ಲಿರುತ್ತವೆ. ಇವುಗಳ ವಿಷಯದಲ್ಲಿ ಇನ್ನೂ ಸಂದೇಹವೇ ವಿಶೇಷವಾಗಿರುತ್ತವೆ. ಆದುದರಿಂದ ದೇವಗೃಹ ಮತ್ತು ಜ್ಯೋತಿರ್ಗಣಗಳ ವಿಚಾರವಾಗಿ ನಿಸ್ಸಂದೇಹವಾಗುವಂತೆ ವರ್ಣಿಸಬೇಕೆಂದು ಬೇಡಿದರು. ಆಗ ಸೂತಪುರಾಣಿಕನು ಆ ಮುನಿಗಳ ಪ್ರಶ್ನೆಯನ್ನು ಕೇಳಿ ಸಮಾಧಾನಚಿತ್ತದಿಂದ ಹೇಳಲುಪಕ್ರಮಿಸಿದನು. ಎಲೈ ಮುನಿಗಳೇ, ಈ ವಿಷಯದಲ್ಲಿ ಜ್ಞಾನವೃದ್ಧರೂ, ಮಹಾಪ್ರಾಜ್ಞರೂ ಆದ ಪ್ರಾಚೀನರು ಏನನ್ನು ಹೇಳಿರುವರೋ ಅಂತಹ ಸೂರ್ಯಚಂದ್ರರ ಸೃಷ್ಟಿ, ದೇವಗೃಹಗಣ ನಿರ್ಮಾಣ ಮತ್ತು ಸೂರ್ಯ ಚಂದ್ರರ ಭವನಗಳು ಈ ವಿಷಯಗಳನ್ನು ತಿಳಿಸುವೆನು ಕೇಳಿರೆಂದನು.

೫. ಎಲೈ ಮುನಿಗಳೇ, ಈಗ ನಿಮಗಾಗಿ ಮೂರು ವಿಧಗಳಾದ ಅಗ್ನಿಗಳ ಸೃಷ್ಟಿಕ್ರಮವನ್ನು ತಿಳಿಸುವೆನು ಕೇಳಿರಿ. ಆ ಅಗ್ನಿಗಳು ದಿವ್ಯಾಗ್ನಿ, ಭೌತಿಕಾಗ್ನಿ, ಪಾರ್ಥಿವಾಗ್ನಿ ಎಂಬುದಾಗಿ ಮೂರು ವಿಧಗಳಾಗಿವೆ.

೬. ಅವ್ಯಕ್ತಜನ್ಮನಾದ ಬ್ರಹ್ಮದೇವನ ಒಂದು ರಾತ್ರಿಯು ಕಳೆಯಲಾಗಿ ಪ್ರಾತಃಕಾಲವಾಗುವುದು. ಆಗಲೂ ಸಹ ರಾತ್ರಿಯ ಅಂಧಕಾರವು ಅಸ್ಪಷ್ಟವಾಗಿ ಅವ್ಯಾಕೃತಾಕಾಶಮಾತ್ರವಿತ್ತು. ಸರ್ವಜಗತ್ತು ಅಂಧಕಾರಮಯವಾಗಿತ್ತು.

ಚತುರ್ಭೂತಾವಶಿಷ್ಟೇಽಸ್ಮಿನ್ ಪಾರ್ಥಿವಃ ಸ್ಮೋಽಗ್ನಿರುಚ್ಯತೇ ।
ಯಶ್ಚಾದೌ ತಪತೇ ಸೂರ್ಯೋ ಶುಚಿರಗ್ನಿಸ್ತು ಸ ಸ್ಮೃತಃ ॥ ೭ ॥

ವೈದ್ಯುತಾಖ್ಯಾಸ್ತು ವಿಜ್ಞೇಯಃ ತೇಷಾಂ ವಕ್ಷ್ಯೇಽಥ ಲಕ್ಷಣಂ ।
ವೈದ್ಯುತೋ ಜಾಠರಃ ಸೌರೋ ಹ್ಯಪಾಂ ಗರ್ಭಾಸ್ತ್ರಯೋಽಗ್ನಯಃ ॥
ತಸ್ಮಾದಪಃ ಪಿಬನ್ ಸೂರ್ಯೋ ಗೋಭಿರ್ದೀಪ್ಯತ್ಯಸೌ ದಿವಿ ॥ ೮ ॥

ವೈದ್ಯುತೇನ ಸಮಾವಿಷ್ಟೋ ವಾಕ್ಷೋರ್ ನಾದ್ಭಿಃ ಪ್ರಶಾಮ್ಯತಿ ।
ಮಾನವಾನಾಂ ಚ ಕುಕ್ಷಿಸ್ಥೋ ನಾದ್ಭಿಃ ಶಾಮ್ಯತಿ ಪಾವಕಃ ॥ ೯ ॥

ಅರ್ಚಿಷ್ಮಾನ್ ಪರಮಃ ಸೋಽಗ್ನಿಃ ಪ್ರಭವೋ ಜಾಠರಃ ಸ್ಮೃತಃ ।
ಯಶ್ಚಾಯಂ ಮಂಡಲೀ ಶುಕ್ಲೋ ನಿರೂಷ್ಮಾ ಸಂಪ್ರಕಾಶತೇ ॥ ೧೦ ॥

---

೭. ಅನಂತರ ಚತುರ್ಭೂತಗಳಿರುವ ಈ ಜಗತ್ತಿನಲ್ಲಿ ಯಾವ ಅಗ್ನಿಯು ಇರುವುದೋ ಅದಕ್ಕೆ ಪಾರ್ಥಿವಾಗ್ನಿಯೆಂದು ನಾಮವು ಬಂದಿದೆ. ಯಾವಾಗ ಸೂರ್ಯನು ಸೃಷ್ಟಿಯ ಆದಿಯಲ್ಲಿ ಜಾಜ್ವಲ್ಯಮಾನನಾಗಿರುವನೋ ಆ ಸೂರ್ಯ ಸಂಬಂಧಿಯಾದ ಅಗ್ನಿಗೆ ಶುಚಿಯೆಂಬುದಾಗಿ ನಾಮವು ಪ್ರಾಪ್ತವಾಗಿದೆ.

೮. ವಿದ್ಯುತ್ಸಂಬಂಧವಾದ ಅಗ್ನಿಗೆ ವೈದ್ಯುತಾಗ್ನಿಯೆಂದು ನಾಮವು ಪ್ರಾಪ್ತವಾಗಿದೆ. ಈಗ ಆ ಮೂರು ಅಗ್ನಿಗಳಿಗೆ ಲಕ್ಷಣಗಳನ್ನು ಹೇಳುತ್ತೇನೆ ಕೇಳಿರಿ. ವೈದ್ಯುತ, ಜಾಠರ, ಸೌರವೆಂಬ ಮೂರು ವಿಧಗಳಾದ ಅಗ್ನಿಗಳು ಜಲದಿಂದ ಉತ್ಪನ್ನವಾಗಿವೆ. ಆದುದರಿಂದ ಜಲವನ್ನು ಪಾನಮಾಡಿದ ಸೂರ್ಯನು ಕಿರಣಗಳಿಂದ ಆಕಾಶದಲ್ಲಿ ಜಾಜ್ವಲ್ಯಮಾನವಾಗಿ ಹೊಳೆಯುವನು.

೯. ಆದುದರಿಂದ ವಿದ್ಯುತ್ಸಂಬಂಧಿಯಾದ ಅಗ್ನಿಯಿಂದ ಸಹಿತವಾದ ನಕ್ಷತ್ರ ಗತವಾದ ಅಗ್ನಿಯೂ, ಮನುಷ್ಯರ ನಾಭಿಯಲ್ಲಿರತಕ್ಕ ಜಾಠರಾಗ್ನಿಯೂ ಕೂಡ ಜಲದಿಂದ ಶಾಂತವಾಗುವುದಿಲ್ಲ.

೧೦. ಕಾಂತಿಯುಕ್ತವೂ ಶ್ರೇಷ್ಠವೂ ಆದ ಜಾಠರಾಗ್ನಿಯು ಮಂಡಲಾಕಾರ ವಾಗಿಯೂ, ಶುಭ್ರವಾಗಿಯೂ, ತಾಪರಹಿತವಾಗಿಯೂ ಪ್ರಕಾಶಿಸುವುದು.

ಪ್ರಭಾ ಹಿ ಸೌರೀ ಪಾದೇನ ಹ್ಯಸ್ತಂ ಯಾತಿ ದಿವಾಕರೇ।
ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ ಪ್ರಕಾಶತೇ ॥ ೧೧ ॥

ಉದ್ಯಂತಂ ಚ ಪುನಃ ಸೂರ್ಯಮೌಷ್ಣ್ಯಮಾಗ್ನೇಯಮಾವಿಶತ್ ।
ಪಾದೇನ ಪಾರ್ಥಿವಸ್ಯಾಗ್ನೇಸ್ತಸ್ಮಾದಗ್ನಿಸ್ತಪತ್ಯಸೌ ॥ ೧೨ ॥

ಪ್ರಕಾಶಶ್ಚ ತಥೌಷ್ಣ್ಯಂ ಚ ಸೌರಾಗ್ನೇ ಯೇ ತು ತೇಜಸೀ ।
ಪರಸ್ಪರಾನುಪ್ರವೇಶಾದಾಪ್ಯಾಯೇತೇ ದಿವಾನಿಶಂ ॥ ೧೩ ॥

ಉತ್ತರೇ ಚೈವ ಭೂಮ್ಯಾರ್ದ್ಧೇ ತಸ್ಮಾದಸ್ಮಿಂಶ್ಚ ದಕ್ಷಿಣೇ ।
ಉತ್ತಿಷ್ಠತಿ ಪುನಃ ಸೂರ್ಯೇ ರಾತ್ರಿರಾವಿಶತೇ ಹ್ಯಪಃ ॥
ತಸ್ಮಾತ್ತಾಮ್ರಾ ಭವಂತ್ಯಾಪೋ ದಿವಾರಾತ್ರಿಪ್ರವೇಶನಾತ್ ॥ ೧೪ ॥

---

೧೧. ಸೂರ್ಯನು ಅಸ್ತಮಯವಾಗಲು ಅವನ ಪ್ರಭೆಯ ನಾಲ್ಕರಲ್ಲೊಂದು ಭಾಗವು, ಒಂದು ಪಾದವು ರಾತ್ರಿಯ ಕಾಲದಲ್ಲಿ ಅಗ್ನಿಯನ್ನು ಪ್ರವೇಶಿಸುತ್ತದೆ. ಆದುದರಿಂದ ದೂರದಿಂದಲೇ ಪ್ರಕಾಶಿಸುತ್ತದೆ

೧೨. ಪುನಃ ಸೂರ್ಯನು ಉದಯಿಸುವಾಗ ಅಗ್ನಿಯಲ್ಲಿದ್ದ ಉಷ್ಣತೆಯು ಪುನಃ ಸೂರ್ಯನನ್ನೆ ಪ್ರವೇಶಿಸುವುದು. ಹೀಗೆ ಒಂದುಪಾದರೂಪವಾದ ಆ ಪಾರ್ಥಿವಾಗ್ನಿಯು ಸೂರ್ಯನನ್ನು ಹೊಂದಿ ಹೊಳೆಯುವುದು.

೧೩. ಸೌರಾಗ್ನಿ ಮತ್ತು ಪಾರ್ಥಿವಾಗ್ನಿಗಳ ಪ್ರಕಾಶಔಷ್ಣ್ಯಗಳು ಪರಸ್ಪರ ಸಂಬಂಧದಿಂದ ಒಂದಕ್ಕೊಂದು ಉತ್ತೇಜಕವಾಗಿ ಹಗಲೂ ರಾತ್ರಿಯಲ್ಲಿಯೂ ಹೊಳೆಯುವುವು.

೧೪. ಭೂಗೋಳದ ಉತ್ತರಾರ್ಧದಲ್ಲಿ ಸೂರ್ಯನು ಉದಯಿಸುವಾಗ ದಕ್ಷಿಣಾರ್ಧಗೋಳದಲ್ಲಿ ರಾತ್ರಿಯಾಗುವುದು. ಆಗ ರಾತ್ರಿಯು ಜಲವನ್ನು ಪ್ರವೇಶಿಸುವುದು. ಹಗಲು ರಾತ್ರಿಯನ್ನು ಪ್ರವೇಶಮಾಡಿರುವುದರಿಂದ ಜಲವು ಕೆಂಪಗಾಗುವುದು.

ಅಸ್ತಂ ಯಾತಿ ಪುನಃ ಸೂರ್ಯೇ ಅಹರ್ವೈ ಪ್ರವಿಶತ್ಯಪಃ ।
ತಸ್ಮಾನ್ನಕ್ತಂ ಪುನಃ ಶುಕ್ಲಾ ಆಪೋ ವಿಶ್ಯಂತಿ ಭಾಸ್ಕರೇ ॥ ೧೫ ॥

ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ।
ಉದಯಾಸ್ತಮಯೇ ನಿತ್ಯಮಹೋರಾತ್ರಂ ವಿಶತ್ಯಪಃ ॥ ೧೬ ॥

ಯಶ್ಚಾಸೌ ತಪತೇ ಸೂರ್ಯೇ ಪಿಬನ್ನಂಭೋ ಗಭಸ್ತಿಭಿಃ ।
ಪಾರ್ಥಿವೋ ಹಿ ವಿಮಿಶ್ರೋಽಸೌ ದಿವ್ಯಃ ಶುಚಿರಿತಿ ಸ್ಮೃತಃ ॥ ೧೭ ॥

ಸಹಸ್ರಪಾದಃ ಸೋಽಗ್ನಿಸ್ತು ವೃತ್ತಃ ಕುಂಭನಿಭಶ್ಶುಚಿಃ ।
ಆದತ್ತೇ ತತ್ತು ರಶ್ಮೀನಾಂ ಸಹಸ್ರೇಣ ಸಮಂತತಃ ॥ ೧೮ ॥

---

೧೫. ಹಾಗೆಯೇ ಸೂರ್ಯನು ಅಸ್ತವಾಗಲು ಅಹಸ್ಸು ರಾತ್ರಿಯನ್ನು ಪ್ರವೇಶಿಸುವುದು. ಆದುದರಿಂದ ರಾತ್ರಿಯಕಾಲದಲ್ಲಿ ಜಲವು ಶುಭ್ರವಾಗಿರುವುದು. ಜಲವು ಸೂರ್ಯಸಂಬಂಧದಿಂದ ಬಿಳುಪಾಗುವುದು.

೧೬. ಈ ಕ್ರಮದಿಂದ ಭೂಗೋಳದ ದಕ್ಷಿಣಾರ್ಧ ಉತ್ತರಾರ್ಧಗೋಳಗಳಲ್ಲಿ ಉದಯಾಸ್ತಮಯವಾಗಲು ಅಹೋರಾತ್ರಿಗಳು ಜಲವನ್ನು ಪ್ರವೇಶಿಸುವುದು. ಆದುದರಿಂದ ಜಲವು ಹಗಲು ಬೆಳ್ಳಗೂ, ಸಂಜೆಯಲ್ಲಿ ಕೆಂಪಗೂ ಕಾಣಿಸುವುದು.

೧೭. ಸೂರ್ಯನು ತನ್ನ ಕಿರಣಗಳಿಂದ ಭೂಮಿಯಲ್ಲಿರುವ ಜಲವನ್ನು ಸ್ವೀಕರಿಸಿ ಪ್ರಕಾಶಿಸುತ್ತಾನೆಯೋ, ಆ ಪ್ರಕಾಶವು ಪಾರ್ಥಿವವೂ, ದಿವ್ಯವೂ ಆದ ಶುಚಿ ಎಂಬ ಅಗ್ನಿಯ ಸಂಬಂಧದಿಂದಲೇ ಉಂಟಾಗಿದೆ.

೧೮. ಸಹಸ್ರಕಿರಣಗಳುಳ್ಳ ಕುಂಭದಂತೆ ದುಂಡಾದ ಶುಚಿನಾಮಕವಾದ ಯಾವ ಪಾರ್ಥಿವಾಗ್ನಿಯು ಇರುತ್ತದೆಯೋ ಅದರ ಸಂಪರ್ಕದಿಂದ ಸೂರ್ಯನು ಸಹಸ್ರರಶ್ಮಿಗಳಿಂದಲೂ ಜಲವನ್ನು ಸ್ವೀಕರಿಸುವನು.

ನಾದೇಯಿಶ್ಚೈವ ಸಾಮುದ್ರೀಃ ಕೌಪ್ಯಾಶ್ಚೈವ ಸಧಾನ್ವನೀಃ ।
ಸ್ಥಾವರಾ ಜಂಗಮಾಶ್ಚೈವ ಯಶ್ಚ ಸೂರ್ಯೋ ಹಿರಣ್ಮಯಃ ॥
ತಸ್ಯ ರಶ್ಮಿಸಹಸ್ರಂತು ವರ್ಷಸಶೀತೋಷ್ಣನಿಃಸ್ರವಂ ॥ ೧೯ ॥

ತಾಸಾಂ ಚತುಃಶತಾ ನಾಡ್ಯೋ ವರ್ಷಂತಿ ಚಿತ್ರಮೂರ್ತಯಃ ।
ವಂದನಾಶ್ಚೈವ ವಂದ್ಯಾಶ್ಚ ಋತನಾ ನೂತನಾಸ್ತಥಾ ॥
ಅಮೃತಾ ನಾಮತಃ ಸರ್ವಾ ರಶ್ಮಯೋ ವೃಷ್ಟಿಸರ್ಜನಾಃ ॥ ೨೦ ॥

ಹಿಮವಾಹಾಶ್ಚ ತಾಭ್ಯೋಽನ್ಯಾ ರಶ್ಮಯಸ್ತ್ರಿಶತಾಃ ಪುನಃ ।
ದೃಶ್ಯಾ ಮೇಧ್ಯಾಶ್ಚ ವಾಹ್ಯಾಶ್ಚ ಹ್ರಾದಿನ್ಯೋ ಹಿಮಸರ್ಜನಾಃ ॥ ೨೧ ॥

ಚಂದ್ರಾಸ್ತಾ ನಾಮತಃ ಸರ್ವಾಃ ಪೀತಾಭಾಸ್ತು ಗಭಸ್ತಯಃ ।
ಶುಕ್ಲಾಶ್ಚ ಕುಕುಭಶ್ಚೈವ ಗಾವೋ ವಿಶ್ವಭೃತಸ್ತಥಾ ॥ ೨೨ ॥

---

೧೯. ಸುವರ್ಣಮಯನಾದ ಸೂರ್ಯನು ನದಿ, ಸಮುದ್ರ, ವಾಪಿ, ಕೂಪ, ತಟಾಕಾದಿಸಂಬಂಧಿಯೂ, ಸ್ಥಾವರಜಂಗಮಗತವೂ ಆದ ಜಲವನ್ನು ತನ್ನ ಸಹಸ್ರಾರು ರಶ್ಮಿಗಳಿಂದ ಸ್ವೀಕರಿಸಿ ವೃಷ್ಟಿ, ಶೀತ, ಉಷ್ಣ ಇವುಗಳನ್ನು ಕರೆಸುವನು.

೨೦. ಅವುಗಳಲ್ಲಿ ನೂರನಾಲ್ಕು ನಾಡಿಗಳೂ ವಿಚಿತ್ರವಾಗಿರುವುವು. ಮತ್ತು ಮಳೆಯನ್ನು ಸುರಿಸುತ್ತವೆ. ಅವುಗಳಲ್ಲಿ ಮುಖ್ಯವಾಗಿ ವಂದನಾ, ವಂದ್ಯಾ, ಋತನಾ, ನೂತನಾ, ಅಮೃತಾನಾಮಕಗಳಾದ ರಶ್ಮಿಗಳು ಮಳೆಯನ್ನು ಸುರಿಸುವ ಕಾರಣ ಗಳಾಗಿವೆ.

೨೧. ಈ ಮೇಲೆ ನಿರೂಪಿಸಿರುವ ರಶ್ಮಿಗಿಂತಲೂ ಭಿನ್ನವೂ, ಮುನ್ನೂರು ಸಂಖ್ಯಾಕಗಳೂ, ದೃಶ್ಯಾ, ಮೇಧ್ಯಾ, ವಾಹ್ಯಾ, ಹ್ರಾದಿನೀ ಇವೇ ಮೊದಲಾದವೂ ಆದ ರಶ್ಮಿಗಳು ಹಿಮಜನಕವಾಗಿವೆ.

೨೨. ಚಂದ್ರನಾಮಕಗಳೂ, ಪೀತಕಾಂತಿಗಳೂ ಆದ ಸಮಸ್ತ ಕಿರಣಗಳೂ, ಹಿಮಜನಕಗಳೂ, ಶುಕ್ಲಗಳೂ, ಕಕುಭಗಳೂ ಆದ ಕಿರಣಗಳು ಜಗತ್ಪ್ರಕಾಶಕಗಳಾಗಿವೆ.

ಶುಕ್ಲಾ ಸ್ತಾ ನಾಮತಃ ಸರ್ವಾಸ್ತ್ರಿಶತಾ ಘರ್ಮಸರ್ಜನಾಃ ।
ಸಮಂ ಬಿಭರ್ತಿ ತಾಭಿಸ್ತು ಮನುಷ್ಯಪಿತೃದೇವತಾಃ ॥ ೨೩ ॥

ಮನುಷ್ಯಾನೌಷಧೇನೇಹ ಸ್ವಧಯಾ ಚ ಪಿತೄನಪಿ ।
ಅಮೃತೇನ ಸುರಾನ್ ಸರ್ವಾಂಸ್ತ್ರೀಂಸ್ತ್ರಿಭಿಸ್ತರ್ಪಯತ್ಯಸೌ ॥ ೨೪ ॥

ವಸಂತೇ ಚೈವ ಗ್ರೀಷ್ಮೇ ಚ ಸ ತೈಃ ಸುತರಪತೇ ತ್ರಿಭಿಃ ।
ವರ್ಷಾಸ್ವಥೋ ಶರದಿ ಚ ಚತುರ್ಭಿಃ ಸಂಪ್ರವರ್ಷತಿ ॥ ೨೫ ॥

ಹೇಮಂತೇ ಶಿಶಿರೇ ಚೈವ ಹಿಮಂ ಸ ಸೃಜತೇ ತ್ರಿಭಿಃ ।
ಓಷಧೀಷು ಬಲಂ ಧತ್ತೇ ಸ್ವಧಯಾ ಚ ಪಿತೄನಪಿ ॥
ಸೂರ್ಯೋಽಮರತ್ವಮಮೃತತ್ರಯಂ ತ್ರಿಷು ನಿಯಚ್ಛತಿ ॥ ೨೬ ॥

---

೨೩. ಶುಕ್ಲಾ ನಾಮಕಗಳಾದ ಮುನ್ನೂರು ಕಿರಣಗಳೆಲ್ಲವೂ ತಾಪಜನಕಗಳಾಗಿವೆ. ಹೀಗೆ ಸೂರ್ಯದೇವನು ತನ್ನ ನಾನಾವಿಧಗಳಾದ ಸಹಸ್ರಾರು ಕಿರಣಗಳಿಂದ ದೇವತೆ, ಪಿತೃ, ಮನುಷ್ಯ ಇವರೇ ಮೊದಲಾದ ಸರ್ವರನ್ನೂ ಸಮನಾಗಿ ರಕ್ಷಿಸುತ್ತಾನೆ.

೨೪. ಇಂತಹ ಸೂರ್ಯದೇವನು ಔಷಧವೇ ಮೊದಲಾದವುಗಳಿಂದ ಮನುಷ್ಯರನ್ನೂ, ಸ್ವಧಾಕಾರಗಳಿಂದ ಪಿತೃಗಳನ್ನೂ, ಅಮೃತದಿಂದ ದೇವತೆಗಳನ್ನೂ ಹೀಗೆ ಮೂರು ವಸ್ತುಗಳಿಂದ ಮನುಷ್ಯರು, ಪಿತೃಗಳು, ದೇವತೆಗಳು ಇವರನ್ನು ತೃಪ್ತಿಪಡಿಸುತ್ತಾನೆ.

೨೫-೨೬. ಸೂರ್ಯನು ವಸಂತ, ಗ್ರೀಷ್ಮ ಋತುಗಳ ಮೂರು ತಿಂಗಳಲ್ಲಿ ಅಂದರೆ ಚೈತ್ರ ವೈಶಾಖ, ಜ್ಯೇಷ್ಠಮಾಸಗಳಲ್ಲಿ ಕಿರಣಗಳಿಂದ ತಾಪಗೊಳಿಸುತ್ತಾನೆ. ತರುವಾಯ ವರ್ಷಋತು, ಶರದೃತುಗಳ ನಾಲ್ಕು ತಿಂಗಳುಗಳಲ್ಲಿ ಮಳೆಯನ್ನು ಸುರಿಸುವನು. ಹೇಮಂತ, ಶಿಶಿರ ಋತುಗಳಲ್ಲಿ ಹಿಮವನ್ನು ಕರೆಯುವನು. ಹೀಗೆ ಮೂರು ಧರ್ಮಗಳಿಂದ ಮೂರುವಿಧ ಪ್ರಜೆಗಳಿಗೆ ತೃಪ್ತಿಯನ್ನುಂಟುಮಾಡುವನು. ಹೀಗೆ ಸೂರ್ಯನು ಓಷಧಿಗಳಲ್ಲಿ ಶಕ್ತಿಯನ್ನೂ, ಸ್ವಧೆಯಿಂದ ಪಿತೃಗಳಿಗೆ ಆನಂದವನ್ನೂ, ದೇವತೆಗಳಿಗೆ ಅಮೃತವನ್ನೂ ಕೊಟ್ಟು, ಮೂರು ರೀತಿಯಲ್ಲಿ ಮೂರು ಜನಗಳಿಗೆ ತೃಪ್ತಿಯನ್ನುಂಟುಮಾಡುವನು.

ಏವಂ ರಶ್ಮಿಸಹಸ್ರಂ ತತ್ ಸೌರಂ ಲೋಕಾರ್ಥಸಾಧಕಂ ।
ಭಿದ್ಯತೇ ಋತುಮಾಸಾದ್ಯ ಜಲಶೀತೋಷ್ಣನಿಃಸ್ರವಂ ॥ ೨೭ ॥

ಇತ್ಯೇತನ್ಮಂಡಲಂ ಶುಕ್ಲಂ ಭಾಸ್ವರಂ ಸೂರ್ಯಸಂಜ್ಞಿತಂ ।
ನಕ್ಷತ್ರಗ್ರಹಸೋಮಾನಾಂ ಪ್ರತಿಷ್ಠಾಯೋನಿರೇವ ಚ ॥
ಋಕ್ಷಚಂದ್ರಗ್ರಹಾಃ ಸರ್ವೇ ವಿಜ್ಞೇಯಾಃ ಸೂರ್ಯಸಂಭವಾಃ ॥ ೨೮ ॥

ನಕ್ಷತ್ರಾಧಿಪತಿಃ ಸೋಮೋ ಗ್ರಹರಾಜೋ ದಿವಾಕರಃ ।
ಶೇಷಾಃ ಪಂಚಗ್ರಹಾ ಜ್ಞೇಯಾ ಈಶ್ವರಾಃ ಕಾಮರೂಪಿಣಃ ॥ ೨೯ ॥

ಪಠ್ಯತೇ ಚಾಗ್ನಿರಾದಿತ್ಯ ಔದಕಶ್ಚಂದ್ರಮಾಃ ಸ್ಮೃತಃ ।
ಶೇಷಾಣಾಂ ಪ್ರಕೃತಿಂ ಸಮ್ಯಗ್ವರ್ಣ್ಯಮಾನಾಃ ನಿಬೋಧತ ॥ ೩೦ ॥

---

೨೭-೨೮. ಹೀಗೆ ಸೂರ್ಯನ ಸಹಸ್ರ ಕಿರಣಗಳು ಮೂರು ಲೋಕಗಳ ಹಿತಗಳಿಗೂ ಸಾಧಕಗಳಾಗಿವೆ. ಸೂರ್ಯನು ಋತುಗಳ ಭೇದದಿಂದ ಮಳೆ, ಹಿಮ, ತಾಪ (ಶೀತೋಷ್ಣ) ಇವುಗಳನ್ನು ಉಂಟುಮಾಡುತ್ತಾನೆ. ಹೀಗೆ ಶುಭ್ರವೂ ಪ್ರಕಾಶವೂ ಆದ ಸೂರ್ಯಮಂಡಲವು ನಕ್ಷತ್ರಗಳು, ತಾರೆಗಳು, ಗ್ರಹಗಳು ಇವುಗಳ ಸ್ಥಿತಿಗಳಿಗೆ ಸಾಧಕವಾಗಿದೆ. ಹೀಗೆ ನಕ್ಷತ್ರ, ಗ್ರಹ, ಚಂದ್ರಾದಿಗಳಿಗೆ ಸೂರ್ಯನು ಕಾರಣಕರ್ತನಾಗಿರುವನು.

೨೯. ಚಂದ್ರನು ನಕ್ಷತ್ರಗಳಿಗೆ ಅಧಿಪತಿಯು. ದ್ವಿಜರಾಜನೆಂದು ಕರೆಯಲ್ಪಡುತ್ತಾನೆ. ಸೂರ್ಯನು ಗ್ರಹಾಧಿಪತಿಯಾಗಿರುವನು. ಉಳಿದ ಪಂಚಗ್ರಹಗಳು ಸ್ವೇಚ್ಛಾರೂಪಿಗಳೂ ಪ್ರಭುಗಳೂ ಆಗಿರುವುವು.

೩೦. ಸೂರ್ಯನು ಅಗ್ನಿರೂಪಿಯೆಂದೂ, ಚಂದ್ರನು ಜಲಮಯನೆಂದೂ ಪ್ರಖ್ಯಾತವಾಗಿರುವುದು. ಉಳಿದ ಗ್ರಹಗಳ ಸ್ವರೂಪಗಳನ್ನು ಹೇಳುವೆನು. ಕೇಳಿರೆಂದನು.

ಸುರಸೇನಾಪತಿಃ ಸ್ಕಂಧಃ ಪಠ್ಯತೇಂಗಾರಕೋ ಗ್ರಹಃ ।
ನಾರಾಯಣಂ ಬುಧಂ ಪ್ರಾಹುರ್ದೇವಂ ಜ್ಞಾನವಿದೋ ವಿದುಃ ॥ ೩೧ ॥

ರುದ್ರೋ ವೈವಸ್ವತಃ ಸಾಕ್ಷಾದ್ಧರ್ಮೋ ಲೋಕೇ ಪ್ರಭುಃ ಸ್ವಯಂ ।
ಮಹಾಗ್ರಹೋ ದ್ವಿಜಶ್ರೇಷ್ಠೋ ಮಂದಗಾಮೀ ಶನೈಶ್ಚರಃ ॥ ೩೨ ॥

ದೇವಾಸುರಗುರೂ ದ್ವೌ ತು ಭಾನುಮಂತೌ ಮಹಾಗ್ರಹೌ ।
ಪ್ರಜಾಪತಿಸುತಾವೇತಾವುಭೌ ಶುಕ್ರಬೃಹಸ್ಪತೀ ॥
ದೈತ್ಯೋ ಮಹೇಂದ್ರಶ್ಚ ತಯೋರಾಧಿಪತ್ಯೇ ವಿನಿರ್ಮಿತೌ ॥ ೩೩ ॥

ಆದಿತ್ಯಮೂಲಮಖಿಲಂ ತ್ರಿಲೋಕಂ ನಾತ್ರ ಸಂಶಯಃ ।
ಭವತ್ಯಸ್ಯ ಜಗತ್ಕೃತ್ಸ್ನಂ ಸದೇವಾಸುರಮಾನುಷಂ ॥ ೩೪ ॥

ರುದ್ರೇಂದ್ರೋಪೇಂದ್ರಚಂದ್ರಾಣಾಂ ವಿಪ್ರೇಂದ್ರಾಸ್ತ್ರಿದಿವೌಕಸಾಂ ।
ದ್ಯುತಿರ್ದ್ಯುತಿಮತಾಂ ಕೃತ್ಸ್ನಾ ಯತ್ತೇಜಃ ಸಾರ್ವಲೌಕಿಕಂ ॥ ೩೫ ॥

---

೩೧-೩೨. ದೇವತೆಗಳ ಸೇನಾಪತಿಯಾದ ಸ್ಕಂದನೇ ಅಂಗಾರಕ ಗ್ರಹನೆಂದು ಹೇಳಲ್ಪಟ್ಟಿದೆ. ಮಹಾನುಭಾವರಾದ ಜ್ಞಾನಿಗಳು ಸ್ವಾಮಿಯಾದ ನಾರಾಯಣನನ್ನು ಬುಧನೆಂದು ಹೇಳುವರು. ಲೋಕದಲ್ಲಿ ಪ್ರಸಿದ್ಧನಾದ ಸಾಕ್ಷಾದೀಶ್ವರನೇ ವೈವಸ್ವತ ಯಮನಾಗಿರುವನು. ಆ ಯಮನೇ ಮಹಾ ಗ್ರಹವೂ, ದ್ವಿಜೋತ್ತಮನೂ, ಮಂದ ಗಾಮಿಯೂ ಆದ ಶನೈಶ್ಚರನಾಗಿರುವನು.

೩೩. ದೇವಗುರುವಾದ ಬೃಹಸ್ಪತಿಯೂ, ದೈತ್ಯಗುರುವಾದ ಶುಕ್ರನೂ ಇವರಿಬ್ಬರೂ ಕಿರಣಗಳುಳ್ಳ ಮಹಾಗ್ರಹಗಳೂ, ಬ್ರಹ್ಮದೇವನ ಮಾನಸಪುತ್ರರೂ ಆದ ಇವರಿಬ್ಬರೂ ಶುಕ್ರ ಗುರು ಗ್ರಹಗಳಾಗಿ ಜನಿಸಿದರು. ದೈತ್ಯರು ಮತ್ತು ದೇವತೆಗಳು ಇವರಿಬ್ಬರಿಗೂ ಗುರುತ್ವದಲ್ಲಿ ಆಧಿಪತ್ಯವನ್ನು ಕೊಟ್ಟಿರುವರು. ತಂತಮ್ಮ ಗುರುಗಳೆಂದು ಭಾವಿಸಿಕೊಂಡಿರುವರು.

೩೪-೩೫. ಚರಾಚರಾತ್ಮಕವಾದ ಮೂರು ಲೋಕಗಳೂ ಸೂರ್ಯನ ಮೂಲಕ ವಾಗಿಯೇ ಜೀವಿಸುತ್ತಿವೆ. ದೇವತೆಗಳು, ಅಸುರರು, ಮನುಷ್ಯರು ಇವರೇ ಮೊದಲಾದ ಸರ್ವ ಜಗತ್ತೂ ಈ ಸೂರ್ಯದೇವನ ಅಧೀನದಲ್ಲಿವೆ. ರುದ್ರ, ಇಂದ್ರ, ಉಪೇಂದ್ರ, ಚಂದ್ರ, ವಿಪ್ರೇಂದ್ರ ಮತ್ತು ದೇವತೆಗಳು ಇವರ ಕಾಂತಿಯೂ ಮತ್ತು ಕಾಂತಿ ಯುಕ್ತವಾದ ಸಮಸ್ತ ಲೋಕಗತವಾದ ಸಮಸ್ತ ತೇಜಸ್ಸೂ ಕೂಡ ಸೂರ್ಯನ ಕಾಂತಿಯಿಂದಲೇ ಜನ್ಯವಾಗಿವೆ.

ಸರ್ವಾತ್ಮಾ ಸರ್ವಲೋಕೇಶೋ ಮೂಲಂ ಪರಮದೈವತಂ ।
ತತಃ ಸಂಜಾಯತೇ ಸರ್ವಂ ತತ್ರ ಚೈವ ಪ್ರಲೀಯತೇ ॥ ೩೬ ॥

ಭಾವಾಭಾವೌ ಹಿ ಲೋಕಾನಾಮಾದಿತ್ಯಾನ್ನಿಃಸೃತೌ ಪುರಾ ।
ಜಗತ್ ಜ್ಞೇಯೋ ಗ್ರಹೋ ವಿಪ್ರಾ ದೀಪ್ತಿಮಾನ್ ಸುಗ್ರಹೋ ರವಿಃ॥ ೩೭ ॥

ಯತ್ರ ಗಚ್ಛಂತಿ ನಿಧನಂ ಜಾಯಂತೇ ಚ ಪುನಃ ಪುನಃ ।
ಕ್ಷಣ ಮುಹೂರ್ತಾ ದಿವಸಾ ನಿಶಾಃ ಪಕ್ಷಾಶ್ಚ ಕೃತ್ಸ್ನಶಃ ॥
ಮಾಸಾ ಸಂವತ್ಸರಾಶ್ಚೈವ ಋತವೋಽಬ್ದಯುಗಾನಿ ಚ ॥ ೩೮ ॥

ತದಾದಿತ್ಯಾದೃತೇ ತೇಷಾಂ ಕಾಲಸಂಖ್ಯಾ ನ ವಿದ್ಯತೇ ।
ಕಾಲಾದೃತೇ ನ ನಿಗಮೋ ನ ದೀಕ್ಷಾ ನಾಹ್ನಿಕಕ್ರಮಃ ॥ ೩೯ ॥

ಋತೂನಾಮವಿಭಾಗಶ್ಚ ಪುಷ್ಪಮೂಲಫಲಂ ಕುತಃ ।
ಕುತಃ ಸಸ್ಯಾಭಿನಿಷ್ಪತ್ತಿರ್ಗುಣೌಷಧಿಗಣಾದಿವಾ ॥ ೪೦ ॥

---

೩೬. ಸರ್ವಾತ್ಮನೂ, ಸಮಸ್ತ ಲೋಕೇಶನೂ, ಪರಮ ದೈವತವೂ ಆದ ಸೂರ್ಯನೇ ಸರ್ವಕ್ಕೂ ಮೂಲಕಾರಣನು. ಅವನಿಂದ ಈ ಜಗತ್ತೆಲ್ಲಾ ಸೃಷ್ಟವಾಗಿದೆ.

೩೭. ಪೂರ್ವಕಾಲದಲ್ಲಿ ಸಮಸ್ತ ಲೋಕಗಳ ಭಾವಾಭಾವಗಳು ಸೂರ್ಯನಿಂದಲೇ ಉತ್ಪನ್ನಗಳಾಗಿವೆ. ಆದುದರಿಂದ ಎಲೈ ವಿಪ್ರವರ್ಯರೇ, ಕಾಂತಿವಂತನಾದ ಸೂರ್ಯನು ಈ ಜಗತ್ತಿನಲ್ಲಿ ಸುಪ್ರಸಿದ್ಧವಾದ ಮುಖ್ಯ ಗ್ರಹನಾಗಿರುವನೆಂದು ತಿಳಿಯಬೇಕು.

೩೮-೪೦. ಸೂರ್ಯನಿಂದಲೇ ಜನನ ಮರಣಗಳು ಪುನಃ ಪುನಃ ಸಂಭವಿಸುತ್ತವೆ. ಕ್ಷಣ, ಮುಹೂರ್ತ, ದಿವಸ, ಹಗಲು, ರಾತ್ರಿ, ವಾರ, ಪಕ್ಷ, ಮಾಸ, ಋತು, ಅಯನ, ಸಂವತ್ಸರ, ಯುಗ ಇವೆಲ್ಲವೂ ಸೂರ್ಯನಿಂದಲೇ ಉಂಟಾಗುತ್ತವೆ. ಸೂರ್ಯನಿಲ್ಲದಿದ್ದರೆ ಕಾಲವೆಂಬ ಸಂಖ್ಯೆಯೇ ಇರುವುದಿಲ್ಲ. ಕಾಲವಿಲ್ಲದಿದ್ದರೆ ಆದ್ಯಂತಗಳು ಯಜ್ಞದೀಕ್ಷೆ ಸ್ನಾನಾಹ್ನಿಕಾದಿಗಳು ಉಂಟಾಗುವುದಿಲ್ಲ. ಕಾಲವಿಲ್ಲದಿದ್ದರೆ ಋತುಗಳ ವಿಭಾಗಗಳು ಪುಷ್ಪ ಫಲ ಮೂಲೋತ್ಪತ್ತಿಯೂ, ಸಸ್ಯಾದಿಗಳ ಜನನವೂ, ಫಲರಸಾದಿ ನಿಷ್ಪತ್ತಿಯೂ, ಗುಣಗಳ ಜನನವೂ ಆಗುವುದಿಲ್ಲ.

ಅಭಾವೋ ವ್ಯವಹಾರಾಣಾಂ ದೇವಾನಾಂ ದಿವಿ ಚೇಹ ಚ |
ಜಗತ್ಪ್ರತಾಪನಮೃತೇ ಭಾಸ್ಕರಂ ವಾರಿ ತಸ್ಕರಂ || ೪೧ ||

ಸ ಏವ ಕಾಲಶ್ಚಾಗ್ನಿಶ್ಚ ದ್ವಾದಶಾತ್ಮಾ ಪ್ರಜಾಪತಿಃ |
ತಪತ್ಯೇಷ ದ್ವಿಜಶ್ರೇಷ್ಠಾಸ್ತ್ರೈಲೋಕ್ಯಂ ಸಚರಾಚರಂ || ೪೨ ||

ಸ ಏಷ ತೇಜಸಾಂ ರಾಶಿಃ ಸಮಸ್ತಃ ಸಾರ್ವಲೌಕಿಕಃ |
ಉತ್ತಮಂ ಮಾರ್ಗಮಾಸ್ಥಾಯ ವಾಯೋರ್ಭಾಭಿರಿದಂ ಜಗತ್ ||
ಪಾರ್ಶ್ವಮೂರ್ಧ್ವಮಧಶ್ಚೈವ ತಾಪಯತ್ಯೇಷ ಸರ್ವಶಃ || ೪೩ ||

ರವೇರಶ್ಮಿಸಹಸ್ರಂ ಯತ್ ಪ್ರಾಙ್ಮಯಾ ಸಮುದಾಹೃತಂ |
ತೇಷಾಂ ಶ್ರೇಷ್ಠಾಃ ಪುನಃ ಸಪ್ತ ರಶ್ಮಯೋ ಗ್ರಹಯೋನಯಃ || ೪೪ ||

---

೪೧. ಸೂರ್ಯನಿಲ್ಲದಿದ್ದರೆ ಲೋಕವ್ಯವಹಾರವೇ ನಿಂತುಹೋಗುತ್ತದೆ. ದೇವತೆಗಳಿಗೆ ಸ್ವರ್ಗದಲ್ಲಿ ಕಾರ್ಯಗಳೂ, ಜಗತ್ತಿನಲ್ಲಿ ಮನುಷ್ಯರ ಕಾರ್ಯಗಳೂ ನಿಂತು ಹೋಗುತ್ತವೆ. ಜಗತ್ತಿಗೆ ಉಷ್ಣಜನಕನೂ, ವಾರಿಶೋಷಕನೂ, ಪ್ರಭಾಕರನೂ ಆದ ಸೂರ್ಯ ನಿಲ್ಲದಿದ್ದರೆ ಕ್ಷಣಲವಾದಿಗಳಿಲ್ಲದೆ ಜಗದ್ವ್ಯಾಪಾರವೇ ನಿಂತುಹೋಗುವುದು.

೪೨-೪೩. ಎಲೈ ವಿಪ್ರವರ್ಯರೇ, ದ್ವಾದಶಾತ್ಮನಾದ ಆ ಸೂರ್ಯನೇ ಯಮನೂ, ಅಗ್ನಿಯೂ, ಬ್ರಹ್ಮನೂ ಆಗಿ ಚರಾಚರಾತ್ಮಕವಾದ ಮೂರು ಲೋಕಗಳನ್ನೂ ತಾಪಗೊಳಿಸುವನು. ಆ ಸೂರ್ಯನೇ ತೇಜೋರಾಶಿಯೂ, ಸಮಸ್ತ ಲೋಕಗಳಿಗೂ ಒಡೆಯನೂ, ಸರ್ವಲೋಕನಿಯಾಮಕನೂ ಆಗಿ, ಉತ್ತಮ ಮಾರ್ಗವನ್ನು ಹೊಂದಿ, ವಾಯುವಿನ ಸಹಾಯದಿಂದಲೂ, ತನ್ನ ಕಾಂತಿಯಿಂದಲೂ, ಈ ಜಗತ್ತಿನ ಮೇಲು ಕೆಳಗು ಪಾರ್ಶ್ವಗಳೆಂಬ ಸರ್ವಭಾಗಗಳಲ್ಲಿಯೂ ತಾಪವನ್ನು ಮಾಡುವನು. ಉಷ್ಣತೆಯನ್ನು ಉಂಟುಮಾಡುವನು.

೪೪. ಎಲೈ ವಿಪ್ರರೇ, ಸೂರ್ಯನಲ್ಲಿ ಸಹಸ್ರ ರಶ್ಮಿಗಳಿವೆಯೆಂದು ನಾನು ಪೂರ್ವದಲ್ಲಿಯೇ ತಿಳಿಸಿರುತ್ತೇನೆ. ಅವುಗಳಲ್ಲಿ ಮುಖ್ಯವಾಗಿ ಮುಖ್ಯವಾದ ಸಪ್ತರಶ್ಮಿಗಳು ಗ್ರಹಜನಕಗಳಾಗಿವೆ.

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ವಿಶ್ವಶ್ರವಾಃ ಪುನಶ್ಚಾನ್ಯಃ ಸಂಪದ್ವಸುರತಃ ಪರಂ ॥
ಅರ್ವ್ಯಾವಸುಃ ಪುನಶ್ಚಾನ್ಯೋ ಮಯಾ ಚಾತ್ರ ಪ್ರಕೀರ್ತಿತಃ ॥ ೪೫ ॥

ಸುಷುಮ್ನಃ ಸೂರ್ಯರಶ್ಮಿಸ್ತು ಕ್ಷೀಣಂ ಶಶಿನಮೋಧರ್ಯೇ ।
ತಿರ್ಯಗೂರ್ದ್ಧ್ವಪ್ರಭಾವೋಸೌ ಸುಷುಮ್ನಃ ಪರಿಕೀರ್ತ್ಯತೇ ॥ ೪೬ ॥

ಹರಿಕೇಶಃ ಪುರಸ್ತಾದ್ಯಾ ಋಕ್ಷಯೋನಿಃ ಪ್ರಕೀರ್ತ್ಯತೇ ।
ದಕ್ಷಿಣೇ ವಿಶ್ವಕರ್ಮಾ ತು ರಶ್ಮಿರ್ವರ್ದ್ಧಯತೇ ಬುಧಂ ॥ ೪೭ ॥

ವಿಶ್ವಶ್ರವಾಸ್ತು ಯಃ ಪಶ್ಚಾತ್ ಶುಕ್ರಯೋನಿಃ ಸ್ಮೃತಾ ಬುಧೈಃ ।
ಸಂಪದ್ವಸುಶ್ಚ ಯೋ ರಶ್ಮಿಃ ಸಾಯೋನಿರ್ಲೋಹಿತಸ್ಯ ಚ ॥ ೪೮ ॥

---

೪೫. ಅವು ಸುಷುಮ್ನ, ಹರಿಕೇಶ, ವಿಶ್ವಕರ್ಮ, ವಿಶ್ವಶ್ರವಸ್ಸು, ಸಂಪತ್ ವಸುರತ ಮತ್ತು ಅರ್ವಾವಸು ಎಂಬ ಸಪ್ತರಶ್ಮಿಗಳು ಇವು ಮುಖ್ಯವಾಗಿವೆ. ಇವು ಸರ್ವಕಾರ್ಯಸಾಧಕವಾಗಿವೆಯೆಂದು ತಿಳಿಯಿರಿ.

೪೬. ಆ ಸಪ್ತರಶ್ಮಿಗಳಲ್ಲಿ ಸುಷುಮ್ನಾನಾಮಕರಶ್ಮಿಯು ಕ್ಷೀಣನಾದ ಚಂದ್ರನನ್ನು ವೃದ್ಧಿಪಡಿಸುವುದು. ಮತ್ತು ಸೂರ್ಯನ ಸುಷುಮ್ನಾರಶ್ಮಿಗಳು ಜಗತ್ತಿನ ಕೆಳಗೆ ಮೇಲೆ ಪಕ್ಕ ಇವುಗಳಲ್ಲಿ ತನ್ನ ಉಷ್ಣವನ್ನುಂಟುಮಾಡುವುದರ ಮೂಲಕ ಲೋಕರಕ್ಷಕವಾಗಿರುವುವು.

೪೭-೫೦. ಹರಿಕೇಶವೆಂಬ ಎರಡನೆಯ ಕಿರಣವು ನಕ್ಷತ್ರಜನಕವಾಗಿದೆ. ಇದರಿಂದಲೇ ನಕ್ಷತ್ರಾದಿಗಳು ಉತ್ಪನ್ನವಾಗುವುವು. ದಕ್ಷಿಣದಿಕ್ಕಿನಲ್ಲಿರುವ ವಿಶ್ವಕರ್ಮವೆಂಬ ರಶ್ಮಿಯು ಬುಧಗ್ರಹವನ್ನು ವೃದ್ಧಿಪಡಿಸುವುದಾಗಿದೆ. ವಿಶ್ವಶ್ರವಸ್ಸೆಂಬ ಕಿರಣವು ಶುಕ್ರನಿಗೆ ಮೂಲಕಾರಣವಾಗಿವೆಯೆಂದು ಜ್ಞಾನಿಗಳು ಹೇಳುವರು. ಸಂಪದ್ವಸುವೆಂಬ ಮತ್ತೊಂದು ಕಿರಣವು ಕುಜನಿಗೆ ಕಾರಣವಾಗಿರುತ್ತದೆ. ಆರನೆಯ ಅರ್ವಾವಸುವೆಂಬ

ಷಷ್ಠಸ್ತ್ವರ್ವಾವಸೂ ರಶ್ಮಿರ್ಯೋನಿಸ್ತು ಸ ಬೃಹಸ್ಪತೇಃ ।
ಶನೈಶ್ಚರಂ ಪುನಶ್ಚಾಪಿ ರಶ್ಮಿರಾಪ್ಯಾಯತೇ ಸ್ವರಾಟ್ ॥ ೬೯ ॥

ಏವಂ ಸೂರ್ಯಪ್ರಭಾವೇಣ ಗ್ರಹನಕ್ಷತ್ರತಾರಕಾಃ ।
ವರ್ದ್ಧಂತೇ ವಿದಿತಾಃ ಸರ್ವಾ ವಿಶ್ವಂಚೇದಂ ಪುನರ್ಜಗತ್ ॥
ನ ಕ್ಷೀಯಂತೇ ಪುನಸ್ತಾನಿ ತಸ್ಮಾನ್ನಕ್ಷತ್ರತಾ ಸ್ಮೃತಾ ॥ ೭೦ ॥

ಕ್ಷೇತ್ರಾಣ್ಯೇತಾನಿ ವೈ ಪೂರ್ವಮಾಪತಂತಿ ಗಭಸ್ತಿಭಿಃ ।
ತೇಷಾಂ ಕ್ಷೇತ್ರಾಣ್ಯಥಾದತ್ತೇ ಸೂರ್ಯೋ ನಕ್ಷತ್ರತಾಂಗತಃ ॥ ೭೧ ॥

ತೀರ್ಣಾನಾಂ ಸುಕೃತೇನೇಹ ಸುಕೃತಾಂತೇ ಗ್ರಹಾಶ್ರಯಾತ್ ।
ತಾರಾಣಾಂ ತಾರಕಾ ಹ್ಯೇತಾಃ ಶುಕ್ಲತ್ವಾಚ್ಚೈವ ತಾರಕಾಃ ॥ ೭೨ ॥

---

ಬೇರೊಂದು ರಶ್ಮಿಯು ಬೃಹಸ್ಪತಿಯ ಸೃಷ್ಟಿಗೆ ಕಾರಣವಾಗಿದೆ. ಸ್ವರಾಟೆಂಬ ಅಗ್ನಿಯು ಶನೈಶ್ಚರನ ಉತ್ಪತ್ತಿಗೆ ಮೂಲವಾಗಿದೆ. ಈ ಕ್ರಮವಲ್ಲಿ ಸೂರ್ಯನ ಸುಪ್ರಸಿದ್ಧಗಳಾದ ಸಪ್ತರಶ್ಮಿಗಳ ಮೂಲಕ ಗ್ರಹನಕ್ಷತ್ರಗ್ರಹಗಳು ವೃದ್ಧಿಯಾಗುತ್ತವೆ. ಆ ಗ್ರಹಗಳಿಂದ ಜಗತ್ತೆಲ್ಲವೂ ವ್ಯಾಪ್ತಗಳಾಗಿವೆ. ಸೂರ್ಯನಿಲ್ಲದಿದ್ದರೆ ಮೇಲೆ ಹೇಳಿದ ಗ್ರಹಗಳೆಲ್ಲವೂ ಕ್ಷೀಣವಾಗುತ್ತವೆ. ಆದುದರಿಂದ ಸೂರ್ಯನು ಸಮಸ್ತವಾದ ಗ್ರಹ ನಕ್ಷತ್ರತಾರಕರೂಪನಾಗಿರುವನೆಂದು ಜ್ಞಾನಿಗಳು ಹೇಳುವರು.

೭೧. ಹಿಂದೆ ನಿರೂಪಿಸಿದ ಗ್ರಹಗಳ ಸ್ಥಾನಗಳು ಸೂರ್ಯನ ಕಿರಣಗಳಿಂದ ಉತ್ಪನ್ನವಾಗಿವೆ. ನಕ್ಷತ್ರಸ್ವರೂಪನಾದ ಸೂರ್ಯನು ಆ ಗ್ರಹಗಳ ಆಲಯಗಳನ್ನು ಧರಿಸುತ್ತಾನೆ.

೭೨. ತಾರಕೆಗಳು ಅತೀತವಾದುವುಗಳ ಪುಣ್ಯವಿಶೇಷದಿಂದ ಗ್ರಹಗಳಾಗಿರುತ್ತವೆ. ಈ ಕಾರಣದಿಂದಲೂ ತಾರಕಗಳಿಗೂ ತಾರಕಗಳಾಗಿರುವುದರಿಂದ ಆ ಸೂರ್ಯ ರಶ್ಮಿಗಳು ಶುಕ್ಲವಾಗಿಯೂ ತಾರಕರೂಪವಾಗಿಯೂ ಇರುತ್ತವೆ.

ದಿವ್ಯಾನಾಂ ಪಾರ್ಥಿವಾನಾಂ ಚ ನೈಶಾನಾಂ ಚೈವ ಸರ್ವಶಃ ।
ಆದಾನಾನ್ನಿತ್ಯಮಾದಿತ್ಯಸ್ತಮಸಾಂ ತೇಜಸಾಂ ಮಹಾನ್ ॥ ೫೩ ॥

ಸುವತಿ ಸ್ಪಂದನಾರ್ಥೇ ಚ ಧಾತುರೇಷ ವಿಭಾವ್ಯತೇ ।
ಸವನಾತ್ತೇಜಸೋಽಪಾಂ ಚ ತೇನಾಸೌ ಸವಿತಾ ಮತಃ ॥ ೫೪ ॥

ಬಹ್ವರ್ದಶ್ಚಂದ್ರ ಇತ್ಯೇಷ ಹ್ಲಾದನೇ ಧಾತುರಿಷ್ಯತೇ ।
ಶುಕ್ಲತ್ವೇ ಚಾಮೃತತ್ವೇ ಚ ಶೀತತ್ವೇ ಚ ವಿಭಾವ್ಯತೇ ॥ ೫೫ ॥

ಸೂರ್ಯಚಂದ್ರಮಸೋರ್ದಿವ್ಯೇ ಮಂಡಲೇ ಭಾಸ್ವರೇ ಖಗೇ ।
ಜ್ವಲತ್ತೇಜೋಮಯೇ ಶುಕ್ಲೇ ವೃತ್ತಕುಂಭನಿಭೇ ಶುಭೇ ॥ ೫೬ ॥

---

೫೩. ಸೂರ್ಯನು ಸ್ವರ್ಗ, ಭೂಮಿ, ರಾತ್ರಿ ಇವುಗಳಲ್ಲಿರತಕ್ಕ ಮಹತ್ತಾದ ಅಂಧಕಾರವನ್ನೂ ಮಹಾ ತೇಜಸ್ಸನ್ನೂ ಸ್ವೀಕಾರಮಾಡುವುದರಿಂದ ಆದಿತ್ಯನೆಂಬ ನಾಮವು ಸಂಭವಿಸಿರುತ್ತದೆ.

೫೪. ಷು ಧಾತುವಿನಿಂದ ನಿಷ್ಪನ್ನವಾದ ಸುವತಿ ಎಂಬ ಪದಕ್ಕೆ ಸ್ಪಂದನಾದ್ಯನೇಕಾರ್ಥಗಳಿವೆ. ಲೋಕೋಪಕಾರಕ್ಕಾಗಿ ಸೂರ್ಯನು ತೇಜಸ್ಸನ್ನೂ ಜಲವನ್ನೂ ಲೋಕದಲ್ಲಿ ಹರಡುವುದರಿಂದ ಸವಿತೃನಾಮಕನಾಗಿರುವನು.

೫೫. ಚಂದ್ರ ಶಬ್ದಕ್ಕೆ ಪ್ರಕಾಶಕ, ಹೊಳೆಯುವವನು, ಆಹ್ಲಾದಕ ಇತ್ಯಾದ್ಯನೇಕಾರ್ಥವಾದರೂ ಚದಿ ಆಹ್ಲಾದೆ ಎಂಬ ಧಾತುವಿನಿಂದ ಚಂದ್ರ ಶಬ್ದವು ನಿಷ್ಪನ್ನವಾಗಿದೆ. ಚಂದ್ರ ಎಂದರೆ ಶುಭ್ರರೂಪನು, ಅಮೃತಾಕರನು ಮತ್ತು ಶೀತಜನಕನು ಎಂಬ ಅರ್ಥವೂ ಲೋಕಸಮ್ಮತವಾಗಿದೆ.

೫೬. ಸೂರ್ಯ ಚಂದ್ರರ ಮಂಡಲವು ದಿವ್ಯವಾಗಿಯೂ, ಶುಭ್ರವಾಗಿಯೂ, ಆಕಾಶಗಾಮಿಯಾಗಿಯೂ, ಜಾಜ್ವಲ್ಯಮಾನವಾಗಿಯೂ, ಶುಕ್ಲರೂಪಿಯಾಗಿಯೂ, ಕುಂಭದಂತೆ ವರ್ತುಳವಾಗಿಯೂ, ಮಂಗಳಪ್ರದವಾಗಿಯೂ ಇದೆ.

ಘನತೋಯಾತ್ಮಕಂ ತತ್ರ ಮಂಡಲಂ ಶಶಿನಃ ಸ್ಮೃತಂ ।
ಘನತೇಜೋಮಯಂ ಶುಕ್ಲಂ ಮಂಡಲಂ ಭಾಸ್ಕರಸ್ಯ ತು · ॥ ೫೭ ॥

ವಿಶಂತಿ ಸರ್ವದೇವಾಸ್ತು ಸ್ಥಾನಾನ್ಯೇತಾನಿ ಸರ್ವಶಃ ।
ಮನ್ವಂತರೇಷು ಸರ್ವೇಷು ಋಕ್ಷಸೂರ್ಯಗ್ರಹಾಶ್ರಯಾಃ ॥ ೫೮ ॥

ತಾನಿ ದೇವಗೃಹಾಣ್ಯೇವ ತದಾಖ್ಯಾಸ್ತೇ ಭವಂತಿ ಚ ।
ಸೌರಂ ಸೂರ್ಯೋ ವಿಶಸ್ಥಾನಂ ಸೌಮ್ಯಂ ಸೋಮ್ಯಸ್ತಥೈವ ಚ ॥ ೫೯ ॥

ಶೌಕ್ರಂ ಶುಕ್ರೋ ವಿಶಸ್ಥಾನಂ ಷೋಡಶಾರ್ಚಿಃ ಪ್ರತಾಪವಾನ್ ।
ಬೃಹದ್ಬೃಹಸ್ಪತಿಶ್ಚೈವ ಲೋಹಿತಾಶ್ಚೈವ ಲೌಹಿತಃ ॥
ಶಾನ್ಯೈಶ್ಚರಂ ತಥಾ ಸ್ಥಾನಂ ದೇವಶ್ಚೈವ ಶನ್ಯೈಶ್ಚರೈಃ ॥ ೬೦ ॥

---

೫೭. ಅವುಗಳಲ್ಲಿ ಚಂದ್ರಮಂಡಲವು ನಿಬಿಡವಾದ ಜಲಮಯವಾಗಿಯೂ, ಸೂರ್ಯಮಂಡಲವು ಘನವಾದ ತೇಜೋರೂಪವಾಗಿಯೂ, ಶುಭ್ರವಾಗಿಯೂ ಇವೆಯೆಂದು ಜ್ಞಾನಿಗಳು ಹೇಳುವರು.

೫೮. ಸಮಸ್ತರಾದ ದೇವತೆಗಳೂ ಹಿಂದೆ ನಿರೂಪಿಸಿದ ಸೂರ್ಯಾದಿ ಗ್ರಹಗಳ ಸ್ಥಾನಗಳನ್ನು ಪ್ರವೇಶಿಸುತ್ತಾರೆ. ಇದೇ ರೀತಿಯಾಗಿ ಸಮಸ್ತ ಮನ್ವಂತರಗಳಲ್ಲಿಯೂ ಸಮಸ್ತ ದೇವತೆಗಳೂ ಸೂರ್ಯ ಚಂದ್ರ ನಕ್ಷತ್ರ ಗ್ರಹಗಳ ಸ್ಥಾನಗಳನ್ನು ಆಶ್ರಯಿಸಿ ಕೊಂಡಿರುವರು.

೫೯-೬೦. ಯಾವ ದೇವತೆಗಳು ಎಲ್ಲೆಲ್ಲಿ ವಾಸಿಸುತ್ತಾರೆಯೋ ಆಯಾ ಸ್ಥಳ ಗಳಿಗೆ ಆಯಾ ನಾಮಗಳೇ ಪ್ರಾಪ್ತವಾಗಿವೆ. ಸೂರ್ಯನು ಪ್ರವೇಶಿಸಿರುವ ಸ್ಥಾನಕ್ಕೆ ಸೌರವೆಂದೂ, ಚಂದ್ರನ ಸ್ಥಾನಕ್ಕೆ ಸೌಮ್ಯವೆಂದೂ ಲೋಕದಲ್ಲಿ ಪ್ರಖ್ಯಾತಿಯು ಬಂದಿವೆ. ಷೋಡಶಕಿರಣಗಳುಳ್ಳವನೂ ಪ್ರತಾಪಶಾಲಿಯೂ ಆದ ಶುಕ್ರನ ಸ್ಥಾನಕ್ಕೆ ಶೌಕ್ರವೆಂದೂ, ಬೃಹಸ್ಪತಿಯು ವಾಸಮಾಡಿದ ಸ್ಥಳಕ್ಕೆ ಬೃಹತ್ಪ್ರದೇಶವೆಂದೂ, ಮಂಗಳನಿರುವ ಗೃಹಕ್ಕೆ ಲೌಹಿತವೆಂದೂ, ದೇವನಾದ ಶನೈಶ್ಚರನು ವಾಸಿಸುವ ಮನೆಗೆ ಶಾನ್ಯೈಶ್ಚರನೆಂದೂ ನಾಮಗಳು ಈ ಲೋಕದಲ್ಲಿ ಪ್ರಖ್ಯಾತವಾಗಿವೆ.

ಆದಿತ್ಯರಶ್ಮಿಸಂಯೋಗಾತ್ ಸಂಪ್ರಕಾಶಾತ್ಮಿಕಾಃ ಸ್ಮೃತಾಃ |
ನವಯೋಜನಸಾಹಸ್ರೇ ವಿಷ್ಕಂಭಃ ಸವಿತುಃ ಸ್ಮೃತಃ || ೬೧ ||

ತ್ರಿಗುಣಸ್ತಸ್ಯ ವಿಸ್ತಾರೋ ಮಂಡಲಶ್ಚ ಪ್ರಮಾಣತಃ |
ದ್ವಿಗುಣಃ ಸೂರ್ಯವಿಸ್ತಾರಾದ್ವಿಸ್ತಾರಃ ಶಶಿನಃ ಸ್ಮೃತಃ || ೬೨ ||

ತುಲ್ಯಸ್ತಯೋಸ್ತು ಸ್ವರ್ಭಾನುರ್ಭೂತ್ವಾಧಸ್ತಾತ್ ಪ್ರಸರ್ಪತಿ |
ಉದ್ಧೃತ್ಯ ಪಾರ್ಥಿವಚ್ಛಾಯಾಂ ನಿರ್ಮಿತೋ ಮಂಡಲಾಕೃತಿಃ || ೬೩ ||

ಸ್ವರ್ಭಾನೋಸ್ತು ಬೃಹತ್ ಸ್ಥಾನಂ ನಿರ್ಮಿತಂ ಯತ್ತಮೋಮಯಂ |
ಆದಿತ್ಯಾತ್ತಚ್ಚ ನಿಷ್ಕ್ರಮ್ಯ ಸೋಮಂ ಗಚ್ಛತಿ ಪರ್ವಸು || ೬೪ ||

---

೬೧. ಆದರೆ ಮೇಲೆ ನಿರೂಪಿಸಿರುವ ಗ್ರಹಗಳ ಸ್ಥಾನಗಳು ಸೂರ್ಯನ ರಶ್ಮಿಗಳ ಸಂಬಂಧದಿಂದ ಪ್ರಕಾಶಿಸುತ್ತವೆ. ಸೂರ್ಯದೇವನ ಮಂಡಲವು ಒಂಭತ್ತು ಸಹಸ್ರ ಯೋಜನಗಳಷ್ಟು ವಿಸ್ತಾರವಾಗಿದೆಯೆಂದು ಪ್ರಸಿದ್ಧವಾಗಿದೆ.

೬೨. ಸೂರ್ಯನ ವಿಸ್ತಾರಕ್ಕಿಂತಲೂ ಸೂರ್ಯಮಂಡಲದ ವಿಸ್ತಾರವು ತ್ರಿಗುಣಾಧಿಕವಾಗಿರುತ್ತದೆ. ಸೂರ್ಯಮಂಡಲಕ್ಕಿಂತಲೂ ಚಂದ್ರಮಂಡಲದ ವಿಸ್ತಾರವು ದ್ವಿಗುಣವಾಗಿದೆ.

೬೩. ರಾಹುಗ್ರಹವು ಚಂದ್ರಸೂರ್ಯರಿಗೆ ಸಮನಾಗಿ ಅವರ ಕೆಳಭಾಗದಲ್ಲಿ ಸಂಚರಿಸುತ್ತದೆ. ಅವನ ಸ್ಥಾನವು ಭೂಚ್ಛಾಯೆಯನ್ನನುಸರಿಸಿ ಮಂಡಲಾಕಾರವಾಗಿ ನಿರ್ಮಿಸಲ್ಪಟ್ಟಿದೆ.

೬೪. ಈ ರಾಹುವಿನ ಸ್ಥಾನವು ಅತಿ ಮಹತ್ತಾಗಿಯೂ, ತಿಲೋಮಯವಾಗಿಯೂ ಇರುತ್ತದೆ. ಇಂತಹ ರಾಹುವು ಪರ್ವಕಾಲಗಳಲ್ಲಿ ಸೂರ್ಯನನ್ನು ಬಿಟ್ಟು ಚಂದ್ರನನ್ನು ಸೇರುವನು.

ಆದಿತ್ಯಮೇತಿ ಸೋಮಾಚ್ಚ ಪುನಃ ಸೋಮಂ ಚ ಪರ್ವಸು ।
ವರ್ಭಾಸಾ ನುದತೇ ಯಸ್ಮಾತ್ತತಃ ಸ್ವರ್ಭಾನುರುಚ್ಯತೇ ॥ ೬೫ ॥

ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಶ್ಚ ವಿಧೀಯತೇ ।
ವಿಷ್ಕಂಭಾನ್ಮಂಡಲಾಚ್ಚೈವ ಯೋಜನಾಗ್ರಾತ್ ಪ್ರಮಾಣತಃ ॥ ೬೬ ॥

ಭಾರ್ಗವಾತ್ಪಾದಹೀನಸ್ತು ವಿಜ್ಞೇಯೋ ವೈ ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನೌ ಕುಜಸೌರಾವುಭೌ ಸ್ಮೃತೌ ॥
ವಿಸ್ತಾರಾನ್ಮಂಡಲಾಶ್ಚೈವ ಪಾದಹೀನಸ್ತಯೋರ್ಬುಧಃ ॥ ೬೭ ॥

ತಾರಾನಕ್ಷತ್ರರೂಪಾಣಿ ಸ್ವಪುಷ್ಮಂತೀಹ ಯಾನಿ ವೈ ।
ಬುಧೇನ ಸಮತುಲ್ಯಾನಿ ವಿಸ್ತಾರಾನ್ಮಂಡಲಾದಥ ॥ ೬೮ ॥

---

೬೫. ಪುನಃ ಪರ್ವಕಾಲ ಬಂದಾಗ ಚಂದ್ರನಿಂದ ಸೂರ್ಯನ ಕಡೆಗೂ, ಪುನಃ ಆ ಸೂರ್ಯನಿಂದ ಚಂದ್ರನ ಸಮೀಪಕ್ಕೂ ಹೋಗುವನು. ರಾಹುವು ತನ್ನ ಕಾಂತಿಯಿಂದ ಸಂಚರಿಸುವನಾದಕಾರಣ ಸ್ವರ್ಭಾನುವೆಂಬ ನಾಮವು ಅನ್ವರ್ಥಕವಾಗಿದೆ.

೬೬. ಶುಕ್ರನು ಚಂದ್ರನ ಯೋಜನ ಪ್ರಮಾಣದಲ್ಲಿ ಹದಿನಾರನೆಯ ಭಾಗದಷ್ಟು ವಿಸ್ತಾರವಾಗಿರುವನು. ಶುಕ್ರನು ಚಂದ್ರನ ಹದಿನಾರು ಭಾಗಗಳಲ್ಲಿ ಒಂದು ಭಾಗದಷ್ಟು ಮಾತ್ರ ವಿಸ್ತಾರವಾಗಿರುವನು.

೬೭. ಅಂತಹ ಶುಕ್ರನಿಗಿಂತಲೂ ಬೃಹಸ್ಪತಿಯು ಪಾದಹೀನನಾಗಿರುವನು. ಬೃಹಸ್ಪತಿಗಿಂತಲೂ ಅಂಗಾರಕ ಶನೈಶ್ಚರರು ಒಂದು ಭಾಗ ಹೀನರಾಗಿರುವರು. ಸುತ್ತಳತೆ ವಿಸ್ತಾರಗಳಲ್ಲಿ ಬುಧನು ಅವರಿಬ್ಬರಿಗೂ ಒಂದು ಭಾಗದಷ್ಟು ಕಡೆಯಾಗಿರುವನು.

೬೮. ಯಾವ ತಾರೆಗಳೂ ನಕ್ಷತ್ರಗಳೂ ಆಕಾರವತ್ತಾಗಿವೆಯೋ ಅವೆಲ್ಲವೂ ವಿಸ್ತಾರ ಮಂಡಲಗಳ ವಿಷಯದಲ್ಲಿ ಬುಧನಿಗೆ ಸಮಾನಗಳಾಗಿವೆ.

ಪ್ರಾಯಶಶ್ಚಂದ್ರಯೋಗಾನಿ ವಿದ್ಯಾದೃಕ್ಷಾಣಿ ತತ್ವವಿತ್ ।
ತಾರಾನಕ್ಷತ್ರರೂಪಾಣಿ ಹೀನಾನಿ ತು ಪರಸ್ಪರಂ ॥ ೬೯ ॥

ಶತಾನಿ ಪಂಚ ಚತ್ವಾರಿ ತ್ರೀಣಿ ದ್ವೇ ಚೈವ ಯೋಜನೇ ।
ಪೂರ್ವಾಪರನಿಕೃಷ್ಟಾನಿ ತಾರಕಾಮಂಡಲಾನಿ ತು ॥
ಯೋಜನಾನ್ಯರ್ಧಮಾತ್ರಾಣಿ ತೇಭ್ಯೋ ಹ್ರಸ್ವಂ ನ ವಿದ್ಯತೇ ॥ ೭೦ ॥

ಉಪರಿಷ್ಟಾತ್ ತ್ರಯಸ್ತೇಷಾಂ ಗ್ರಹಾ ಯೇ ದೂರಸರ್ಪಿಣಃ ।
ಸೌರೋಽಂಗಿರಾಶ್ಚ ವಕ್ರಶ್ಚ ಜ್ಞೇಯಾ ಮಂದವಿಚಾರಿಣಃ ॥ ೭೧ ॥

ತೇಭ್ಯೋಽಧಸ್ತಾತ್ತು ಚತ್ವಾರಃ ಪುನರನ್ಯೇ ಮಹಾಗ್ರಹಾಃ ।
ಸೂರ್ಯಃ ಸೋಮೋ ಬುಧಶ್ಚೈವ ಭಾರ್ಗವಶ್ಚೈವ ಶೀಘ್ರಗಾಃ ॥ ೭೨ ॥

ಯಾವಂತ್ಯಸ್ತಾರಕಾಃ ಕೋಟ್ಯಸ್ತಾವದೃಕ್ಷಾಣಿ ಸರ್ವಶಃ ।
ವೀಥಿನಾಂ ನಿಯಮಾಚ್ಚೈವಮೃಕ್ಷಮಾರ್ಗೋ ವ್ಯವಸ್ಥಿತಃ ॥ ೭೩ ॥

---

೬೯. ಜ್ಞಾನಿಯಾದ ಪುರುಷನು ನಕ್ಷತ್ರಗಳೆಲ್ಲವೂ ಚಂದ್ರನ ಸಂಬಂಧದಿಂದಲೇ ಪ್ರಕಾಶಿಸುತ್ತಿವೆ. ಅಂತಹ ತಾರಾನಕ್ಷತ್ರಗಳಲ್ಲಿ ಒಂದಕ್ಕೊಂದು ಹೀನವಾಗಿಯೂ ಅಧೀನವಾಗಿಯೂ ಇವೆಯೆಂದು ತಿಳಿಯಬೇಕು.

೭೦-೭೧. ತಾರಕಾಮಂಡಲಗಳಲ್ಲಿ ಕೆಲವು ಗ್ರಹಗಳು ಐದುನೂರು ಯೋಜನಗಳಷ್ಟು ವಿಸ್ತಾರವಾಗಿಯೂ, ಕೆಲವು ನಾನ್ನೂರುಯೋಜನ, ಇನ್ನು ಕೆಲವು ಮುನ್ನೂರು ಯೋಜನ, ಕೆಲವು ಇನ್ನೂರುಯೋಜನ ವಿಸ್ತಾರವಾಗಿಯೂ ಇರುತ್ತವೆ. ಮತ್ತು ಮೇಲಿರುವ ನಕ್ಷತ್ರಕ್ಕಿಂತಲೂ ಕೆಳಗಿರುವ ನಕ್ಷತ್ರಗಳು ನಿಕೃಷ್ಟವಾಗಿಯೂ ಇವೆ. ಐವತ್ತು ಯೋಜನಕ್ಕಿಂತಲೂ ಕಡಿಮೆಯಾದ ನಕ್ಷತ್ರಗಳು ಯಾವುದೂ ಇಲ್ಲ.

೭೨. ಶನೇಶ್ವರ, ಬೃಹಸ್ಪತಿ, ಮಂಗಳ ಈ ಮೂರು ಗ್ರಹಗಳೂ ಮೇಲ್ಭಾಗದಲ್ಲಿ ಅತಿ ದೂರವಾಗಿವೆ. ಆ ಮೂರು ಗ್ರಹಗಳೂ ಮಂದಚಾರಿಗಳು ಆಗಿರುವರು. ಇವುಗಳ ಕೆಳಭಾಗದಲ್ಲಿ ಸೂರ್ಯ, ಚಂದ್ರ, ಬುಧ, ಶುಕ್ರನೆಂಬ ನಾಲ್ಕು ಮಹಾಗ್ರಹಗಳು ಶೀಘ್ರಗಾಮಿಯಾಗಿದೆ.

೭೩. ಎಷ್ಟು ಕೋಟಿ ಗ್ರಹಗಳು ಆಕಾಶದಲ್ಲಿವೆಯೋ, ಅಷ್ಟು ನಕ್ಷತ್ರಗಳೂ ಕೂಡ ಅಂತರಿಕ್ಷದಲ್ಲಿವೆ. ವೀಥಿಗಳ ನಿಯಮಕ್ರಮವಾಗಿ ನಕ್ಷತ್ರಮಾರ್ಗವು ವ್ಯವಸ್ಥಿತವಾಗಿದೆ.

**ಗತಿಸ್ತಾಸ್ತ್ವೇವ ಸೂರ್ಯಸ್ಯ ನೀಚೋಚ್ಚತ್ವೇಽಯನಕ್ರಮಾತ್ ।**
**ಉತ್ತರಾಯಣಮಾರ್ಗಸ್ಥೋ ಯದಾ ಪರ್ವಸು ಚಂದ್ರಮಾಃ ॥**
**ಬೌಧಂ ಬೌದ್ಧೋಽಥ ಸ್ವರ್ಭಾನುಃ ಸ್ವರ್ಭಾನೋಃ ಸ್ಥಾನಮಾಸ್ಥಿತಃ ॥ ೭೪ ॥**

**ನಕ್ಷತ್ರಾಣಿ ಚ ಸರ್ವಾಣಿ ನಕ್ಷತ್ರಾಣಿ ವಿಶಂತ್ಯುತ ।**
**ಗೃಹಾಣ್ಯೇತಾನಿ ಸರ್ವಾಣಿ ಜ್ಯೋತೀಂಷಿ ಸುಕೃತಾತ್ಮನಾಂ ॥ ೭೫ ॥**

**ಕಲ್ಪಾದೌ ಸಂಪ್ರವೃತ್ತಾನಿ ನಿರ್ಮಿತಾನಿ ಸ್ವಯಂಭುವಾ ।**
**ಸ್ಥಾನಾನ್ಯೇತಾನಿ ತಿಷ್ಠಂತಿ ಯಾವದಾಭೂತಸಂಪ್ಲವಂ ॥ ೭೬ ॥**

**ಮನ್ವಂತರೇಷು ಸರ್ವೇಷು ದೇವತಾಯತನಾನಿ ವೈ ।**
**ಅಭಿಮಾನಿನೋಽವತಿಷ್ಠಂತಿ ಯಾವದಾಭೂತಸಂಪ್ಲವಂ ॥ ೭೭ ॥**

---

೭೪. ಸೂರ್ಯನೂ ಕೂಡ ದಕ್ಷಿಣಾಯನೋತ್ತರಾಯಣಕ್ರಮದಿಂದ ಆವೀಥಿಗಳಲ್ಲಿಯೇ ನೀಚೋಚ್ಚವಾಗಿ ಸಂಚರಿಸುತ್ತಾನೆ. ಉತ್ತರಾಯಣದ ಕಾಲವಲ್ಲಿ ಚಂದ್ರನು ಯಾವಾಗ ತನ್ನ ಮಾರ್ಗದಲ್ಲಿರುವನೋ ಆಗ ಬುಧನು ಬುಧನ ಮಾರ್ಗದಲ್ಲಿಯೂ, ಶನೇಶ್ವರನು ತನ್ನ ಮಾರ್ಗದಲ್ಲಿಯೂ ಸಂಚರಿಸುವರು.

೭೫. ಅ ಸಮಯದಲ್ಲಿ ನಕ್ಷತ್ರಗಳೆಲ್ಲವೂ ತಮ್ಮ ತಮ್ಮ ಮಾರ್ಗದಲ್ಲಿಯೇ ಸಂಚರಿಸುವುವು. ಪುಣ್ಯಾತ್ಮರೂ ತೇಜೋರೂಪಿಗಳೂ ಆದ ಸಮಸ್ತ ಗ್ರಹಾಭಿಮಾನಿಗಳೂ ಸ್ವಸ್ಥಾನಗಳಲ್ಲಿಯೇ ಪ್ರಕಾಶಿಸುವರು.

೭೬. ಬ್ರಹ್ಮದೇವನು ಕಲ್ಪಗಳ ಆದಿಯಲ್ಲಿಯೇ ಜ್ಯೋತಿರ್ಮಂಡಲದ ಸ್ಥಾನಗಳನ್ನು ಸೃಷ್ಟಿಸಿರುವನು. ಆ ಗ್ರಹಗಳೆಲ್ಲವೂ ಭೂತಗಳ ಪ್ರಲಯವಾಗುವವರೆಗೂ ಆಯಾ ಸ್ಥಾನಗಳಲ್ಲಿಯೇ ಇರುತ್ತವೆ.

೭೭. ಹೀಗೆಯೇ ಸಕಲ ಮನ್ವಂತರಗಳಲ್ಲಿಯೂ ದೇವತೆಗಳ ಆಯಾ ದೇವಾಲಯಗಳು ಸೃಷ್ಟಿಸಲ್ಪಡುತ್ತವೆ. ದೇವತೆಗಳೂ ಸಹ ತಮ್ಮ ತಮ್ಮ ದೇವಾಲಯಗಳಲ್ಲಿ ಮಹಾ ಪ್ರಲಯಕಾಲದವರೆಗೂ ವಾಸಮಾಡುವರು.

ಅತೀತೈಸ್ತು ಸಹಾತೀತಾ ಭಾವ್ಯಾಭಾವ್ಯೈಃ ಸುರಾಸುರೈಃ ।
ವರ್ತಂತೇ ವರ್ತಮಾನೈಶ್ಚ ಸ್ಥಾನಾನಿ ಸ್ವೈಃ ಸುರೈಃ ಸಹ ॥ ೭೮ ॥

ಅಸ್ಮಿನ್ ಮನ್ವಂತರೇ ಚೈವ ಗ್ರಹಾ ವೈಮಾನಿಕಾಃ ಸ್ಮೃತಾಃ ।
ವಿವಸ್ವಾನದಿತೇಃ ಪುತ್ರಃ ಸೂರ್ಯೋ ವೈವಸ್ವತೇಽಂತರೇ ॥ ೭೯ ॥

ತ್ವಿಷಿಮಾಂ ಧರ್ಮಪುತ್ರಸ್ತು ಸೋಮದೇವೋ ವಸುಃ ಸ್ಮೃತಃ ।
ಶುಕ್ರೋ ದೇವಸ್ತು ವಿಜ್ಞೇಯೋ ಭಾರ್ಗವೋಽಸುರರಾಜಕಃ ॥ ೮೦ ॥

ಬೃಹತ್ತೇಜಾಃ ಸ್ಮೃತೋ ದೇವೋ ದೇವಾಚಾರ್ಯೋಽಂಗಿರಃ ಸುತಃ ।
ಬುಧೋ ಮನೋಹರಶ್ಚೈವ ತ್ವಿಷಿಪುತ್ರಸ್ತು ಸ ಸ್ಮೃತಃ ॥ ೮೧ ॥

---

೭೮. ಆಯಾ ದಿವ್ಯ ಭವನಗಳು ಆಯಾ ದೇವತೆಗಳ ಸಂಗಡವೇ ಕಳೆದು ಹೋಗುತ್ತವೆ. ಮುಂದಿನ ಭಾವಿಯುಗಗಳಲ್ಲಿ ಆಯಾ ದೇವತೆಗಳ ಸಂಗಡವೇ ಉಂಟಾಗುವುವು. ಹೀಗೆ ದೇವಾಸುರರ ದಿವ್ಯಮಂದಿರಗಳು ಈ ವರ್ತಮಾನ ಕಾಲದಲ್ಲಿಯೂ ಅವರ ಜೊತೆಯಲ್ಲಿಯೇ ಸ್ಪಷ್ಟವಾಗುತ್ತವೆ.

೭೯. ಈಗ ನಡೆಯುತಕ್ಕ ವೈವಸ್ವತ ಮನ್ವಂತರದಲ್ಲಿ ಗ್ರಹಗಳೆಲ್ಲವೂ ವಿಮಾನಾರೂಢರಾಗಿರುವರೆಂದು ಪ್ರಖ್ಯಾತಿ ಇದೆ. ಅದರಂತೆ ಈ ವೈವಸ್ವತ ಮನ್ವಂತರದಲ್ಲಿ ಅದಿತೀದೇವಿಯ ಪುತ್ರನಾದ ಸೂರ್ಯನು ವಿವಸ್ವಂತನಾಮಕನಾಗಿರುವನು.

೮೦. ತ್ವಿಷಿಮಂತನಾದ ಧರ್ಮಪುತ್ರನು ಸೋಮದೇವನಾಮಕವಸುವಾಗಿರುವನು. ಅಸುರರ ಗುರುವಾದ ಶುಕ್ರದೇವನಾದರೋ ಭೃಗುಮಹರ್ಷಿಗಳ ಪುತ್ರನಾಗಿ ಉತ್ಪನ್ನನಾಗಿ ಭಾರ್ಗವನೆಂದು ಪ್ರಖ್ಯಾತನಾಗಿರುವನು.

೮೧. ಮಹಾತೇಜಸ್ವಿಯೂ ದೇವತೆಗಳ ಆಚಾರ್ಯನೂ ಆದ ಬೃಹಸ್ಪತಿಯು ಈ ಮನ್ವಂತರದಲ್ಲಿ ಅಂಗಿರಸ ಮಹರ್ಷಿಗಳ ಪುತ್ರನಾಗಿ ಆವಿರ್ಭವಿಸಿರುವನು. ಅತ್ಯಂತ ಸುಂದರನಾದ ಬುಧನು ತ್ವಿಷಿಯ ಪುತ್ರನೆಂದು ಪ್ರಸಿದ್ಧನಾಗಿರುವನು.

ಅಗ್ನಿರ್ವಿಕಲ್ಪಾತ್ ಸಂಜಜ್ಞೇ ಯುವಾಽಸೌ ಲೋಹಿತಾಧಿಪಃ ।
ನಕ್ಷತ್ರ ಋಕ್ಷಗಾಮಿನ್ಯೋ ದಾಕ್ಷಾಯಣ್ಯಃ ಸ್ಮೃತಾಸ್ತು ತಾಃ ॥ ೬೨ ॥

ಸ್ವರ್ಭಾನುಃ ಸಿಂಹಿಕಾಪುತ್ರೋ ಭೂತಸಂತಾಪನೋಽಸುರಃ ।
ಸೋಮರ್ಕ್ಷಗ್ರಹಸೂರ್ಯೇ ತು ಕೀರ್ತಿತಾಸ್ತ್ವಭಿಮಾನಿನಃ ॥ ೬೩ ॥

ಸ್ಥಾನಾನ್ಯೇತಾನ್ಯಥೋಕ್ತಾನಿ ಸ್ಥಾನಿನ್ಯಶ್ಚೈವ ದೇವತಾಃ ।
ಶುಕ್ಲಮಗ್ನಿಮಯಂ ಸ್ಥಾನಂ ಸಹಸ್ರಾಂಶೋರ್ವಿವಸ್ವತಃ ॥ ೬೪ ॥

ಸಹಸ್ರಾಂಶೋ ತ್ವಿಷಃ ಸ್ಥಾನಮಮ್ಮಯಂ ಶುಕ್ಲಮೇವ ಚ ।
ಅಥ ಶ್ಯಾಮಂ ಮನೋಜ್ಞಸ್ಯ ಪಂಚರಶ್ಮೇರ್ಗೃಹಂ ಸ್ಮೃತಂ ॥ ೬೫ ॥

---

೬೨. ತರುಣನಾದ ಮಂಗಳನು ವಿಕಲ್ಪನಾಮಕ ಅಗ್ನಿದೇವನ ಪುತ್ರನಾಗಿ ಜನಿಸಿರುವನು. ನಕ್ಷತ್ರತಾರಕಮಾರ್ಗಗಾಮಿಗಳಾದ ಆ ಅಭಿಮಾನಿ ದೇವತೆಗಳು ಈ ಮನ್ವಂತರದಲ್ಲಿ ದಾಕ್ಷಾಯಣೀದೇವಿಯ ಪುತ್ರರಾಗಿ ಜನಿಸಿರುವರು.

೬೩. ಭೂತಗಳಿಗೆ ದುಃಖಜನಕನೂ ಅಸುರನೂ ಆದ ರಾಹುವು ಸಿಂಹಿಕಾ ಪುತ್ರನಾಗಿ ಉತ್ಪನ್ನನಾದನು. ಈ ರೀತಿಯಾಗಿ ಚಂದ್ರ, ನಕ್ಷತ್ರ, ಗ್ರಹ, ಸೂರ್ಯ ಈ ಗ್ರಹಗಳಿಗೆ ಅಭಿಮಾನಿ ದೇವತೆಗಳನ್ನು ಹೇಳಿರುತ್ತೇನೆ.

೬೪. ಈ ರೀತಿಯಾಗಿ ಜ್ಯೋತಿರ್ಮಂಡಲದ ಸ್ಥಾನಗಳನ್ನೂ, ಆಯಾ ಸ್ಥಾನಾಭಿಮಾನಿ ದೇವತೆಗಳನ್ನೂ ಕ್ರಮವಾಗಿ ನಿರೂಪಿಸಿರುತ್ತೇನೆ. ಸಾವಿರಾರು ರಶ್ಮಿಗಳಿರುವ ಸೂರ್ಯದೇವನಿಗೆ ಶುಭ್ರರೂಪವಾದ ಅಗ್ನಿಯೇ ಸ್ಥಾನವಾಗಿದೆ.

೬೫. ಸಹಸ್ರಕಿರಣಗಳಿರುವ ಸೂರ್ಯನಿಗೆ ಕಾಂತಿಯುಕ್ತವೂ ಶುಭ್ರವೂ ಆದ ಜಲವೇ ಮತ್ತೊಂದು ಸ್ಥಾನವಾಗಿದೆ. ಮನೋಹರನೂ ಪಂಚಕಿರಣವುಳ್ಳವನೂ ಆದ ರಾಹುವಿನ ಆಲಯವು ಅಂಧಕಾರಮಯವಾಗಿದೆಯೆಂದು ಜ್ಞಾನಿಗಳು ಹೇಳುವರು.

ಶುಕ್ರಸ್ಯಾಪ್ಯಮ್ಮಯಂ ಸ್ಥಾನಂ ಸದ್ಮ ಷೋಡಶರಶ್ಮಿವತ್ |
ನವರಶ್ಮೇಸ್ತು ಯೂನೋ ಹಿ ಲೋಹಿತಸ್ಥಾನಮಮ್ಮಯಂ || ೮೬ ||

ಹರಿಶ್ಚಾಪ್ಯಂ ಬೃಹಚ್ಚಾಪಿ ದ್ವಾದಶಾಂಶೋರ್ಬೃಹಸ್ಪತೇಃ |
ಅಷ್ಟರಶ್ಮೇರ್ಗೃಹಂ ಪ್ರೋಕ್ತಂ ಕೃಷ್ಣಂ ವೃದ್ಧಸ್ಯ ಅಮ್ಮಯಂ || ೮೭ ||

ಸ್ವರ್ಭಾನೋಸ್ತಾಮಸಂ ಸ್ಥಾನಂ ಭೂತಸಂತಾಪನಾಲಯಂ |
ವಿಜ್ಞೇಯಾಸ್ತಾರಕಾಃ ಸರ್ವಾಸ್ತ್ವಮ್ಮಯಾಸ್ತ್ವೇಕರಶ್ಮಯಃ || ೮೮ ||

ಆಶ್ರಯಾಃ ಪುಣ್ಯಕೀರ್ತೀನಾಂ ಸುಶುಕ್ಲಾಶ್ಚೈವ ವರ್ಣತಃ |
ಘನತೋಯಾತ್ಮಿಕಾ ಜ್ಞೇಯಾಃ ಕಲ್ಪಾದೌ ವೇದನಿರ್ಮಿತಾಃ || ೮೯ ||

---

೮೬. ಹದಿನಾರು ಕಿರಣಗಳಿರುವ ಶುಕ್ರನ ಭವನವೂ ಕೂಡ ಜಲಮಯವಾದ ಸ್ಥಾನವೇ ಆಗಿದೆ. ಒಂಭತ್ತು ರಶ್ಮಿಗಳಿರುವ ತರುಣನಾದ ಅಂಗಾರಕನ ಸ್ಥಾನವೂ ಕೂಡ ಜಲವೇ ಆಗಿದೆ.

೮೭. ದ್ವಾದಶಾಂಶಗಳಿರುವ ಬೃಹಸ್ಪತಿಯ ಸ್ಥಾನವಾದರೋ ಅತಿವಿಶಾಲವೂ ಹಸರೂ ಆದ ಜಲಮಯವಾಗಿದೆ. ಅಷ್ಟಕಿರಣಗಳಿರುವ ಬುಧನ ಆಲಯವಾದರೋ ಕೃಷ್ಣಮಯವಾದ ಜಲವೇ ಆಗಿದೆ.

೮೮. ಭೂತಸಂತಾಪಕರನಾದ ರಾಹುವಿನ ಸ್ಥಾನವಾದರೋ ಅಂಧಕಾರ ಮಯವಾಗಿದೆ. ಈ ರೀತಿಯಾಗಿ ಸಮಸ್ತ ನಕ್ಷತ್ರಗಳ ಸ್ಥಾನಗಳೂ ಸಹ ಜಲಮಯ ವಾಗಿಯೂ, ಸಮಾನ ಕಾಂತಿಯುಕ್ತವಾಗಿಯೂ ಇವೆಯೆಂದು ತಿಳಿಯಬೇಕು.

೮೯. ಶುಭದಾಯಕಗಳಾದ ಗ್ರಹಗಳ ಮಂದಿರಗಳು ಅತ್ಯಂತ ಪ್ರಕಾಶಕ ವಾಗಿಯೂ, ನಿಬಿಡವಾದ ಜಲಮಯವಾಗಿಯೂ, ಕಲ್ಪಾದಿಯಲ್ಲಿ ದೇವನಿರ್ಮಿತ ವಾಗಿಯೂ ಇವೆಯೆಂದು ತಿಳಿಯಬೇಕು.

ಉಚ್ಚತ್ವಾದ್ದೃಶ್ಯತೇ ಶೀಘ್ರಮಭಿವ್ಯಕ್ತೈರ್ಗಭಸ್ತಿಭಿಃ ।
ತಥಾ ದಕ್ಷಿಣಮಾರ್ಗಸ್ಥೋ ನೀಚವೀಥೀ ಸಮಾಶ್ರಿತಃ ॥ ೯೦ ॥

ಭೂಮಿಲೇಖಾವೃತಃ ಸೂರ್ಯಃ ಪೂರ್ಣಮಾವಾಸ್ಯಯೋಸ್ತಥಾ ।
ನ ದೃಶ್ಯತೇ ಯಥಾಕಾಲಂ ಶೀಘ್ರತೋಽಸ್ತಮುಪೈತಿ ಚ ॥ ೯೧ ॥

ತಸ್ಮಾದುತ್ತರಮಾರ್ಗಸ್ಥೋ ಹ್ಯಮಾವಾಸ್ಯಾಂ ನಿಶಾಕರಃ ।
ದೃಶ್ಯತೇ ದಕ್ಷಿಣೇ ಮಾರ್ಗೇ ನಿಯಮಾದ್ದೃಶ್ಯತೇ ನ ಚ ॥ ೯೨ ॥

ಜ್ಯೋತಿಷಾಂ ಗತಿಯೋಗೇನ ಸೂರ್ಯಾಚಂದ್ರಮಸಾವುಭೌ ।
ಸಮಾನಕಾಲಾಸ್ತಮಯೌ ವಿಷುವತ್ಸು ಸಮೋದಯೌ ॥ ೯೩ ॥

---

೯೦. ಸೂರ್ಯನು ಅತ್ಯುನ್ನತನಾಗಿರುವುದರಿಂದಲೂ, ತನ್ನ ಕಿರಣಗಳು ಸರ್ವತ್ರ ವ್ಯಾಪ್ತವಾಗಿರುವುದರಿಂದಲೂ ಅತಿಶೀಘ್ರವಾಗಿ ಕಾಣಲ್ಪಡುತ್ತಾನೆ. ಇದರಂತೆ ದಕ್ಷಿಣಾಯನದಲ್ಲಿ ನಾಗವೀಥಿಯನ್ನು ಆಶ್ರಯಿಸಿರುವುದರಿಂದ ಶೀಘ್ರವಾಗಿ ಅಸ್ತವನ್ನು ಹೊಂದುವನು.

೯೧. ಸೂರ್ಯನು ಅಮಾವಾಸ್ಯೆ ಪೌರ್ಣಿಮೆಗಳಲ್ಲಿ ಭೂಲೇಖೆಯಿಂದ ಆವೃತನಾಗಿ ಸಕಾಲದಲ್ಲಿ ಸರಿಯಾಗಿ ಕಾಣುವುದಿಲ್ಲ. ಸ್ವಲ್ಪಕಾಲದನಂತರ ಕಾಣಿಸುವನು. ಮತ್ತು ಶೀಘ್ರವಾಗಿ ಅಸ್ತವನ್ನು ಹೊಂದುವನು.

೯೨. ಸೂರ್ಯನು ದಕ್ಷಿಣಮಾರ್ಗದಲ್ಲಿರುವಾಗ ಚಂದ್ರನು ಉತ್ತರಮಾರ್ಗದಲ್ಲಿದ್ದು ಅಮಾವಾಸ್ಯೆಯಲ್ಲಿ ಕಲಾಮಾತ್ರನಾಗಿ ಕಾಣಿಸುವನು. ಚಂದ್ರನು ದಕ್ಷಿಣಮಾರ್ಗದಲ್ಲಿರುವಾಗ ನಿಯತವಾಗಿ ಕಾಣಿಸುವುದಿಲ್ಲ.

೯೩. ಜ್ಯೋತಿರ್ಮಂಡಲದ ಗತಿವಿಶೇಷದಿಂದ ಸೂರ್ಯಚಂದ್ರರಿಬ್ಬರೂ ವಿಷುವತ್ಕಾಲಗಳಲ್ಲಿ ಸಮವಾಗಿ ಉದಯಾಸ್ತಮಯಗಳನ್ನು ಹೊಂದುವರು. ಇಬ್ಬರೂ ಏಕಕಾಲದಲ್ಲಿ ಉದಯವನ್ನೂ ಅಸ್ತವನ್ನೂ ಹೊಂದುವರು.

ಉತ್ತರಾಸು ಚ ವೀಥೀಷು ವ್ಯಂತರಾಸ್ತಮಯೋದಯೌ ।
ಪೂರ್ಣಾಮಾವಾಸ್ಯಯೋರ್ಜ್ಞೇಯೌ ಜ್ಯೋತಿಶ್ಚಕ್ರಾನುವರ್ತಿನೌ ॥ ೯೪ ॥

ದಕ್ಷಿಣಾಯನಮಾರ್ಗಸ್ಥೋ ಯದಾ ಭವತಿ ರಶ್ಮಿವಾನ್ ।
ತದಾ ಸರ್ವಗ್ರಹಾಣಾಂ ಸ ಸೂರ್ಯೋಽಧಸ್ತಾತ್ ಪ್ರಸರ್ಪತಿ ॥ ೯೫ ॥

ವಿಸ್ತೀರ್ಣಂ ಮಂಡಲಂ ಕೃತ್ವಾ ತಸ್ಯೋರ್ಧ್ವಂ ಚರತೇ ಶಶೀ ।
ನಕ್ಷತ್ರಮಂಡಲಂ ಕೃತ್ಸ್ನಂ ಸೋಮಾದೂರ್ಧ್ವಂ ಪ್ರಸರ್ಪತಿ ॥ ೯೬ ॥

ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾದೂರ್ಧ್ವಂ ಬೃಹಸ್ಪತಿಃ ।
ತಸ್ಮಾಚ್ಛನೈಶ್ಚರಶ್ಚೋರ್ಧ್ವಂ ತಸ್ಮಾತ್ಸಪ್ತರ್ಷಿಮಂಡಲಂ ॥
ಋಷೀಣಾಂ ಚೈವ ಸಪ್ತಾನಾಂ ಧ್ರುವ ಊರ್ಧ್ವಂ ವ್ಯವಸ್ಥಿತಃ ॥ ೯೭ ॥

---

೯೪. ಸೂರ್ಯ ಚಂದ್ರರಿಬ್ಬರೂ ಉತ್ತರಾವೀಥಿಗಳಲ್ಲಿರುವಾಗ ಉದಯಾಸ್ತಮಯಗಳು ಭಿನ್ನಕಾಲಗಳಲ್ಲಿ ಆಗುತ್ತವೆ. ಜ್ಯೋತಿರ್ಮಂಡಲದ ಸ್ಥಿತಿಗತಿಗಳಿಗನುಸಾರವಾಗಿ ಪೂರ್ಣಿಮಾ ಅಮಾವಾಸ್ಯೆಗಳನ್ನು ತಿಳಿಯಬೇಕು.

೯೫. ಸೂರ್ಯನು ಯಾವಾಗ ದಕ್ಷಿಣಾಯನದಲ್ಲಿರುವನೋ ಆಗ ಸರ್ವಗ್ರಹಗಳ ಕೆಳಭಾಗದಲ್ಲಿ ಸೂರ್ಯನು ಸಂಚರಿಸುವನು. ಸೂರ್ಯನು ಸರ್ವಗ್ರಹಗಳ ಕೆಳಭಾಗದಲ್ಲಿ ಸಂಚಾರಮಾಡುವನು.

೯೬. ಚಂದ್ರನು ವಿಸ್ತೀರ್ಣಮಂಡಲನಾಗಿ ಸೂರ್ಯನ ಮೇಲ್ಭಾಗದಲ್ಲಿ ಸಂಚರಿಸುವನು. ನಕ್ಷತ್ರಮಂಡಲಗಳೆಲ್ಲವೂ ಚಂದ್ರನ ಮೇಲ್ಭಾಗದಲ್ಲಿ ಸಂಚರಿಸುತ್ತವೆ.

೯೭. ಬುಧನು ನಕ್ಷತ್ರಮಂಡಲಗಿಂತಲೂ ಉನ್ನತವಾದ ಪ್ರದೇಶದಲ್ಲಿ ಸಂಚರಿಸುವನು. ಬೃಹಸ್ಪತಿಯು ಬುಧನಿಗಿಂತಲೂ ಉನ್ನತವಾಗಿರುವನು. ಅವನಿಗಿಂತಲೂ ಶನೈಶ್ಚರನು ಉನ್ನತನಾಗಿಯೂ, ಅವನಿಗಿಂತಲೂ ಸಪ್ತರ್ಷಿಗಳ ಮಂಡಲವು ಊರ್ಧ್ವವಾಗಿಯೂ ಇರುವುವು. ಇಂತಹ ಸಪ್ತರ್ಷಿಮಂಡಲಕ್ಕಿಂತಲೂ ಧ್ರುವನು ಉನ್ನತನಾಗಿರುವನು.

ದ್ವಿಗುಣೇಷು ಸಹಸ್ರೇಷು ಯೋಜನಾನಾಂ ಶಕೇಷು ಚ ।
ತಾರಾಗ್ರಹಾಂತರಾಣಿ ಸ್ಯುರುಪರಿಷ್ಟಾದ್ಯಥಾಕ್ರಮಂ ॥ ೯೮ ॥

ಗ್ರಹಾಶ್ಚ ಚಂದ್ರಸೂರ್ಯೌ ತು ದಿವಿ ದಿವ್ಯೇನ ತೇಜಸಾ ।
ನಿತ್ಯಮೃಕ್ಷೇಷು ಯುಜ್ಯಂತಿ ಗಚ್ಛಂತಿ ನಿಯಮಕ್ರಮಾತ್ ॥ ೯೯ ॥

ಗ್ರಹನಕ್ಷತ್ರಸೂರ್ಯಾಸ್ತು ನೀಚೋಚ್ಚಮೃದ್ವ್ಯವಸ್ಥಿತಾಃ ।
ಸಮಾಗಮೇ ಚ ಭೇದೇ ಚ ಪಶ್ಯಂತಿ ಯುಗಪತ್ ಪ್ರಜಾಃ ॥ ೧೦೦ ॥

ಪರಸ್ಪರ ಸ್ಥಿತಾ ಹ್ಯೇತೇ ಯುಜ್ಯಂತೇ ಚ ಪರಸ್ಪರಂ ।
ಅಸಂಕರೇಣ ವಿಜ್ಞೇಯಸ್ತೇಷಾಂ ಯೋಗಸ್ತು ವೈ ಬುಧೈಃ ॥ ೧೦೧ ॥

---

೯೮. ಹೀಗೆ ಒಂದು ಗ್ರಹಕ್ಕಿಂತಲೂ ಮತ್ತೊಂದು ಗ್ರಹವು ಎರಡುಲಕ್ಷ ಯೋಜನಗಳಷ್ಟು ಉನ್ನತವಾಗಿರುತ್ತದೆಯೆಂದು ತಿಳಿಯಬೇಕು. ಹೀಗೆ ನಕ್ಷತ್ರಗಳು ಗ್ರಹಗಳು ಒಂದಕ್ಕೆ ಮತ್ತೊಂದು ಕ್ರಮವಾಗಿ ಊರ್ಧ್ವಭಾಗಗಳಲ್ಲಿರುತ್ತವೆ.

೯೯. ಗ್ರಹಗಳೂ ಚಂದ್ರ ಸೂರ್ಯರೂ ನಿತ್ಯವೂ ಆಕಾಶದಲ್ಲಿ ದಿವ್ಯತೇಜಸ್ಸಿನಿಂದ ನಿಯಮಾನುಸಾರವಾಗಿ ಪರಸ್ಪರ ಸಂಸರ್ಗವನ್ನು ಹೊಂದುತ್ತವೆ. ಇವರಿಂದ ನಕ್ಷತ್ರ ಗ್ರಹಾದಿಗಳು ಸೂರ್ಯನ ದಿವ್ಯತೇಜಸ್ಸನ್ನು ಪಡೆದು ಹೊಳೆಯುತ್ತವೆ. ಮತ್ತು ಮುಂದಕ್ಕೆ ಚಲಿಸುತ್ತವೆ.

೧೦೦. ಹೀಗೆ ಗ್ರಹಗಳು, ನಕ್ಷತ್ರಗಳು, ಸೂರ್ಯನು ಕೂಡ ನೀಚೋಚ್ಚಭಾವದಿಂದ ವ್ಯವಸ್ಥಿತವಾಗಿರುತ್ತವೆ. ಅವು ಪರಸ್ಪರ ಸೇರುವಾಗಲೂ ಬೇರೆಬೇರೆಯಾಗಿರುವಾಗಲೂ ಕೂಡ ಪ್ರಜೆಗಳು ಏಕತ್ರ ಮಿಳಿತರಾಗಿರುವಂತೆ ನೋಡುವರು.

೧೦೧. ಈ ಗ್ರಹಾದಿಗಳು ಬೇರೆಬೇರೆಯಾಗಿದ್ದರೂ ಪರಸ್ಪರವಾಗಿ ಸೇರುತ್ತವೆ ಅವು ಹಾಗೆ ಅನ್ಯೋನ್ಯವಾಗಿ ಸೇರಿದರೂ ಸಹ ಪರಸ್ಪರ ಸೌಕರ್ಯವಿಲ್ಲದೆ ಪ್ರತ್ಯೇಕವಾಗಿವೆಯೆಂದು ಜ್ಞಾನಿಗಳು ತಿಳಿಯುವರು.

ಇತ್ಯೇಷ ಸನ್ನಿವೇಶೋ ವಃ ಪೃಥಿವ್ಯಾಂ ಜ್ಯೋತಿಷಸ್ಯ ಚ ।
ದ್ವೀಪಾನಾಮುದಧೀನಾಂ ಚ ಪರ್ವತಾನಾಂ ತಥೈವ ಚ ॥ ೧೦೨ ॥

ವರ್ಷಾಣಾಂ ಚ ನದೀನಾಂ ಚ ಯೇಷು ತೇಷು ವಸಂತಿ ವೈ ।
ಏತೇ ಚೈವ ಗ್ರಹಾಃ ಪೂರ್ವಂ ನಕ್ಷತ್ರೇಷು ಸಮುತ್ಥಿತಾಃ ॥ ೧೦೩ ॥

ವಿವಸ್ವಾನದಿತೇಃ ಪುತ್ರಃ ಸೂರ್ಯೋ ವೈ ಚಾಕ್ಷುಷೇಂತರೇ ।
ವಿಶಾಖಾಸ್ತು ಸಮುತ್ಪನ್ನೋ ಗ್ರಹಾಣಾಂ ಪ್ರಥಮೋ ಗ್ರಹಃ ॥ ೧೦೪ ॥

ತ್ವಿಷಿಮಾ ಧರ್ಮಪುತ್ರಸ್ತು ಸೋಮೋ ವಿಶ್ವಾವಸುಸ್ತಥಾ ।
ಶೀತರಶ್ಮಿಃ ಸಮುತ್ಪನ್ನಃ ಕೃತ್ತಿಕಾಸು ನಿಶಾಕರಃ ॥ ೧೦೫ ॥

ಷೋಡಶಾರ್ಚಿರ್ಭೃಗೋಃ ಪುತ್ರಃ ಶುಕ್ರಃ ಸೂರ್ಯಾದನಂತರಂ ।
ತಾರಾಗ್ರಹಾಣಾಂ ಪ್ರವರಸ್ತಿಷ್ಯಕ್ಷೇತ್ರೇ ಸಮುತ್ಥಿತಾಃ ॥ ೧೦೬ ॥

---

೧೦೨. ಭೂಮಿಯಲ್ಲಿ ದ್ವೀಪಗಳು ಸಮುದ್ರಗಳು, ಪರ್ವತಗಳು ಹೇಗೆ ಭಿನ್ನ ಭಿನ್ನಗಳಾಗಿವೆಯೋ, ಹಾಗೆಯೆ, ಆಕಾಶದಲ್ಲಿಯೂ ಕೂಡ ಜ್ಯೋತಿರ್ಮಂಡಲವು ಪ್ರತ್ಯೇಕ ಪ್ರತ್ಯೇಕವಾಗಿದೆಯೆಂದು ತಿಳಿಯಬೇಕು.

೧೦೩. ಮೇಲೆ ಹೇಳಿದ ಸಮುದ್ರಾದಿಗಳು, ವರ್ಷಗಳು ಮತ್ತು ನದಿಗಳು ಇವುಗಳನ್ನೂ, ಇವುಗಳಲ್ಲಿ ವಾಸಿಸುವ ದೇವಋಷಿಯೇ ಮೊದಲಾದವರನ್ನೂ ಕೂಡ ತಿಳಿಸಿರುತ್ತೇನೆ. ಈಗ ಪ್ರಖ್ಯಾತವಾದ ಗ್ರಹಗಳೆಲ್ಲವೂ ಪೂರ್ವದಲ್ಲಿ ನಕ್ಷತ್ರಗಳಿಂದ ಜನ್ಯವಾಗಿವೆಯೆಂದು ಜ್ಞಾನಿಗಳು ಹೇಳುವರು.

೧೦೪-೧೦೫. ವಿವಸ್ವಂತನು ಚಾಕ್ಷುಷಮನ್ವಂತರದಲ್ಲಿ ಅದಿತಿಯ ಪುತ್ರನಾದ ಸೂರ್ಯನಾಗಿ ಅವತರಿಸಿದನು. ಅವನು ವಿಶಾಖೆಯಲ್ಲಿ ಉತ್ಪನ್ನನಾಗಿ ಗ್ರಹಗಳಲ್ಲಿ ಅಗ್ರಗಣ್ಯನಾಗಿರುವನು. ಕಾಂತಿಯುಕ್ತನೂ ಧರ್ಮಪುತ್ರನೂ ಆದ ವಿಶ್ವಾವಸುವು ಸೋಮನಾಗಿ ಜನಿಸಿರುವನು. ಆ ಚಂದ್ರನೇ ಕೃತ್ತಿಕಾಸಮುತ್ಪನ್ನನೂ ನಿಶಾಕರನೂ ಆಗಿರುವನೆಂದು ತಿಳಿಯಬೇಕು.

೧೦೬. ಹದಿನಾರು ಕಲೆಗಳುಳ್ಳವನೂ ಭೃಗುಮಹರ್ಷಿಯ ಪುತ್ರನೂ ಆದ ಶುಕ್ರನು ಸೂರ್ಯನ ತರುವಾಯ ನಕ್ಷತ್ರ ಗ್ರಹಗಳಲ್ಲಿ ಶ್ರೇಷ್ಠನಾಗಿಯೂ, ತಿಷ್ಯ ಕ್ಷೇತ್ರದಲ್ಲಿ ಅವತರಿಸದವನಾಗಿಯೂ ಇರುವನು.

ಗ್ರಹಶ್ಚಾಂಗಿರಸಃ ಪುತ್ರೋ ದ್ವಾದಶಾರ್ಚಿರ್ಬೃಹಸ್ಪತೇಃ ।
ಫಾಲ್ಗುನೀಷು ಸಮುತ್ಪನ್ನಃ ಸರ್ವಾಸು ಚ ಜಗದ್ಗುರುಃ ॥ ೧೦೭ ॥

ನವಾರ್ಚಿರ್ಲೋಹಿತಾಂಗಸ್ತು ಪ್ರಜಾಪತಿಸುತೋ ಗ್ರಹಃ ।
ಆಷಾಢಾಸ್ವಿಹ ಪೂರ್ವಾಸು ಸಮುತ್ಪನ್ನ ಇತಿ ಶ್ರುತಿಃ ॥ ೧೦೮ ॥

ರೇವತೀಷ್ವೇಹ ಸಪ್ತಾರ್ಚಿಸ್ತಥಾ ಸೌರಶನೈಶ್ಚರಃ ।
ರೋಹಿಣೀಷು ಸಮುತ್ಪನ್ನೋ ಗ್ರಹೌ ಚಂದ್ರಾರ್ಕಮರ್ದನೌ ॥ ೧೦೯ ॥

ಏತೇ ತಾರಾಗ್ರಹಾಶ್ಚೈವ ಬೋದ್ಧವ್ಯಾ ಭಾರ್ಗವಾದಯಃ ।
ಜನ್ಮನಕ್ಷತ್ರಪೀಡಾಸು ಯಾಂತಿ ವೈ ಗುಣ್ಯತಾಂ ಯತಃ ॥
ಸ್ಪೃಶಂತೇ ತೇನ ದೋಷೇಣ ತತಸ್ತಾ ಗ್ರಹಭಕ್ತಿಷು ॥ ೧೧೦ ॥

---

೧೦೭. ಹನ್ನೆರಡು ಕಲೆಗಳುಳ್ಳವನೂ, ಅಂಗಿರಸ ಮಹರ್ಷಿಯ ಪುತ್ರನೂ, ಲೋಕಗುರುವೂ ಆದ ಬೃಹಸ್ಪತಿಯು ಫಾಲ್ಗುಣಮಾಸದ ಹುಣ್ಣಿಮೆಯಲ್ಲಿ, ಜನಿಸಿದನು.

೧೦೮. ಒಂಭತ್ತು ಕಲೆಗಳುಳ್ಳವನೂ, ಬ್ರಹ್ಮಪುತ್ರನೂ ಆದ ಅಂಗಾರಕ ಗ್ರಹವು ಪೂರ್ವಾಷಾಢ ನಕ್ಷತ್ರದಲ್ಲಿ ಸಂಭವಿಸಿರುವನೆಂದು ಶ್ರುತಿಗಳು ಸಾರುತ್ತವೆ. (ಕೇಳುತ್ತೇವೆ).

೧೦೯. ಸಪ್ತ ಕಿರಣಗಳುಳ್ಳವನೂ ಲೋಕಸಂತಾಪಕರನೂ ಆದ ಶನೇಶ್ವರನು ರೇವತೀ ನಕ್ಷತ್ರದಲ್ಲಿ ಜನಿಸಿರುವನು. ಚಂದ್ರ ಸೂರ್ಯರ ವಿರೋಧಿಗಳಾದ ರಾಹು ಕೇತುಗಳೆಂಬ ಗ್ರಹಗಳು ರೋಹಿಣೀ ನಕ್ಷತ್ರದಲ್ಲಿ ಜನಿಸಿರುವರೆಂದು ಜ್ಞಾನಿಗಳು ಹೇಳುವರು.

೧೧೦. ಈ ಶುಕ್ರನೇ ಮೊದಲಾದವರೇ ತಾರಾಗ್ರಹಗಳಾಗಿರುತ್ತಾರೆ. ಈಗ್ರಹಗಳು ಜನ್ಮನಕ್ಷತ್ರದಲ್ಲಿ ಬಂದರೆ ಪೀಡಾತುರರಾಗಿರುವುದರಿಂದ ಪೂಜ್ಯರಾಗಿರುವರು. ಆ ದೋಷಗಳ ಪರಿಹಾರಕ್ಕಾಗಿ ಶಾಂತ್ಯಾದಿಗಳನ್ನು ಮಾಡಿದರೆ ಶುಭಫಲಪ್ರದರಾಗುವರು.

ಸರ್ವಗ್ರಹಾಣಾಮೇತೇಷಾಮಾದಿರಾದಿತ್ಯ ಉಚ್ಯತೇ ।
ತಾರಾಗ್ರಹಾಣಾಂ ಶಕ್ರಸ್ತು ಕೇತೂನಾಂಚೈವ ಧೂಮವಾನ್ ॥ ೧೧೧ ॥

ಧ್ರುವಃ ಕಾಲೋ ಗ್ರಹಾಣಾಂ ತು ವಿಭಕ್ತಾನಾಂ ಚತುರ್ದಿಶಂ ।
ನಕ್ಷತ್ರಾಣಾಂ ಶ್ರವಿಷ್ಠಾ ಸ್ಯಾದಯನಾನಾಂ ತಥೋತ್ತರಂ ॥ ೧೧೨ ॥

ವರ್ಷಾಣಾಂಚಾಪಿ ಪಂಚಾನಾಮಾದ್ಯಃ ಸಂವತ್ಸರಃ ಸ್ಮೃತಃ ।
ಋತೂನಾಂ ಶಿಶಿರಾಚಾಪಿ ಮಾಸಾನಾಂ ಮಾಘ ಏವ ಚ ॥ ೧೧೩ ॥

ಪಕ್ಷಾಣಾಂ ಶುಕ್ಲ ಪಕ್ಷಸ್ತು ತಿಥೀನಾಂ ಪ್ರತಿಪತ್ತಥಾ ।
ಅಹೋರಾತ್ರವಿಭಾಗಾನಾಮಹಶ್ಚಾಪಿ ಪ್ರಕೀರ್ತಿತಂ ॥ ೧೧೪ ॥

ಮುಹೂರ್ತಾನಾಂ ತಥೈವಾದಿರ್ಮುಹೂರ್ತೋ ರುದ್ರದೈವತಃ ।
ಅಕ್ಷ್ಣೋಶ್ಚಾಪಿ ನಿಮೇಷಾದಿಃ ಕಾಲಃ ಕಾಲವಿದೋ ಮತಃ ॥ ೧೧೫ ॥

---

೧೧೧. ಸೂರ್ಯನು ಈ ಸಮಸ್ತ ಗ್ರಹಗಳಲ್ಲಿ ಆದಿಯೂ, ಶುಕ್ರನು ತಾರಾಗ್ರಹಗಳ ಮಧ್ಯದಲ್ಲಿ ಅಗ್ರಗಣ್ಯನೂ, ಧ್ವಜಪತಾಕೆಯುಳ್ಳವರಲ್ಲಿ ಅಗ್ನಿಯೂ. ಅಗ್ರೇಸರರು ಆಗಿರುವರು.

೧೧೨-೧೧೪. ಧ್ರುವನು ನಾಲ್ಕು ದಿಕ್ಕುಗಳಲ್ಲಿಯೂ ವ್ಯಾಪ್ತವಾಗಿರುವ ಗ್ರಹಗಳಿಗೆ ನಿಯಾಮಕನಾಗಿರುವನು. ಇದರಂತೆ ನಕ್ಷತ್ರಗಳಲ್ಲಿ ಶ್ರವಣ ನಕ್ಷತ್ರವೂ, ಅಯನಗಳಲ್ಲಿ ಉತ್ತರಾಯಣವೂ, ಪಂಚವರ್ಷಗಳಲ್ಲಿ ಆದಿಯ ಸಂವತ್ಸರವೂ, ಋತುಗಳಲ್ಲಿ ಶಿಶಿರಋತುವೂ, ಮಾಸಗಳಲ್ಲಿ ಮಾಘಮಾಸವೂ, ಪಕ್ಷಗಳಲ್ಲಿ ಶುಕ್ಲ ಪಕ್ಷವೂ, ತಿಥಿಗಳಲ್ಲಿ ಪಾಡ್ಯಮಿತಿಥಿಯೂ, ಅಹೋರಾತ್ರಿಗಳಲ್ಲಿ ಅಹಸ್ಸೂ ಉತ್ತಮ ವಾಗಿವೆಯೆಂದು ತಿಳಿಯಬೇಕು.

೧೧೫. ಮತ್ತು ಮುಹೂರ್ತಗಳಲ್ಲಿ ರುದ್ರದೇವತಾಕವಾದ ಮುಹೂರ್ತವೂ, ಕಾಲಸಮುದಾಯದಲ್ಲಿ ನೇತ್ರನಿಮೇಷಕಾಲವೂ, ಆದಿಯಾಗಿಯೂ ಉತ್ಕೃಷ್ಟ ವಾಗಿಯೂ ಇರುತ್ತವೆಯೆಂದು ತಿಳಿಯಬೇಕು.

**ಶ್ರವಣಾಂತಂ ಶ್ರವಿಷ್ಠಾದಿ ಯುಗಂ ಸ್ಯಾತ್ ಪಂಚವಾರ್ಷಿಕಂ |**
**ಭಾನೋರ್ಗತಿವಿಶೇಷೇಣ ಚಕ್ರವತ್ ಪರಿವರ್ತತೇ || ೧೧೬ ||**

**ದಿವಾಕರಃ ಸ್ಮೃತಸ್ತಸ್ಮಾತ್ಕಾಲಸ್ತಂ ವಿದ್ಧಿ ಚೇಶ್ವರಂ |**
**ಚತುರ್ವಿಧಾನಾಂ ಭೂತಾನಾಂ ಪ್ರವರ್ತಕನಿವರ್ತಕಃ || ೧೧೭ ||**

**ಇತ್ಯೇಷ ಜ್ಯೋತಿಷಾಮೇವ ಸನ್ನಿವೇಶೋಽರ್ಥನಿಶ್ಚಯಾತ್ |**
**ಲೋಕಸಂವ್ಯವಹಾರಾರ್ಥಮೀಶ್ವರೇಣ ವಿನಿರ್ಮಿತಃ || ೧೧೮ ||**

**ಉತ್ಪನ್ನಃ ಶ್ರವಣೇನಾಸೌ ಸಂಕ್ಷಿಪ್ತಶ್ಚ ಧ್ರುವೇ ತಥಾ |**
**ಸರ್ವತೋಽಂತೇಷು ವಿಸ್ತೀರ್ಣೋ ವೃಕ್ಷಾಕಾರಾ ಇತಿ ಸ್ಥಿತಿಃ || ೧೧೯ ||**

---

೧೧೬. ಶ್ರವಿಷ್ಠಾದಿಯಾಗಿ ಶ್ರವಣಾಂತವಾದ ಪಂಚವರ್ಷಗಳಿಗೆ ಯುಗವೆಂಬ ಸಂಜ್ಞೆಯುಂಟಾಗಿದೆ. ಸೂರ್ಯನ ಗಮನವಿಶೇಷದಿಂದ ದಿನಮಾಸಾದಿಗಳುಂಟಾಗುವುವು. ಪ್ರತಿಪತ್ತಾದಿ ದಿವಸಗಳೂ, ಚೈತ್ರಾದಿ ಮಾಸಗಳೂ ಸೂರ್ಯನ ಗತಿವಿಶೇಷದಿಂದ ಚಕ್ರಾಕಾರವಾಗಿ ತಿರುಗುತ್ತವೆ.

೧೧೭. ಆದುದರಿಂದ ಸೂರ್ಯನು ಕಾಲರೂಪನೆಂದು ತಿಳಿಯಬೇಕು. ಇಂತಹ ಸೂರ್ಯನು ಚತುರ್ವಿಧಗಳಾದ ಭೂತಗಳ ಸೃಷ್ಟಿಸಂಹಾರಗಳಿಗೆ ಕಾರಣನಾಗಿರುವನೆಂದು ಸ್ಮೃತಿಗಳು ಸಾರಿಹೇಳುತ್ತವೆ.

೧೧೮. ಈ ರೀತಿಯಾದ ತೇಜೋಮಂಡಲವನ್ನು ಪರಮೇಶ್ವರನು ಲೋಕದ ಸದ್ವ್ಯವಹಾರಾರ್ಥವಾಗಿಯೂ, ಅರ್ಥನಿರ್ಣಯಕ್ಕಾಗಿಯೂ, ಪ್ರಜಾಹಿತಕ್ಕಾಗಿಯೂ ಸೃಷ್ಟಿಸಿರುವನೆಂದು ತಿಳಿಯಬೇಕು.

೧೧೯. ಸೂರ್ಯನು ಶ್ರವಣದಲ್ಲಿ ಉತ್ಪನ್ನನಾಗಿ, ಧ್ರುವನಲ್ಲಿ ಸಂಕ್ಷಿಪ್ತನಾಗಿ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪ್ತನಾಗಿರುವುದರಿಂದ ವೃಕ್ಷಾಕಾರನಾಗಿರುವನು.

ಬುದ್ಧಿಪೂರ್ವಂ ಭಗವತಾ ಕಲ್ಪಾದೌ ಸಂಪ್ರಕೀರ್ತಿತಃ ।
ಸಾಶ್ರಯಃ ಸೋಭಿಮಾನೀ ಚ ಸರ್ವಸ್ಯ ಜ್ಯೋತಿರಾತ್ಮಕಃ ॥
ವಿಶ್ವರೂಪಃ ಪ್ರಧಾನಸ್ಯ ಪರಿಣಾಮೋಯಮದ್ಭುತಃ ॥ ೧೨೦ ॥

ನೈವ ಶಕ್ಯಂ ಪ್ರಸಂಖ್ಯಾತುಂ ಯಾಥಾತಥ್ಯೇನ ಕೇನಚಿತ್ ।
ಗತಾಗತಂ ಮನುಷ್ಯೇಷು ಜ್ಯೋತಿಷಾಂ ಮಾಂಸಚಕ್ಷುಷಾ ॥ ೧೨೧ ॥

ಆಗಮಾದನುಮಾನಾಂ ಚ ಪ್ರತ್ಯಕ್ಷಾದುಪಪತ್ತಿತಃ ।
ಪರೀಕ್ಷ್ಯ ನಿಪುಣಂ ಭಕ್ತ್ಯಾ ಶ್ರದ್ಧಾತವ್ಯಂ ವಿಪಶ್ಚಿತಾ ॥ ೧೨೨ ॥

---

೧೨೦. ಪರಮ ದಯಾಳುವಾದ ಶ್ರೀ ಭಗವಂತನು ಕಲ್ಪದ ಪ್ರಾರಂಭದಲ್ಲಿ ಮನಃಪೂರ್ವಕವಾಗಿಯೂ, ಸೂರ್ಯನನ್ನು ಸಮಸ್ತ ಜ್ಯೋತಿರ್ಗಣಗಳೂ ಆಶ್ರಯನನ್ನಾಗಿಯೂ, ಅಭಿಮಾನಿಯನ್ನಾಗಿಯೂ, ಕಾಂತಿದಾಯಕನನ್ನಾಗಿಯೂ ಏರ್ಪಡಿಸಿದನು. ಈ ಸೂರ್ಯನು ವಿಶ್ವರೂಪವಾದ ಪ್ರಕೃತಿಯ ಅದ್ಭುತವಾದ ಪರಿಣಾಮಿಯಾಗಿರುವನು.

೧೨೧. ಮನುಷ್ಯರು ಈ ಚರ್ಮಚಕ್ಷುಸ್ಸುಗಳಿಂದ ಜ್ಯೋತಿರ್ಮಂಡಲದ ಗಮನಾಗಮನಗಳನ್ನು ಯಥಾಸ್ಥಿತವಾಗಿ ತಿಳಿಯಲು ಸುತರಾಂ ಸಾಧ್ಯವಿಲ್ಲವೆಂದು ತಿಳಿಯಬೇಕೆಂದು ದೊಡ್ಡವರು ಹೇಳುವರು.

೧೨೨. ಜ್ಞಾನಿಯಾದ ಪುರುಷನು ಪ್ರತ್ಯಕ್ಷ ಅನುಮಾನ ಆಗಮಯುಕ್ತಿಗಳು ಇವುಗಳಿಂದ ಯೋಚಿಸಿ, ಅತಿಕುಶಲತೆಯಿಂದ ಪರೀಕ್ಷಿಸಿ, ಗ್ರಂಥಕರ್ತೃಗಳಲ್ಲಿರುವ ಭಕ್ತಿಯಿಂದ ಈ ವಿಷಯಗಳನ್ನು ನಂಬಬೇಕು.

**ಚಕ್ಷುಃ ಶಾಸ್ತ್ರಂ ಜಲಂ ಲೇಖ್ಯಂ ಗಣಿತಂ ಬುದ್ಧಿಸತ್ತಮಾಃ |**
**ಪಂಚೈತೇ ಹೇತವೋ ಜ್ಞೇಯಾ ಜ್ಯೋತಿರ್ಗಣ ವಿಚಿಂತತೇ || ೧೨೩ ||**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಜ್ಯೋತಿಃಸನ್ನಿವೇಶೋ" ನಾಮ ತ್ರಿಪಂಚಾಶೋಽಧ್ಯಾಯಃ**

---

೧೨೩. ಎಲೈ ಜ್ಞಾನಿಗಳಾದ ಮುನಿವರ್ಯರೇ, ಜ್ಯೋತಿರ್ಮಂಡಲವನ್ನು ತಿಳಿಯುವ ವಿಷಯದಲ್ಲಿ ನೇತ್ರ, ಶಾಸ್ತ್ರ, ಜಲ, ಪ್ರಾಚೀನ ಲೇಖನ ಮತ್ತು ಗಣಿತ ಇವು ಐದೂ ಕಾರಣಗಳಿಂದು ತಿಳಿಯಬೇಕೆಂದು ಸೂತಪುರಾಣೀಕನು ಮುನಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಜ್ಯೋತಿರ್ಗಣ ನಿರೂಪಣವೆಂಬ ಐವತ್ತಮೂರನೆಯ ಅಧ್ಯಾಯವು ಸಮಾಪ್ತವಾದುದು.

# ಐವತ್ತಮೂರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯವಲ್ಲಿ, ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳ ಉತ್ಪತ್ತಿ, ಸ್ಥಾನ ವಸಾನ, ಸ್ಥಿತಿಗತಿಗಳು ನಿರೂಪಿತವಾಗಿವೆ. ಅಗ್ನಿಯು, ದಿವ್ಯ, ಭೌತಿಕ, ಪಾರ್ಥಿವವೆಂದು ಮೂರು ವಿಧವಾಗಿದೆ. ರಾತ್ರಿಯ ಕಾಲದಲ್ಲಿ ಸೂರ್ಯನ ರಶ್ಮಿಗಳು ಅಗ್ನಿಯನ್ನು ಪ್ರವೇಶಿಸಿ ಪುನಃ ಉದಯವಾದ ಕೂಡಲೇ ಸೂರ್ಯನನ್ನು ಪ್ರವೇಶಿಸುವುವು. ಸೂರ್ಯನ ಸಹಸ್ರಾರು ಕಿರಣಗಳು ಸಮುದ್ರಾದಿಗಳಲ್ಲಿರುವ ಜಲವನ್ನು ಸ್ವೀಕರಿಸಿ ಸಹಸ್ರಭಾಗದಷ್ಟು ಅಧಿಕವಾಗಿ ಸುರಿಸುತ್ತವೆ. ಅವುಗಳಲ್ಲಿ ವಂದನಾ, ವಂದ್ಯಾ, ಋತನಾ, ನೂತನಾ, ಅಮೃತ ಇವೇ ಮೊದಲಾದ ನಾನ್ನೂರು ಕಿರಣಗಳು ಮಾತ್ರ ಮಳೆಯನ್ನು ಸುರಿಸುತ್ತವೆ. ಶುಕ್ಲಾದಿನಾಮಕಗಳಾದ ಮುನ್ನೂರು ಕಿರಣಗಳು ಶಾಖವನ್ನುಂಟುಮಾಡುತ್ತವೆ. ಮಿಕ್ಕ ಮುನ್ನೂರು ರಶ್ಮಿಗಳು ಹಿಮಜನಕಗಳಾಗಿರುತ್ತವೆ. ಹೀಗೆ ಸಹಸ್ರ ಕಿರಣಗಳೂ ವೃಷ್ಟಿ, ಉಷ್ಣ, ಹಿಮಜನಕಗಳಾಗಿವೆ. ಚಂದ್ರನು ನಕ್ಷತ್ರಗಳಿಗೆ ಅಧಿಪತಿಯು. ಸೂರ್ಯನು ಗ್ರಹಾಧಿಪತಿಯು. ಮಿಕ್ಕ ಗ್ರಹಗಳು ಕಾಮ ರೂಪಿಗಳಾಗಿಯೂ ಇವೆ. ಸೂರ್ಯನು ಅಗ್ನಿಯಿಂದಲೂ, ಚಂದ್ರನು ಜಲದಿಂದಲೂ ಉತ್ಪನ್ನರಾಗಿರುವರು. ಸ್ಕಂದನು ಅಂಗಾರಕನಾಗಿಯೂ, ನಾರಾಯಣನು ಬುಧ ನಾಗಿಯೂ, ರುದ್ರನೇ ಶನೇಶ್ವರನಾಗಿಯೂ ಜನಿಸಿರುವರು. ಸರ್ವಲೋಕೇಶನಾದ ಭಗವಂತನೇ ಎಲ್ಲಕ್ಕೂ ಮೂಲಕಾರಣನಾಗಿರುವನು. ಕ್ಷಣಲವಾದಿ ಸರ್ವಕಾಲವೂ ಸೂರ್ಯನ ಅಧೀನದಲ್ಲಿವೆ. ಸೂರ್ಯನಿಂದಲೇ ಸಕಲ ಲೋಕವ್ಯವಹಾರವೂ ಉಂಟಾಗಿರುವುವು. ಸೂರ್ಯಮಂಡಲವು ಒಂಭತ್ತು ಸಹಸ್ರಯೋಜನ ವಿಸ್ತೀರ್ಣ ವಾಗಿರುವುದು. ಚಂದ್ರಮಂಡಲವು ಸೂರ್ಯಮಂಡಲಕ್ಕಿಂತಲೂ ದ್ವಿಗುಣಾಧಿಕ ವಾಗಿರುವುದು. ಈ ಗ್ರಹಗಳು ಪ್ರಲಯದವರೆಗೂ ಸ್ಥಾಯಿಯಾಗಿರುವುವು. ಈ ಗ್ರಹಗಳೆಲ್ಲವೂ ಸೂರ್ಯನ ಅಧೀನವಾಗಿವೆ. ಶ್ರೀಭಗವಂತನು ಲೋಕಕಲ್ಯಾಣಕ್ಕಾಗಿ ಸೂರ್ಯಾದಿಗ್ರಹಗಳನ್ನು ಸೃಷ್ಟಿಸಿರುವನು. ಈ ಲೌಕಿಕನೇತ್ರದಿಂದ ಅವುಗಳನ್ನು ತಿಳಿಯಲು ಸಾಧ್ಯವಿಲ್ಲ. ಜ್ಞಾನವೃಷ್ಟಿಯಿಂದಲೂ, ವೇದಾದಿಪ್ರಮಾಣದಿಂದಲೂ, ಯುಕ್ತಿಯಿಂದಲೂ ತಿಳಿಯಬಹುದು. ಎಂಬ ವಿಷಯಗಳು ನಿರೂಪಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಚತುರ್ಪಂಚಾಶೋಽಧ್ಯಾಯಃ

॥ ಋಷಯ ಊಚುಃ ॥

**ತಸ್ಮಿನ್ ದೇಶೇ ಮಹಾಪುಣ್ಯಮೇತದಾಖ್ಯಾನಮುತ್ತಮಂ ।**
**ವೃತ್ತಂ ಬ್ರಹ್ಮಪುರೋಗಾಣಾಂ ತಸ್ಮಿನ್ ಕಾಲೇ ಮಹಾದ್ಯುತೇ ॥**
**ಏತದಾಖ್ಯಾಹಿ ನಃ ಸಂಮ್ಯಗ್ ಯಥಾವೃತ್ತಂ ತಪೋಧನ ॥ ೧ ॥**

॥ ಸೂತ ಉವಾಚ ॥

**ಯಥಾ ಶ್ರುತಂ ಮಯಾ ಪೂರ್ವಂ ವಾಯುನಾ ಜಗದಾಯುನಾ ।**
**ಕಥ್ಯಮಾನಂ ದ್ವಿಜಶ್ರೇಷ್ಠಾಃ ಸತ್ರೇ ವರ್ಷಸಹಸ್ರಕೇ ॥ ೨ ॥**

---

### ಐವತ್ತನಾಲ್ಕನೆಯ ಅಧ್ಯಾಯವು

೧. ನೈಮಿಷಾರಣ್ಯವಾಸಿಗಳಾದ ಮುನಿಗಳು ಸೂತಮುನಿಗಳನ್ನು ಕುರಿತು— ಎಲೈ ತಪೋಧನನಾದ ಸೂತಮುನಿಯೇ, ಬ್ರಹ್ಮಾದಿದೇವತೆಗಳ ಸ್ಥಿತಿಗತಿಗಳು ಯಾವ ದೇಶಕಾಲಗಲ್ಲಿ ಹೇಗೆ ನಡೆದುವು. ಬ್ರಾಹ್ಮಣಾದಿವರ್ಣಗಳು ಯಜ್ಞಯಾಗಾದಿ ಕರ್ಮಗಳನ್ನು ಮಾಡಲು ಯಾವ ದೇಶ, ಯಾವ ಕಾಲಗಳು ಪುಣ್ಯದಾಯಕವಾಗಿಯೂ, ಮಹಾಫಲಪ್ರದವಾಗಿಯೂ ಇವೆ. ಮಹಾಜ್ಞಾನಿಯಾದ ತಾವು ಇದನ್ನು ತಿಳಿದಿರುವುದ ರಿಂದ ದಯವಿಟ್ಟು ನಮಗೆ ತಿಳಿಸಬೇಕೆಂದು ಕೇಳಿಕೊಂಡರು.

೨-೩. ಸೂತಮುನಿಯು ತಿಳಿಸಿದನು :—ಎಲೈ ಮುನಿವರ್ಯರೇ, ಸಹಸ್ರ ವರ್ಷಗಳಕಾಲ ನಡೆದ ಸತ್ರಯಾಗದಲ್ಲಿ ಜಗತ್ಪ್ರಾಣದಾಯಕನಾದ ವಾಯುದೇವ ನಿಂದ ಯಾವ ವಿಷಯಗಳನ್ನು ನಾನು ಹೇಗೆ ಕೇಳಿರುವೆನೋ, ಆ ವಿಷಯಗಳನ್ನು

ನೀಲತಾ ಯೇನ ಕಂಠಸ್ಯ ದೇವದೇವಸ್ಯ ಶೂಲಿನಃ ।
ತದಹಂ ಕೀರ್ತಯಿಷ್ಯಾಮಿ ಶೃಣುಧ್ವಂ ಶಂಸಿತವ್ರತಾಃ ॥ ೩ ॥

ಉತ್ತರೇ ಶೈಲರಾಜಸ್ಯ ಸರಾಂಸಿ ಸರಿತೋಽಹ್ರದಾಃ ।
ಪುಣ್ಯೋದ್ಯಾನೇಷು ತೀರ್ಥೇಷು ದೇವತಾಯತನೇಷು ಚ ॥
ಗಿರಿ ಶೃಂಗೇಷು ತುಂಗೇಷು ಗಹ್ವರೋಪವನೇಷು ಚ ॥ ೪ ॥

ದೇವಭಕ್ತಾ ಮಹಾತ್ಮಾನೋ ಮುನಯಃ ಶಂಸಿತವ್ರತಾಃ ।
ಸ್ತುವಂತಿ ಚ ಮಹಾದೇವಂ ಯತ್ರ ಯತ್ರ ಯಥಾವಿಧಿ ॥ ೫ ॥

ಋಗ್ಯಜುಃ ಸಾಮವೇದೈಶ್ಚ ನೃತ್ಯಗೀತಾರ್ಚನಾದಿಭಿಃ ।
ಓಂಕಾರೇಣ ನಮಸ್ಕಾರೈರರ್ಚಯಂತಿ ಸದಾ ಶಿವಂ ॥ ೬ ॥

---

ಯಥಾಸ್ಥಿತವಾಗಿ ಹಾಗೆಯೇ ಹೇಳುವೆನು ಕೇಳಿರಿ. ಮತ್ತು ದೇವೋತ್ತಮನೂ, ಶೂಲಪಾಣಿಯೂ ಆದ ಈಶ್ವರನಿಗೆ ನೀಲಕಂಠತ್ವವು ಬಂದ ಕಾರಣವನ್ನೂ ಸಹ ನಾನು ನಿಮಗಾಗಿ ನಿರೂಪಿಸುವೆನು. ಪ್ರಖ್ಯಾತವ್ರತಗಳುಳ್ಳ ನೀವು ಈ ವಿಷಯಗಳನ್ನು ಕೇಳಿರೆಂದನು.

೪-೫. ಪರ್ವತೋತ್ತಮವೂ, ಹಿಮಕ್ಕೆ ಆಶ್ರಯವೂ, ಆದ ಪರ್ವತದ ಉತ್ತರ ದಿಗ್ಭಾಗದಲ್ಲಿ ಪುಣ್ಯಪ್ರದವಾದ ಸರೋವರಗಳೂ, ನದಿಗಳೂ, ಮಹಾಪ್ರದಗಳೂ, ಪುಣ್ಯೋದ್ಯಾನಗಳೂ, ಮಹಾತೀರ್ಥಗಳೂ, ದೇವಾಲಯಗಳೂ, ಉನ್ನತವಾದ ಗಿರಿಶಿಖರಗಳೂ, ಗವಿಗಳೂ, ಉಪವನಗಳೂ, ವಿಶೇಷವಾಗಿಯೂ, ಪ್ರಖ್ಯಾತವಾಗಿಯೂ ಇರುತ್ತವೆ. ಅವುಗಳಲ್ಲಿ ವಾಸಮಾಡುವ ದೇವಭಕ್ತರೂ, ಮಹಾತ್ಮರೂ, ನಿಯಮವುಳ್ಳವರೂ ಆದ ಮಹರ್ಷಿಗಳು ಶಾಸ್ತ್ರೋಕ್ತಪ್ರಕಾರವಾಗಿ ದೇವದೇವನಾದ ಪರಮೇಶ್ವರನನ್ನು ಹೊಗಳುತ್ತಾ ಇರುವರು. ಇದನ್ನೂ ನಿಮಗಾಗಿ ತಿಳಿಸುವೆನೆಂದನು.

೬. ಆ ಮುನಿಗಳು ಋಗ್ಯಜುಸ್ಸಾಮಗಳೆಂಬ ವೇದಗಳಿಂದಲೂ, ಪ್ರಣವದಿಂದಲೂ ಹೊಗಳಿ, ನೃತ್ಯಗೀತ, ಅರ್ಚನ, ವಂದನ ಇವುಗಳಿಂದಲೂ ಈಶ್ವರನನ್ನು ಯಾವಾಗಲೂ ಸೇವಿಸುತ್ತಾರೆ.

ಪ್ರವೃತ್ತೇ ಜ್ಯೋತಿಷಾಂ ಚಕ್ರೇ ಮಧ್ಯವ್ಯಾಪ್ತೇ ದಿವಾಕರೇ ।
ದೇವತಾ ನಿಯತಾತ್ಮಾನಃ ಸರ್ವೇ ತಿಷ್ಠಂತಿ ತಾಂ ಕಥಾಂ ॥
ಅಥ ನಿಯಮಪ್ರವೃತ್ತಾತ್ಮಾ ಪ್ರಾಣಶೇಷವ್ಯವಸ್ಥಿತಾಃ ॥ ೭ ॥

ನಮಸ್ತೇ ನೀಲಕಂಠಾಯ ಇತ್ಯುವಾಚ ಸದಾಗತಿಃ ।
ತಚ್ಛ್ರುತ್ವಾ ಭಾವಿತಾತ್ಮಾನೋ ಮುನಯಃ ಶಂಸಿತವ್ರತಾಃ ॥
ವಾಲಖಿಲ್ಯೇತಿ ವಿಖ್ಯಾತಾಃ ಪತಂಗಸಹಚಾರಿಣಃ ॥ ೮ ॥

ಅಷ್ಟಾಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಂ ।
ತಸ್ಮಾತ್ ಪೃಚ್ಛಂತಿ ವೈ ವಾಯುಂ ವಾಯುಪರ್ಣಾಂಬುಭೋಜನಾಃ ॥ ೯ ॥

॥ ಋಷಯ ಊಚುಃ ॥

ನೀಲಕಂಠೇತಿ ಯತ್ ಪ್ರೋಕ್ತಂ ತ್ವಯಾ ಪವನಸತ್ತಮ ।
ಏತದ್ಗುಹ್ಯಂ ಪವಿತ್ರಾಣಾಂ ಪುಣ್ಯಂ ಪುಣ್ಯಕೃತಾಂ ವರಾಃ ॥ ೧೦ ॥

---

೭. ಜ್ಯೋತಿರ್ಮಂಡಲವು ಸಂಚರಿಸುತ್ತಿರುವಾಗ ಸೂರ್ಯನು ಆಕಾಶದ ಮಧ್ಯಭಾಗವನ್ನು ಹೊಂದುವನು. ಆಗ ಸಮಸ್ತರಾದ ದೇವತೆಗಳು ಸಮಾಧಾನ ಚಿತ್ತದಿಂದ ಈಶ್ವರನ ಕಥೆಯನ್ನು ಕೇಳುತ್ತಿದ್ದರು. ಅಂತಹ ಸಮಯದಲ್ಲಿ ವಾಯುದೇವ, ಶೇಷದೇವಾದಿಗಳು ಈಶ್ವರನನ್ನು ಹೊಗಳುತ್ತಿದ್ದರು. ವಾಯುದೇವನು ನೀಲಕಂಠನಿಗೆ ನಮಸ್ಕಾರವೆಂಬುದಾಗಿ ಹೇಳಿದನು.

೮-೯. ಆಗ ಜಿತೇಂದ್ರಿಯರೂ, ಪ್ರಖ್ಯಾತನಿಯಮವುಳ್ಳವರೂ, ವಾಲಖಿಲ್ಯರೆಂದು ಪ್ರಸಿದ್ಧರೂ, ಪತಂಗ ಮಹರ್ಷಿಗಳ ಮಿತ್ರರೂ ಎಂಭತ್ತೆಂಟುಸಹಸ್ರ ಸಂಖ್ಯಾಕರೂ, ಊರ್ಧ್ವರೇತಸ್ಕರೂ, ವಾಯು, ಪರ್ಣ, ಜಲ ಮಾತ್ರ ಭಕ್ಷಕರೂ, ನಿಯಮಿಗಳೂ ಆದ ಮಹರ್ಷಿಗಳು ವಾಯುದೇವನನ್ನು ಪ್ರಾರ್ಥಿಸಿದರು.

೧೦. ಮಹರ್ಷಿಗಳು ಹೇಳಿದರು :—ವಾಯೂತ್ತಮನಾದ ಎಲೈ ವಾಯುದೇವನೇ, ನೀನು ಹೇಳಿದಂಥ ನೀಲಕಂಠವೆಂಬ ನಾಮವು ಅತ್ಯಂತ ರಹಸ್ಯವಾಗಿಯೂ, ಪವಿತ್ರರಾದವರಿಗೆ ಪವಿತ್ರದಾಯಕವಾಗಿಯೂ, ಪುಣ್ಯಾತ್ಮರಿಗೆ ವರರೂಪವಾಗಿಯೂ ಇರುತ್ತದೆ.

ತದ್ವಯಂ ಶ್ರೋತುಮಿಚ್ಛಾಮಸ್ತ್ವತ್ಪ್ರಸಾದಾತ್ಪ್ರಭಂಜನ ।
ನೀಲತಾ ಯೇನ ಕಂಠಸ್ಯ ಕಾರಣೇನಾಂಬಿಕಾಪತೇಃ ॥ ೧೧ ॥

ಶ್ರೋತುಮಿಚ್ಛಾಮಹೇ ಸಂಯಕ್ ತವ ವಕ್ತ್ರಾದ್ವಿಶೇಷತಃ ।
ಯಾವದ್ವಾಚಃ ಪ್ರವರ್ತಂತೇ ಸಾರ್ಥಾಸ್ತಾಶ್ಚ ತ್ವಯೇರಿತಾಃ ॥ ೧೨ ॥

ವರ್ಣಸ್ಥಾನಗತೇ ವಾಯೌ ವಾಗ್ಭಿಧಿಃ ಸಂಪ್ರವರ್ತತೇ ।
ಜ್ಞಾನಂ ಪೂರ್ವಮಥೋತ್ಸಾಹಸ್ತ್ವತ್ತೋ ವಾಯೋ ಪ್ರವರ್ತತೇ ॥ ೧೩ ॥

ತ್ವಯಿ ನಿಷ್ಪಂದಮಾನೇ ತು ಶೇಷಾ ವರ್ಣಪ್ರವೃತ್ತಯಃ ।
ಯತ್ರ ವಾಚೋ ನಿವರ್ತಂತೇ ದೇಹಬಾಧಾಶ್ಚ ದುರ್ಲಭಾಃ ॥ ೧೪ ॥

ತತ್ರಾಪಿ ತೇಽಸ್ತಿ ಸದ್ಭಾವಃ ಸರ್ವಗಸ್ತ್ವಂ ಸದಾನಿಲ ।
ನಾನ್ಯಃ ಸರ್ವಗತೋ ದೇವಸ್ತ್ವದೃತೇಽಸ್ತಿ ಸಮೀರಣ ॥ ೧೫ ॥

---

೧೧-೧೨. ಎಲೈ ವಾಯುದೇವನೇ, ನಿನ್ನನುಗ್ರಹದಿಂದ ನಾವು ಅದನ್ನು ಕೇಳಬೇಕೆಂದು ಬಯಸುತ್ತೇನೆ. ಪಾರ್ವತೀಪತಿಯಾದ ಮಹೇಶ್ವರನ ಕಂಠವು ಯಾವ ಕಾರಣದಿಂದ ಕಪ್ಪಾಗಿರುವುದು. ಅದನ್ನು ನಾವು ನಿನ್ನ ಮುಖದಿಂದಲೇ ಬಂದಿರುವು ದೆಂದು ವಿಶೇಷವಾಗಿ ಕೇಳಲಿಚ್ಛಿಸುತ್ತೇವೆ. ನೀನು ಯಾವ ಯಾವ ಸಂಗತಿಗಳನ್ನು ಹೇಳುತ್ತೀಯೋ ಅವೆಲ್ಲವೂ ನಿಜವಾಗಿಯೇ ಇರುತ್ತವೆ. ಆದುದರಿಂದ ನಿರೂಪಿಸ ಬೇಕೆಂದು ಬೇಡಿಕೊಂಡರು.

೧೩. ಎಲೈ ವಾಯುದೇವನೇ, ನೀನು ವರ್ಣೋತ್ಪತ್ತಿಸ್ಥಾನಗಳಲ್ಲಿ ನಿಂತು ಆಯಾ ವರ್ಣಗಳನ್ನು ಸೃಷ್ಟಿಸುತ್ತೀಯೆ. ನಿನ್ನ ಪ್ರೇರಣೆಯಿಂದಲೇ ಸಕಲ ವರ್ಣಗಳೂ ಉಚ್ಚರಿಸಲ್ಪಡುತ್ತವೆ. ಮತ್ತು ಜ್ಞಾನಪೂರ್ವಕವಾದ ಉತ್ಸಾಹವೂ ಸಹ ನಿನ್ನಿಂದಲೇ ಉಂಟಾಗುತ್ತದೆ ಎಂದರು.

೧೪-೧೫. ಎಲೈ ಪ್ರಭಂಜನನೇ, ನೀನು ಚಲಿಸಿದರೆ ಸಮಸ್ತ ವರ್ಣಗಳೂ ಉದ್ಭವಿಸುತ್ತವೆ. ನೀನು ಚಲಿಸದಿದ್ದರೆ ವಾಗ್ವ್ಯಾಪಾರವೇ ನಿಂತುಹೋಗುವುದು. ಮತ್ತು ದೇಹವೂ ನಿಲ್ಲದೆ ಬಿದ್ದುಹೋಗುವುದು. ಆ ದೇಹದ ಒಳಗೂ ಸಹ ನೀನು ನಿಂತು ಪ್ರೇರಿಸುತ್ತೀಯೆ. ನೀನು ಸರ್ವಜಾಗದಲ್ಲಿಯೂ ಸದಾಕಾಲದಲ್ಲಿಯೂ ಇರು ತ್ತೀಯೆ. ಎಲೈ ದೇವನೇ, ನಿನ್ನನ್ನು ಬಿಟ್ಟರೆ ಸರ್ವವ್ಯಾಪಿಯಾದ ದೇವನು ಮತ್ತೊಬ್ಬ ನಿಲ್ಲ. ನೀನೊಬ್ಬನೇ ಸರ್ವವ್ಯಾಪಿಯಾಗಿರುತ್ತೀಯೆ ಎಂದು ಋಷಿಗಳು ಹೊಗಳಿದರು.

ಏಷ ವೈ ಜೀವಲೋಕಸ್ತೇ ಪ್ರತ್ಯಕ್ಷಃ ಸರ್ವತೋಽನಿಲ ।
ವೇತ್ಥ ವಾಚಸ್ಪತಿಂ ದೇವಂ ಮನೋನಾಯಕಮೀಶ್ವರಂ ॥ ೧೬ ॥

ಬ್ರೂಹಿ ತತ್ಕಂಠದೇಶಸ್ಯ ಕಿಂ ಕೃತಾ ರೂಪವಿಕ್ರಿಯಾ ।
ಶ್ರುತ್ವಾ ವಾಕ್ಯಂ ತತಸ್ತೇಷಾಮೃಷೀಣಾಂ ಭಾವಿತಾತ್ಮನಾಂ ॥
ಪ್ರತ್ಯುವಾಚ ಮಹಾತೇಜಾ ವಾಯುರ್ಲೋಕನಮಸ್ಕೃತಃ ॥ ೧೭ ॥

॥ ವಾಯುರುವಾಚ ॥

ಪುರಾ ಕೃತಯುಗೇ ವಿಪ್ರೋ ವೇದನಿರ್ಣಯತತ್ಪರಃ ।
ವಸಿಷ್ಠೋ ನಾಮ ಧರ್ಮಾತ್ಮಾ ಮಾನಸೋ ವೈ ಪ್ರಜಾಪತೇಃ ॥ ೧೮ ॥

ಪಪ್ರಚ್ಛ ಕಾರ್ತಿಕೇಯಂ ವೈ ಮಯೂರವರವಾಹನಂ ।
ಮಹಿಷಾಸುರನಾರೀಣಾಂ ನಯನಾಂಜನತಸ್ಕರಂ ॥ ೧೯ ॥

---

೧೬. ಎಲೈ ಅನಿಲೋತ್ತಮನೇ, ಈ ಸಮಸ್ತ ಜೀವಲೋಕವೂ ನಿನಗೆ ಪ್ರತ್ಯಕ್ಷವಾಗಿಯೇ ಇರುತ್ತದೆ. ಇಂತಹ ಸರ್ವವ್ಯಾಪಿಯಾದ ನೀನು ವಾಕ್ಪತಿಯೂ, ಮನೋನಿಯಾಮಕನೂ, ಐಶ್ವರ್ಯವಂತನೂ ಆದ ಮಹಾದೇವನನ್ನು ತಿಳಿಯುತ್ತೀಯೆ ಎಂದರು.

೧೭. ಎಲೈ ವಾಯುದೇವನೇ, ಪರಮೇಶ್ವರನ ಕಂಠವನ್ನು ಕಪ್ಪಗೆ ವಿಕಾರವನ್ನಾಗಿ ಯಾರು ಮಾಡಿದರು. ಅದರ ಕಾರಣವಾದರೂ ಯಾವುದಿರಬಹುದು ತಿಳಿಸಬೇಕೆಂದು ಕೇಳಿದರು. ಲೋಕನಮಸ್ಕೃತನೂ, ಮಹಾತೇಜಸ್ವಿಯೂ ಆದ ವಾಯುದೇವನು ಮಹಾತ್ಮರಾದ ಆ ಋಷಿಗಳ ಮಾತನ್ನು ಕೇಳಿ ಪ್ರತ್ಯುತ್ತರವನ್ನು ಕೊಟ್ಟನು.

೧೮-೨೧. ವಾಯುದೇವನು ಹೇಳಿದನು :—ಎಲೈ ಮುನಿವರ್ಯರೇ, ಕೃತಯುಗದ ಪೂರ್ವಭಾಗದಲ್ಲಿ ಬ್ರಹ್ಮದೇವನ ಮಾನಸಪುತ್ರನೂ, ಧರ್ಮಾತ್ಮನೂ, ವೇದಾರ್ಥನಿರ್ಣಾಯಕನೂ, ವಿಪ್ರೋತ್ತಮನೂ ಆದ ವಸಿಷ್ಠಮುನಿಯು ಮಯೂರವಾಹನನೂ, ಮಹಿಷಾಸುರನನ್ನು ಸಂಹರಿಸಿ ಅವರ ಸ್ತ್ರೀಯರ ನೇತ್ರಗಳಲ್ಲಿ

ಮಹಾಸೇನಂ ಮಹಾತ್ಮಾನಂ ಮೇಘಸ್ತನಿತನಿಃಸ್ವನಂ ।
ಉಮಾಮನಃಪ್ರಹರ್ಷೇಣ ಬಾಲಕಂ ಛದ್ಮರೂಪಿಣಂ ॥ ೨೦ ॥

ಕ್ರೌಂಚಜೀವಿತಹರ್ತಾರಂ ಪಾರ್ವತೀಹೃದಿ ನಂದನಂ ।
ವಸಿಷ್ಠಃ ಪೃಚ್ಛತೇ ಭಕ್ತ್ಯಾ ಕಾರ್ತಿಕೇಯಂ ಮಹಾಬಲಂ ॥ ೨೧ ॥

॥ ವಸಿಷ್ಠ ಉವಾಚ ॥

ನಮಸ್ತೇ ಹರನಂದಾಯ ಉಮಾಗರ್ಭ ನಮೋಸ್ತು ತೇ ।
ನಮಸ್ತೇ ಅಗ್ನಿಗರ್ಭಾಯ ಗಂಗಾಗರ್ಭ ನಮೋಸ್ತು ತೇ ॥ ೨೨ ॥

ನಮಸ್ತೇ ಶರಗರ್ಭಾಯ ನಮಸ್ತೇ ಕೃತ್ತಿಕಾಸುತ ।
ನಮೋ ದ್ವಾದಶನೇತ್ರಾಯ ಷಣ್ಮುಖಾಯ ನಮೋಸ್ತು ತೇ ॥ ೨೩ ॥

ನಮಸ್ತೇ ಶಕ್ತಿಹಸ್ತಾಯ ದಿವ್ಯಘಂಟಾಪತಾಕಿನೇ ।
ಏವಂ ಸ್ತುತ್ವಾ ಮಹಾಸೇನಂ ಪಪ್ರಚ್ಛ ಶಿಖಿವಾಹನಂ ॥ ೨೪ ॥

---

ಜಲವನ್ನುಂಟುಮಾಡಿ ಕಾಡಿಗೆಯವನ್ನು ಅಳಿಸಿಹೋಗುವಂತೆ ಮಾಡಿದವನೂ, ಮಹಾಸೇನಾಪತಿಯೂ, ಮಹಾತ್ಮನೂ, ಮೇಘದಂತೆ ಗಂಭೀರಧ್ವನಿಯುಳ್ಳವನೂ, ಉಮಾದೇವಿಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ಕಪಟವಾದ ಬಾಲರೂಪವನ್ನು ಧರಿಸಿದವನೂ, ಕ್ರೌಂಚಾಸುರನಾಶಕನೂ, ಪಾರ್ವತಿಗೆ ಆನಂದಜನಕನೂ, ಮಹಾಬಲಿಷ್ಠನೂ ಆದ ಷಣ್ಮುಖನನ್ನು ಭಕ್ತಿಯಿಂದ ಕೇಳಿದನು.

೨೨. ವಸಿಷ್ಠಮುನಿಯು ಕೇಳಿದನು:—ಪರಮೇಶ್ವರನ ಪ್ರಿಯಪುತ್ರನೂ, ಉಮಾಗರ್ಭಸಂಭೂತನೂ, ಅಗ್ನಿಗರ್ಭಸಂಭತನೂ, ಗಂಗಾಪುತ್ರನೂ ಆದ ಕುಮಾರ ಸ್ವಾಮಿಗೆ ನಮಸ್ಕಾರವು.

೨೩-೨೪. ಮತ್ತು ಶರವಣದಲ್ಲಿ ಜನಿಸಿದವನೂ, ಕೃತ್ತಿಕಾಸಂಭೂತನೂ, ದ್ವಾದಶನೇತ್ರವುಳ್ಳವನೂ, ಷಣ್ಮುಖನೂ, ಶಕ್ತ್ಯಾಯುಧವನ್ನು ಹಸ್ತದಲ್ಲಿ ಧರಿಸಿದ ವನೂ, ದಿವ್ಯವಾದ ಘಂಟಾಪತಾಕೆಗಳುಳ್ಳವನೂ ಆದ ಕುಮಾರನಿಗೆ ನಮಸ್ಕಾರಗಳು ಎಂದು ಮಹಾಸೇನನನ್ನು ಹೊಗಳಿ ಶಿಖಿವಾಹನನಾದ ಕುಮಾರನನ್ನು ಕೇಳಿದನು.

ಯದೇತದ್ದೃಶ್ಯತೇ ವರ್ಣಂ ಶುಭಂ ಶುಭ್ರಾಂಜನಪ್ರಭಂ ।
ತತ್ಕಿಮರ್ಥಂ ಸಮುತ್ಪನ್ನಂ ಕಂಠೇ ಕುಂದೇಂದು ಸಂಪ್ರಭೇ ॥ ೨೫ ॥

ಏತದಾಪ್ತಾಯ ಭಕ್ತಾಯ ದಾಂತಾಯ ಬ್ರೂಹಿ ಪೃಚ್ಛತೇ ।
ಕಥಾಂ ಮಂಗಲಸಂಯುಕ್ತಾಂ ಪವಿತ್ರಾಂ ಪಾಪನಾಶಿನೀಂ ॥
ಮತ್ಪ್ರಿಯಾರ್ಥಂ ಮಹಾಭಾಗ ವಕ್ತುಮರ್ಹಸ್ಯಶೇಷತಃ ॥ ೨೬ ॥

ಶ್ರುತ್ವಾ ವಾಕ್ಯಂ ತತಸ್ತಸ್ಯ ವಸಿಷ್ಠಸ್ಯ ಮಹಾತ್ಮನಃ ।
ಪ್ರತ್ಯುವಾಚ ಮಹಾತೇಜಾಃ ಸುರಾರಿಬಲಸೂದನಃ ॥ ೨೭ ॥

ಶೃಣುಷ್ವ ವದತಾಂ ಶ್ರೇಷ್ಠ ಕಥ್ಯಮಾನಂ ವಚೋ ಮಮ ।
ಉಮೋತ್ಸಂಗನಿವಿಷ್ಟೇನ ಮಯಾ ಪೂರ್ವಂ ಯಥಾ ಶ್ರುತಂ ॥ ೨೮ ॥

---

೨೫–೨೬. ಎಲೈ ಕುಮಾರಸ್ವಾಮಿಯೇ, ಪರಮೇಶ್ವರನ ಜಾಜೀಪುಷ್ಪ ಮತ್ತು ಚಂದ್ರ ಇವರಿಗೆ ಸಮಾನವಾದ ಕಾಂತಿಯುಳ್ಳ ಶುಭ್ರವಾದ ಕಂಠದಲ್ಲಿ ಕಾಡಿಗೆಯಂತೆ ಅತಿ ಕಪ್ಪಾದ ವರ್ಣವು ಏತಕ್ಕಾಗಿ ಉಂಟಾಗಿದೆ? ಹಾಗೆ ಉಂಟಾಗಲು ಕಾರಣವೇನು? ಈ ವಿಷಯವನ್ನು ಆಪ್ತನೂ, ಭಕ್ತನೂ, ಜಿತೇಂದ್ರಿಯನೂ, ಶುಶ್ರೂಷುವೂ ಆದ ನನಗೆ ಹೇಳಿರೆಂದು ವಸಿಷ್ಠನು ಕೇಳಿದನು. ಈ ಕಥೆಯು ಮಂಗಳಪ್ರದವೂ, ಪವಿತ್ರವೂ, ಪಾಪನಾಶಕವೂ ಆಗಿದೆ. ಆದುದರಿಂದ ಭಾಗ್ಯಶಾಲಿಯಾದ ಷಣ್ಮುಖನೇ ನನಗೆ ಪ್ರಿಯವನ್ನುಂಟುಮಾಡುವುದಕ್ಕಾಗಿ ಆ ಕಥೆಯನ್ನು ಸಂಪೂರ್ಣವಾಗಿ ಹೇಳು ಎಂದು ಕೇಳಿದನು.

೨೭. ದೈತ್ಯಸಂಹಾರಕನೂ, ಮಹಾತೇಜಸ್ವಿಯೂ ಆದ ಕುಮಾರಸ್ವಾಮಿಯು ಮಹಾತ್ಮನಾದ ವಸಿಷ್ಠನ ಆ ಮಾತನ್ನು ಕೇಳಿ ಸಂತುಷ್ಟನಾಗಿ ಸಾವಧಾನದಿಂದ ಉತ್ತರವನ್ನಿತ್ತನು.

೨೮. ಜ್ಞಾನಿಗಳಲ್ಲಿ ಶ್ರೇಷ್ಠನಾದ ವಸಿಷ್ಠನೇ, ನಾನು ಪೂರ್ವದಲ್ಲಿ ನನ್ನ ತಾಯಿಯಾದ ಉಮಾದೇವಿಯ ತೊಡೆಯಮೇಲೆ ಮಲಗಿರುವಾಗ ಯಾವ ವಿಷಯವನ್ನು ಕೇಳಿದ್ದನೋ ಆ ವಿಷಯವನ್ನು ಯಥಾಶ್ರುತವಾಗಿ ಹೇಳುವೆನು ಕೇಳುವವನಾಗು ಎಂದು ಷಣ್ಮುಖನು ಹೇಳಿದನು.

ಪಾರ್ವತ್ಯಾ ಸಹ ಸಂವಾದಃ ಶರ್ವಸ್ಯ ಚ ಮಹಾತ್ಮನಃ ।
ತದಹಂ ಕೀರ್ತಯಿಷ್ಯಾಮಿ ತ್ವತ್ಪ್ರಿಯಾರ್ಥಂ ಮಹಾಮುನೇ ॥ ೨೯ ॥

ಕೈಲಾಸಶಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ।
ನಾನಾದ್ರುಮಲತಾಕೀರ್ಣೇ ಚಕ್ರವಾಕೋಪಶೋಭಿತೇ ॥ ೩೦ ॥

ಷಟ್‌ಪದೋದ್ಗೀತಬಹುಲೇ ಧಾರಾಸಂಪಾತನಾದಿತೇ ।
ಮತ್ತಕ್ರೌಂಚಮಯೂರಾಣಾಂ ನಾದೈರುದ್ಘುಷ್ಟಕಂದರೇ ॥ ೩೧ ॥

ಅಪ್ಸರೋಗಣಸಂಕೀರ್ಣೇ ಕಿನ್ನರೈಶ್ಚೋಪಶೋಭಿತೇ ।
ಜೀವಂಜೀವಜಾತೀನಾಂ ವೀರುದ್ಭಿರುಪಶೋಭಿತೇ ॥ ೩೨ ॥

ಕೋಕಿಲಾರಾವಮಧುರೇ ಸಿದ್ಧಚಾರಣಸೇವಿತೇ ।
ಸೌರಭೇಯೀನಿನಾದಾಢ್ಯೇ ಅಧಃ ಸ್ತನಿತನಿಃಸ್ವನೇ ॥ ೩೩ ॥

---

೨೯. ಎಲೈ ಮುನಿವರ್ಯನೇ, ಮಹಾನುಭಾವನಾದ ಈಶ್ವರನಿಗೂ, ನನ್ನ ತಾಯಿಯಾದ ಪಾರ್ವತೀದೇವಿಗೂ ನಡೆದ ಸಂವಾದವನ್ನು ಯಥಾಶ್ರುತವಾಗಿ ನಿನ್ನ ಪ್ರೀತಿಗೋಸ್ಕರ ಹೇಳುವೆನು ಕೇಳೆಂದನು.

೩೦-೩೫. ಎಲೈ ಮುನಿವರ್ಯನೇ, ಗೈರಿಕಾದಿ ನಾನಾಧಾತುಗಳಿಂದ ವಿಚಿತ್ರಕರವೂ, ವಿವಿಧವಾದ ಮರ ಗಿಡ ಬಳ್ಳಿಗಳಿಂದಲಂಕೃತವೂ, ಚಕ್ರವಾಕ ಪಕ್ಷಿಗಳಿಂದ ಭೂಷಿತವೂ, ಭ್ರಮರಗಳ ಝೇಂಕಾರದಿಂದ ಪೂರ್ಣವೂ, ಝರಿಗಳ ಪತನಧ್ವನಿಗಳಿಂದ ಸಹಿತವೂ, ಮದಿಸಿದ ಕ್ರೌಂಚ ಮಯೂರಗಳ ಧ್ವನಿಯಿಂದ ನಾದಿತವೂ, ಕಂದರಗಳಿಂದ ಭೂಷಿತವೂ, ಅಪ್ಸರೋಗಣಗಳಿಂದ ವ್ಯಾಪ್ತವೂ, ಕಿನ್ನರರಿಂದ ರಂಜಿತವೂ, ಚಕೋರಗಳಿಂದ ವ್ಯಾಪ್ತವೂ, ಲತಾಗೃಹಗಳಿಂದ ಮಂಡಿತವೂ, ಕೋಗಿಲೆಗಳ ಧ್ವನಿಗಳಿಂದ ಮಧುರವೂ, ಸಿದ್ಧಚಾರಣರಿಂದ ಸೇವಿತವೂ, ಕಾಡುಕೋಣಗಳ ಧ್ವನಿಯಿಂದ ಭರಿತವೂ, ಮೇಘಧ್ವನಿಯಿಂದ ಪೂರ್ಣವೂ, ವಿನಾಯಕನ ಭಯದಿಂದ ಖಿನ್ನವೂ, ಪೊದೆಗಳಿಂದ ಸಹಿತವಾದ ಗವಿಗಳಿಂದ ಸಹಿತವೂ ಆದ ಕೈಲಾಸಗಿರಿಯು ಶೋಭಿಸುತ್ತದೆ. ಮತ್ತು ವೀಣಾ ಮೃದಂಗಾದಿ ವಾದ್ಯಗಳ ಧ್ವನಿಯಿಂದ ಶ್ರೋತ್ರೇಂ

ವಿನಾಯಕಭಯೋದ್ವಿಗ್ನೇ ಕುಂಜರೈರ್ಯುಕ್ತಕಂದರೇ ।
ವೀಣಾವಾದಿತ್ರನಿರ್ಘೋಷೈಃ ಶ್ರೋತ್ರೇಂದ್ರಿಯ ಮನೋರಮ್ಯೈಃ ॥ ೩೪ ॥

ದೋಲಾಲಂಬಿತಸಂಪಾತೇ ವನಿತಾಸಂಘಸೇವಿತೇ ।
ಧ್ವಜೈರ್ಲಂಬಿತದೋಲಾನಾಂ ಘಂಟಾನಾಂ ನಿನದಾಕುಲೇ ॥ ೩೫ ॥

ಮುಖಮರ್ದಲವಾದಿತ್ರೈರ್ಬಲಿನಾಂ ಸ್ಫೋಟಿತೈಸ್ತಥಾ ।
ಕ್ರಿಡಾರವವಿಚಾರಾಣಾಂ ನಿರ್ಘೋಷೈಃ ಪೂರ್ಣಮಂದಿರೇ ॥ ೩೬ ॥

ಹಾಸ್ಯೈಃ ಸಂತ್ರಾಸಜನನೈರ್ವಿಕರಾಲಮುಖೈಸ್ತಥಾ ।
ದೇಹಗಂಧೈರ್ವಿಚಿತ್ರೈಶ್ಚ ಪ್ರಕೀಡಿತಗಣೇಶ್ವರೈಃ ॥ ೩೭ ॥

ವಜ್ರಸ್ಫಟಿಕಸೋಪಾನಚಿತ್ರಪಟ್ಟಶಿಲಾತಲೈಃ ।
ವ್ಯಾಘ್ರಸಿಂಹಮುಖೈಶ್ಚಾನ್ಯೈರ್ಗಜವಾಜಿಮುಖೈಸ್ತಥಾ ॥ ೩೮ ॥

---

ದ್ರಿಯಕ್ಕೆ ಆಹ್ಲಾದಕರವೂ, ಉಯ್ಯಾಲೆ ಮೊದಲಾದುವುಗಳಿಂದ ಭೂಷಿತವೂ, ಸ್ತ್ರೀಯರ ಸಂಘದಿಂದ ಸೇವಿತವೂ, ಧ್ವಜಪತಾಕೆಗಳಿಂದಲಂಕೃತವೂ, ತೂಗುವ ತೊಟ್ಟಿಲುಗಳ ಗಂಟಾರವದಿಂದ ನಾದಿತವೂ, ಹಾಡುಗಾರಿಕೆ ಮರ್ದಲ ಮೃದಂಗಾದಿ ಧ್ವನಿಗಳಿಂದ ಮನೋಹರವೂ, ಬಲಿಷ್ಠರ ಹೊಡತದಿಂದ ಯುಕ್ತವೂ ಆಗಿತ್ತು.

೩೬. ಆ ಕೈಲಾಸಗಿರಿಯಲ್ಲಿರುವ ಕ್ರೀಡಾ ಮಂದಿರಗಳು ನಾನಾವಿಧ ವಾದ್ಯ ಘೋಷಣಗಳಿಂದ ಪೂರ್ಣವಾಗಿಯೂ, ಕ್ರೀಡಾಸಕ್ತರಾದ ಜನಗಳ ಧ್ವನಿಗಳಿಂದ ಸಹಿತವಾಗಿಯೂ, ಅಲಂಕೃತವಾಗಿಯೂ ಇವೆ.

೩೭–೪೨. ಇಂತಹ ಕೈಲಾಸ ಪರ್ವತದಲ್ಲಿ ಪರಮೇಶ್ವರನು ಭಯಜನಕರೂ, ಹಾಸ್ಯಕಾರಿಗಳೂ, ಭಯಂಕರ ಮುಖಗಳೂ, ವಿಚಿತ್ರವಾದ ದೇಹಗಂಧವುಳ್ಳವರೂ, ವಿಹಾರಾಸಕ್ತರೂ, ಗಣೇಶ್ವರೂ, ವಜ್ರಸ್ಫಟಿಕಮಯವಾದ ಸೋಪಾನಯುಕ್ತವೂ, ವಿಚಿತ್ರವಾದ ಚಾವಣಿ ಶಿಲಾತಲ ಇವುಗಳಿಂದ ಸಹಿತವೂ ಆದ ಹರ್ಮ್ಯಗಳಲ್ಲಿ ವಾಸಿಸುವವರೂ, ವ್ಯಾಘ್ರ, ಸಿಂಹಗಳ ಮುಖಗಳಂತೆ ಮುಖವುಳ್ಳವರೂ, ಗಜಾನನರೂ,

ಬಿಡಾಲವದನೈಶ್ಚೋಗ್ರೈಃ ಕ್ರೋಷ್ಟುಕಾಕಾರವಮೂರ್ತಿಭಿಃ ।
ಹ್ರಸ್ವೈಃ ದೀರ್ಘೈಃ ಕೃಶೈಃ ಸ್ಥೂಲೈರ್ಲಂಬೋದರಮಹೋದರೈಃ ॥ ೩೯ ॥

ಹ್ರಸ್ವಜಂಘೈಶ್ಚ ಲಂಬೋಷ್ಠೈಸ್ತಾಲಜಂಘೈಸ್ತಥಾಪರೈಃ ।
ಗೋಕರ್ಣೈರೇಕಕರ್ಣೈಶ್ಚ ಮಹಾಕರ್ಣೈರಕರ್ಣಕೈಃ ॥ ೪೦ ॥

ಬಹುಪಾದೈರ್ಮಹಾಪಾದೈರೇಕಪಾದೈರಪಾದಕೈಃ ।
ಬಹುಶೀರ್ಷೈರ್ಮಹಾಶೀರ್ಷೈರೇಕಶೀರ್ಷೈರಶೀರ್ಷಕೈಃ ॥ ೪೧ ॥

ಬಹುನೇತ್ರೈರ್ಮಹಾನೇತ್ರೈರೇಕನೇತ್ರೈರನೇತ್ರಕೈಃ ।
ಏವಂವಿಧೈರ್ಮಹಾಯೋಗಿ ಭೂತೈರ್ಭೂತಪತಿರ್ವೃತಃ ॥ ೪೨ ॥

ವಿಶುದ್ಧಮುಕ್ತಾಮಣಿರತ್ನಭೂಷಿತೇ
ಶಿಲಾತಲೇ ಹೇಮಮಯೇ ಮನೋರಮೇ ।
ಸುಖೋಪವಿಷ್ಟಂ ಮದನಾಂಗನಾಶನಂ
ಪ್ರೋವಾಚ ವಾಕ್ಯಂ ಗಿರಿರಾಜಪುತ್ರೀ ॥ ೪೩ ॥

---

ಅಶ್ವಮುಖಿಗಳೂ, ಬಿಡಾಲಮುಖಿಗಳೂ, ನರಿಯಂತೆ ಆಕಾರವುಳ್ಳವರೂ, ಹ್ರಸ್ವವೂ ದೀರ್ಘವೂ, ಕೃಶವೂ, ಸ್ಥೂಲವೂ, ಲಂಬವೂ, ಮಹತ್ತೂ, ಆದ ಉದರವುಳ್ಳವರೂ, ಮೋಟಾದ ಮೊಣಕಾಲುಳ್ಳವರೂ, ನೇತಾಡುವ ತುಟಿಗಳುಳ್ಳವರೂ, ದೀರ್ಘವಾದ ಪಾದವುಳ್ಳವರೂ, ಗೋವಿನ ಕಿವಿಯಂತೆ ಕರ್ಣವುಳ್ಳವರೂ, ಏಕಕರ್ಣಿಗಳೂ, ಮಹಾಕರ್ಣಿಗಳೂ, ಕಿವಿಯಿಲ್ಲದವರೂ, ಅನೇಕ ಪಾದವುಳ್ಳವರೂ, ಮಹಾಪಾದವುಳ್ಳವರೂ, ಏಕಪಾದಿಗಳೂ, ಪಾದರಹಿತರೂ, ಅನೇಕ ಶಿರಸ್ಕರೂ, ಮಹೋತ್ತಮಾಂಗಿಗಳೂ, ಏಕಶಿರಸ್ಕರೂ, ತಲೆಯಿಲ್ಲದವರೂ, ಅನೇಕ ನೇತ್ರಮಂತರೂ, ಮಹಾನಯನವುಳ್ಳವರೂ, ಏಕನೇತ್ರರೂ, ನೇತ್ರರಹಿತರೂ, ಮಹಾಯೋಗಿಗಳೂ, ವಿವಿಧಾಕಾರಿಗಳೂ ಆದ ಭೂತ ಪ್ರೇತ ಪಿಶಾಚಾದಿಗಳಿಂದಲೂ, ಗಣನಾಯಕರಿಂದಲೂ ಪರಿವೃತನಾಗಿ ಹೊಳೆಯುತ್ತಿದ್ದನು.

೪೩. ಪರಿಶುದ್ಧವಾದ ಮುತ್ತು ರತ್ನ ಇವುಗಳಿಂದ ಭೂಷಿತವೂ, ಸುವರ್ಣಮಯವೂ, ಮನೋಹರವೂ ಆದ ಶಿಲಾತಲದಲ್ಲಿ ಸಂತೋಷದಿಂದ ಕುಳಿತಿರುವ ಮನ್ಮಥನಾಶಕನಾದ ಪರಮೇಶ್ವರನನ್ನು ಕುರಿತು ಪರ್ವತರಾಜ ಕುಮಾರಿಯಾದ ಉಮಾದೇವಿಯು ಇಂತೆಂದಳು.

|| ದೇವ್ಯುವಾಚ ||

ಭಗವನ್ ಭೂತಭವ್ಯೇಶ ಗೋವೃಷಾಂಕಿತ ಶಾಸನ |
ತವ ಕಂಠೇ ಮಹಾದೇವ ಭ್ರಾಜತೇಂಬುದಸನ್ನಿಭಂ || ೪೪ ||

ನಾತ್ಯಲ್ಪಣಂ ನಾತಿಶುಭ್ರಂ ನೀಲಾಂಜನಚಯೋಪಮಂ |
ಕಿಮಿದಂ ದೀಪ್ಯತೇ ದೇವ ಕಂಠೇ ಕಾಮಾಂಗನಾಶನ || ೪೫ ||

ಕೋ ಹೇತುಃ ಕಾರಣಂ ಕಿಂಚ ಕಂಠೇ ನೀಲತ್ವಮೀಶ್ವರ |
ಏತತ್ಸರ್ವಂ ಯಥಾನ್ಯಾಯಂ ಬ್ರೂಹಿ ಕೌತೂಲಹಂ ಹಿ ಮೇ || ೪೬ ||

ಶ್ರುತ್ವಾ ವಾಕ್ಯಂ ತತಸ್ತಸ್ಯಾಃ ಪಾರ್ವತ್ಯಾಃ ಪಾರ್ವತೀಪ್ರಿಯಃ |
ಕಥಾಂ ಮಂಗಲಸಂಯುಕ್ತಾಂ ಕಥಯಾಮಾಸ ಶಂಕರಃ || ೪೭ ||

ಮಥ್ಯಮಾನೇಮೃತೇ ಪೂರ್ವಂ ಕ್ಷೀರೋದೇ ಸುರದಾನವೈಃ |
ಅಗ್ರೇ ಸಮುತ್ಥಿತಂ ತಸ್ಮಿನ್ ವಿಷಂ ಕಾಲಾನಲಪ್ರಭಂ || ೪೮ ||

---

೪೪–೪೬. ಉಮಾದೇವಿಯು ಹೇಳಿದಳು :—ಎಲೈ ಪ್ರಿಯನೇ, ಪೂಜ್ಯನೂ, ಭೂತ ಭವಿಷ್ಯದ್ವರ್ತಮಾನಕಾಲದಲ್ಲಿ ಸ್ವಾಮಿಯೂ, ವೃಷಭಧ್ವಜನೂ, ಶಾಸಕನೂ, ಮಹಾದೇವನೂ ಆದ ನಿನ್ನ ಕಂಠದಲ್ಲಿ ನೀಲಮೇಘದಂತೆ ಹೊಳೆಯುತ್ತಿರುವ ಈ ಚಿಹ್ನೆಯು ಯಾವುದು ? ಎಲೈ ಕಾಮನಾಶಕನಾದ ದೇವನೇ, ನಿನ್ನ ಕಂಠದಲ್ಲಿ ಅತಿತೀಕ್ಷ್ಣವೂ, ಅತಿ ಶುಭ್ರವೂ ಇಲ್ಲದೆ ಅತಿ ನೀಲವಾದ ಕಾಡಿಗೆಯ ರಾಶಿಯಂತೆ ಹೊಳೆಯುವ ಈ ಕಾಂತಿಯು ಏತರದು ? ಹೀಗಾಗಲು ಕಾರಣವೇನು ? ಯಾವ ಕಾರಣದಿಂದ ಕಕ್ರಗೆ ಕಪ್ಪಾಗಿದೆ. ಇವೆಲ್ಲವನ್ನೂ ಕ್ರಮವಾಗಿ ಯಥಾಸ್ಥಿತವಾಗಿ ನಿರೂಪಿಸಬೇಕು. ಇದನ್ನು ಕೇಳಲು ನನಗೆ ಅತ್ಯಂತ ಕುತೂಹಲವಿರುತ್ತದೆಯೆಂದು ಪಾರ್ವತಿಯು ಪ್ರಾರ್ಥಿಸಿದಳು.

೪೭. ಅನಂತರ ಉಮಾಪತಿಯಾದ ಶಂಕರನು ಆ ಪಾರ್ವತೀದೇವಿಯ ಮಾತುಗಳನ್ನು ಕೇಳಿ ಪ್ರೀತನಾಗಿ, ಮಂಗಳಕರವಾದ ಕಥೆಯನ್ನು ಹೇಳಲುಪಕ್ರಮಿಸಿದನು.

೪೮–೪೯. ಎಲೌ ಪ್ರಿಯಳೇ, ಪೂರ್ವದಲ್ಲಿ ದೇವಾಸುರರಿಬ್ಬರೂ ಅಮೃತವನ್ನು ಹೊಂದುವುದಕ್ಕಾಗಿ ಕ್ಷೀರಸಾಗರವನ್ನು ಮಥನಮಾಡಲು, ಆವಿಯಲ್ಲಿ

ತಂ ದೃಷ್ಟ್ವಾ ಸುರಸಂಘಾಶ್ಚ ದೈತ್ಯಾಶ್ಚೈವ ವರಾನನೇ ।
ವಿಷಣ್ಣವದನಾಃ ಸರ್ವೇ ಗತಾಸ್ತೇ ಬ್ರಹ್ಮಣೋಂತಿಕಂ ॥ ೪೯ ॥

ದೃಷ್ಟ್ವಾ ಸುರಗಣಾನ್ ಭೀತಾನ್ ಬ್ರಹ್ಮೋವಾಚ ಮಹಾದ್ಯುತಿಃ ।
ಕಿಮರ್ಥಂ ಭೋ ಮಹಾಭಾಗಾ ಭೀತಾ ಉದ್ವಿಗ್ನಚೇತಸಃ ॥ ೫೦ ॥

ಮಯಾಷ್ಟಗುಣಮೈಶ್ವರ್ಯಂ ಭವತಾಂ ಸಂಪ್ರಕಲ್ಪಿತಂ ।
ಕೇನ ವ್ಯಾವರ್ತಿತೈಶ್ವರ್ಯಾ ಯೂಯಂ ವೈ ಸುರಸತ್ತಮಾಃ ॥ ೫೧ ॥

ತ್ರೈಲೋಕ್ಯಸ್ಯೇಶ್ವರಾ ಯೂಯಂ ಸರ್ವೇ ವೈ ವಿಗತಜ್ವರಾಃ ।
ಪ್ರಜಾಸರ್ಗೇ ನ ಸೋಽಸ್ತೀಹ ಆಜ್ಞಾಂ ಯೋ ಮೇ ನಿವರ್ತಯೇತ್ ॥ ೫೨ ॥

ವಿಮಾನಗಾಮಿನಃ ಸರ್ವೇ ಸರ್ವೇ ಸ್ವಚ್ಛಂದಗಾಮಿನಃ ।
ಆಧ್ಯಾತ್ಮೇ ಚಾಧಿಭೂತೇ ಚ ಅಧಿದೇವೇ ಚ ನಿಶ್ಚಿತಃ ।
ಪ್ರಜಾಃ ಕರ್ಮವಿಪಾಕೇನ ಶಕ್ತ್ಯಾ ಯೂಯಂ ಪ್ರವರ್ತಿತುಂ ॥ ೫೩ ॥

---

ಪ್ರಲಯಾಗ್ನಿಗೆ ಸಮಾನವಾದ ವಿಷವು ಉತ್ಪನ್ನವಾಯಿತು. ಓ ಸುಂದರಿ, ಆಗ ಆ ದೇವದಾನವರೆಲ್ಲರೂ ಆ ವಿಷವನ್ನು ನೋಡಿ ಖಿನ್ನಮನಸ್ಕರಾಗಿ ಬ್ರಹ್ಮದೇವನ ಬಳಿಗೆ ಹೋದರು.

೫೦. ಆಗ ಅತಿದೀಪ್ತನಾದ ಬ್ರಹ್ಮದೇವನು ಭೀತರಾದ ದೇವತೆಗಳನ್ನು ನೋಡಿ ಎಲೈ ಮಹಾ ಭಾಗ್ಯಶಾಲಿಗಳಾದ ದೇವತೆಗಳಿರಾ, ನೀವು ಏತಕ್ಕಾಗಿ ಭೀತರೂ ಖಿನ್ನಮನಸ್ಕರೂ ಆಗಿರುವಿರಿ ? ಎಂದನು.

೫೧–೫೩. ಎಲೈ ದೇವೋತ್ತಮರೇ, ನಾನು ನಿಮಗಾಗಿ ಅಷ್ಟವಿಧವಾದ ಐಶ್ವರ್ಯವನ್ನು ಕೊಟ್ಟಿರುತ್ತೇನೆ. ಅಂತಹ ಐಶ್ವರ್ಯವನ್ನು ಯಾರು ಅಪಹರಿಸಿರುವರು ? ನೀವೆಲ್ಲರೂ ಮೂರುಲೋಕಗಳಿಗೆ ಪ್ರಭುಗಳೂ, ವೀತಶೋಕವುಳ್ಳವರೂ ಆಗಿರುತ್ತೀರಿ. ನನ್ನಾಜ್ಞೆಗಳನ್ನು ಮೀರತಕ್ಕ ಪ್ರಜಾಸೃಷ್ಟಿಯನ್ನು ನಾನು ಮಾಡಿರುವುದಿಲ್ಲ. ನೀವೆಲ್ಲರೂ ವಿಮಾನಗಾಮಿಗಳೂ, ಸ್ವೇಚ್ಛಾಚಾರಿಗಳೂ ಆಗಿರುತ್ತೀರಿ. ಮತ್ತು ಆಧ್ಯಾತ್ಮಿಕವೂ, ಆಧಿಭೌತಿಕವೂ, ಆಧಿದೈವಿಕವೂ ಆದ ತಾಪತ್ರಯದಿಂದ ಯುಕ್ತರಾದ ಪ್ರಜೆಗಳನ್ನು ಅವರವರ ಪುಣ್ಯಪಾಪಕರ್ಮಾನುಗುಣವಾಗಿ ಪ್ರವರ್ತಿಸಲು ಸಮರ್ಥರಾಗಿರುತ್ತೀರಿ.

ತತ್ಕಿಮರ್ಥಂ ಭಯೋದ್ವಿಗ್ನಾ ಮೃಗಾಃ ಸಿಂಹಾರ್ದಿತಾ ಇವ ।
ಕಿಂ ದುಃಖಂ ಕೇನ ಸಂತಾಪಃ ಕುತೋ ವಾ ಭಯಮಾಗತಂ ।
ಏತತ್ಸರ್ವಂ ಯಥಾನ್ಯಾಯಂ ಶೀಘ್ರಮಾಖ್ಯಾತುಮರ್ಹಥ ॥ ೫೪ ॥

ಶ್ರುತ್ವಾ ವಾಕ್ಯಂ ತತಸ್ತಸ್ಯ ಬ್ರಹ್ಮಣೋ ವೈ ಮಹಾತ್ಮನಃ ।
ಊಚುಸ್ತೇ ಋಷಿಭಿಃ ಸಾರ್ಧಂ ಸುರದೈತ್ಯೇಂದ್ರದಾನವಾಃ ॥ ೫೫ ॥

ಸುರಾಸುರೈರ್ಮಥ್ಯಮಾನೇ ಪಾಥೋಧೌ ಚ ಮಹಾತ್ಮಭಿಃ ।
ಭುಜಂಗಭೃಂಗಸಂಕಾಶಂ ನೀಲಜೀಮೂತಸನ್ನಿಭಂ ।
ಪ್ರಾದುರ್ಭೂತಂ ವಿಷಂ ಘೋರಂ ಸಂವರ್ತಾಗ್ನಿಸಮಪ್ರಭಂ ॥ ೫೬ ॥

ಕಾಲಮೃತ್ಯುರಿವೋದ್ಭೂತಂ ಯುಗಾಂತಾದಿತ್ಯವರ್ಚಸಂ ।
ತ್ರೈಲೋಕ್ಯೋತ್ಸಾದಿ ಸೂರ್ಯಾಭಂ ಪ್ರಸ್ಫುರಂತಂ ಸಮಂತತಃ ॥ ೫೭ ॥

---

೫೪. ಆದುದರಿಂದ, ನೀವು ಸಿಂಹಗಳಿಂದ ಪೀಡಿತವಾದ ಮೃಗಗಳಂತೆ ಯಾರಿಂದ ಭೀತರಾಗಿರುವಿರಿ? ನಿಮಗಾಗಿರುವ ದುಃಖವು ಎಂತಹದು? ಇದು ಯಾರಿಂದ ಸಂಭವಿಸಿದೆ? ಆ ವಿಧವಾದ ಭಯೋತ್ಪಾದಕರು ಯಾರು? ಇವೆಲ್ಲ ವನ್ನೂ ಯಥಾಸ್ಥಿತವಾಗಿಯೂ, ಸಾಂಗವಾಗಿಯೂ, ಶೀಘ್ರವಾಗಿಯೂ ನೀವು ಹೇಳಲು ಅರ್ಹರಾಗಿರುತ್ತೀರೆಂದು ಬ್ರಹ್ಮನು ದೇವತೆಗಳಿಗೆ ಹೇಳಿದನು.

೫೫. ಅನಂತರ ಮಹಾತ್ಮನಾದ ಬ್ರಹ್ಮದೇವನ ಆ ಮಾತುಗಳನ್ನು ಕೇಳಿದ ದೇವತೆಗಳು, ದೈತ್ಯರು, ದಾನವರು, ಮಹರ್ಷಿಗಳಿಂದಸಹಿತರಾಗಿ ಬ್ರಹ್ಮನನ್ನು ಕುರಿತು ಇಂತೆಂದರು.

೫೬. ಎಲೈ ಬ್ರಹ್ಮದೇವನೇ, ಸುರಾಸುರರಾದ ನಾವು ಮಹಾತ್ಮರಿಂದೊಡ ಕೂಡಿ ಕ್ಷೀರಸಾಗರವನ್ನು ಅಮೃತಕ್ಕಾಗಿ ಮಥನಮಾಡಲು ಕೃಷ್ಣಸರ್ಪ, ಜೇನುಹುಳು ಗಳಿಗೆ ಸಮಾನವೂ, ಕೃಷ್ಣಮೇಘಗಳಿಗೆ ಸದೃಶವೂ, ಅತಿಭಯಂಕರವೂ, ಪ್ರಲಯಾಗ್ನಿಗೆ ಸಮವಾದ ಪ್ರಭೆಯುಳ್ಳದ್ದೂ ಆದ ವಿಷವು ಉತ್ಪನ್ನವಾಗಿದೆ.

೫೭. ಆ ವಿಷವು ಕಾಲಮೃತ್ಯುವಿಗೆ ಸಮವೂ, ಪ್ರಲಯಕಾಲದ ಸೂರ್ಯ ನಂತೆ ಕಾಂತಿಯುಳ್ಳದ್ದೂ, ಮೂರುಲೋಕನಾಶಕವೂ, ಸೂರ್ಯನಂತೆ ಸರ್ವತ್ರ ಪ್ರಕಾಶಕವೂ ಆಗಿರುತ್ತದೆ.

ವಿಷೇಣೋತ್ತಿಷ್ಠಮಾನೇನ ಕಾಲಾನಲಸಮತ್ವಿಷಾ ।
ನಿರ್ದಗ್ಧೋ ರಕ್ತಗೌರಾಂಗಃ ಕೃತಕೃಷ್ಣೋ ಜನಾರ್ದನಃ ॥ ೫೮ ॥

ದೃಷ್ಟ್ವಾ ತಂ ರಕ್ತಗೌರಾಂಗಂ ಕೃತಕೃಷ್ಣಂ ಜನಾರ್ದನಂ ।
ಭೀತಾಃ ಸರ್ವೇ ವಯಂ ದೇವಾಸ್ತ್ವಾಮೇವ ಶರಣಂ ಗತಾಃ ॥ ೫೯ ॥

ಸುರಾಣಾಮಸುರಾಣಾಂ ಚ ಶ್ರುತ್ವಾ ವಾಕ್ಯಂ ಪಿತಾಮಹಃ ।
ಪ್ರತ್ಯುವಾಚ ಮಹಾತೇಜಾ ಲೋಕಾನಾಂ ಹಿತಕಾಮ್ಯಯಾ ॥ ೬೦ ॥

ಶೃಣುಧ್ವಂ ದೇವತಾಃ ಸರ್ವೇ ಋಷಯಶ್ಚ ತಪೋಧನಾಃ ।
ಯತ್ತದಗ್ರೇ ಸಮುತ್ಪನ್ನಂ ಮಥ್ಯಮಾನೇ ಮಹೋದಧೌ ॥ ೬೧ ॥

ವಿಷಂ ಕಾಲಾನಲಪ್ರಖ್ಯಂ ಕಾಲಕೂಟೇತಿ ಚ ಶ್ರುತಂ ।
ಯೇನ ಪ್ರೋದ್ಭೂತಮಾತ್ರೇಣ ಕೃತಕೃಷ್ಣೋ ಜನಾರ್ದನಃ ॥ ೬೨ ॥

---

೫೮. ಪ್ರಲಯಾಗ್ನಿಗೆ ಸಮಾನವಾದ ಕಾಂತಿಯುಳ್ಳ ಆ ವಿಷವು ಪ್ರಾದುರ್ಭವಿಸಲು ರಕ್ತವೂ, ಶುಭ್ರವೂ ಆದ ಕಾಂತಿಯುಳ್ಳ ಜನಾರ್ದನನಾಮಕನಾದ ವಿಷ್ಣುವಿನ ದೇಹವು ಸುಟ್ಟು ನೀಲಮೇಘಶ್ಯಾಮವಾಯಿತು.

೫೯. ಆಗ ನಾವು ಪಾಟಲವರ್ಣವಾಗಿದ್ದ ಮಹಾವಿಷ್ಣುವಿನ ಶರೀರವು ನೀಲಮೇಘಶ್ಯಾಮವಾದದ್ದನ್ನು ನೋಡಿ ಅತ್ಯಂತ ಭೀತರಾಗಿ ನಿನಗೆ ಶರಣಾಗತರಾಗಿರುತ್ತೇವೆಂದು ದೇವಾಸುರರು ಬ್ರಹ್ಮದೇವನಿಗೆ ಹೇಳಿದರು.

೬೦. ಮಹಾತೇಜಸ್ವಿಯಾದ ಬ್ರಹ್ಮದೇವನು ಆ ದೇವದೈತ್ಯರ ಮಾತುಗಳನ್ನು ಕೇಳಿ ಮೂರು ಲೋಕಗಳ ಹಿತಾಪೇಕ್ಷೆಯಿಂದ ಅವರಿಗೆ ಪ್ರತ್ಯುತ್ತರವನ್ನು ಕೊಟ್ಟನು.

೬೧-೬೨. ಎಲೈ ಸಮಸ್ತರಾದ ದೇವತೆಗಳಿರಾ, ತಪೋಧನರೂ ಮಹರ್ಷಿಗಳೂ ಆದ ನೀವು ಕ್ಷೀರಸಾಗರವನ್ನು ಮಥಿಸಲಾಗಿ ಆದಿಯಲ್ಲಿ ಯಾವ ವಿಷವು ಉತ್ಪನ್ನವಾಯಿತೋ ಆ ವಿಷವು ಪ್ರಲಯಾಗ್ನಿಗೆ ಸಮವಾದ ಕಾಲಕೂಟವೆಂದು ಲೋಕದಲ್ಲಿ ಪ್ರಖ್ಯಾತವಾಗಿದೆ. ಆ ಕಾಲಕೂಟವು ಜನಿಸಿದ ತಕ್ಷಣವೇ ಶ್ರೀಹರಿಯು ನೀಲವರ್ಣನಾದನು.

ತಸ್ಯ ವಿಷ್ಣುರಹಂ ಚಾಪಿ ಸರ್ವೇ ತೇ ಸುರಪುಂಗವಾಃ ।
ನ ಶಕ್ನುವಂತಿ ವೈ ಸೋಢುಂ ವೇಗಮನ್ಯೇ ತು ಶಂಕರಾತ್ ॥ ೬೩ ॥

ಇತ್ಯುಕ್ತ್ವಾ ಪದ್ಮಗರ್ಭಾಭಃ ಪದ್ಮಯೋನಿರಯೋನಿಜಃ ।
ತತಃ ಸ್ತೋತುಂ ಸಮಾರಬ್ಧೋ ಬ್ರಹ್ಮಾ ಲೋಕಪಿತಾಮಹಃ ॥ ೬೪ ॥

ನಮಸ್ತುಭ್ಯಂ ವಿರೂಪಾಕ್ಷ ನಮಸ್ತೇಽನೇಕಚಕ್ಷುಷೇ ।
ನಮಃ ಪಿನಾಕಹಸ್ತಾಯ ವಜ್ರಹಸ್ತಾಯ ವೈ ನಮಃ ॥ ೬೫ ॥

ನಮಸ್ತ್ರೈಲೋಕ್ಯನಾಥಾಯ ಭೂತಾನಾಂ ಪತಯೇ ನಮಃ ।
ನಮಃ ಸುರಾರಿಸಂಹರ್ತ್ರೇ ತಾಪಸಾಯ ತ್ರಿಚಕ್ಷುಷೇ ॥ ೬೬ ॥

ಬ್ರಹ್ಮಣೇ ಚೈವ ರುದ್ರಾಯ ವಿಷ್ಣವೇ ಚೈವ ತೇ ನಮಃ ।
ಸಾಂಖ್ಯಾಯ ಚೈವ ಯೋಗಾಯ ಭೂತಗ್ರಾಮಾಯ ವೈ ನಮಃ ॥ ೬೭ ॥

ಮನ್ಮಥಾಂಗವಿನಾಶಾಯ ಕಾಲಾಕಾಲಾಯ ವೈ ನಮಃ ।
ರುದ್ರಾಯ ಚ ಸುರೇಶಾಯ ದೇವದೇವಾಯ ತೇ ನಮಃ ॥ ೬೮ ॥

---

೬೩. ಎಲೈ ದೇವೋತ್ತಮರೇ, ಅಂತಹ ಕಾಲಕೂಟ ವಿಷವನ್ನು ಸಹನಮಾಡಲು ನಿಮಗೂ ನನಗೂ ಮಹಾವಿಷ್ಣುವಿಗೂ ಕೂಡ ಸಾಧ್ಯವಿಲ್ಲ. ಅದರ ವೇಗವನ್ನು ತಡೆಯಲು ಈಶ್ವರನೊಬ್ಬನೇ ಸಮರ್ಥನಾಗಿರುವನೆಂದು ಬ್ರಹ್ಮನು ಹೇಳಿದನು.

೬೪. ಪದ್ಮದಂತೆ ಕಾಂತಿಯುಳ್ಳವನೂ, ಪದ್ಮಸಂಭೂತನೂ, ಅಯೋನಿಜನೂ, ಲೋಕಪಿತಾಮಹನೂ ಆದ ಬ್ರಹ್ಮನು ಹೀಗೆ ದೇವತೆಗಳಿಗೆ ಹೇಳಿ ತರುವಾಯ ಪರಮೇಶ್ವರನನ್ನು ಸ್ತೋತ್ರಮಾಡಲುಪಕ್ರಮಿಸಿದನು.

೬೫–೭೦. ವಿರೂಪಾಕ್ಷನೂ, ಬಹುನೇತ್ರನೂ, ಪಿನಾಕಪಾಣಿಯೂ, ವಜ್ರಹಸ್ತನೂ, ತ್ರಿಲೋಕನಾಥನೂ, ಭೂತಪತಿಯೂ, ದೈತ್ಯನಾಶಕನೂ, ತಾಪಸರೂಪಿಯೂ, ತ್ರಿನೇತ್ರನೂ, ಬ್ರಹ್ಮವಿಷ್ಣು ಮಹೇಶ್ವರ ಸ್ವರೂಪಿಯೂ, ಸಾಂಖ್ಯಯೋಗರೂಪಿಯೂ, ಸಮಸ್ತ ಭೂತನಿಯಾಮಕನೂ, ಮನ್ಮಥದಾಹಕನೂ, ಪ್ರಲಯಕಾಲಸ್ವರೂಪಿಯೂ, ರೋಗನಿವರ್ತಕನೂ, ಸುರೇಶನೂ, ದೇವೋತ್ತಮನೂ, ಜಟಾಧಾರಿಯೂ, ಭಯಂಕರನೂ, ಸುಖಕರನೂ, ಕಪಾಲಪಾಣಿಯೂ, ವಿರೂಪನೂ,

ಕಪರ್ದಿನೇ ಕರಾಲಾಯ ಶಂಕರಾಯ ಕಪಾಲಿನೇ ।
ವಿರೂಪಾಯೈಕರೂಪಾಯ ಶಿವಾಯ ವರದಾಯ ಚ ॥ ೧೯ ॥

ತ್ರಿಪುರಘ್ನಾಯ ವಂದ್ಯಾಯ ಮಾತೃಣಾಂಪತಯೇ ನಮಃ ।
ಬುದ್ಧಾಯ ಚೈವ ಶುದ್ಧಾಯ ಮುಕ್ತಾಯ ಕೇವಲಾಯ ಚ ॥ ೨೦ ॥

ನಮಃ ಕಮಲಹಸ್ತಾಯ ದಿಗ್ವಾಸಾಯ ಶಿಖಂಡಿನೇ ।
ಲೋಕತ್ರಯವಿಧಾತ್ರೇ ಚ ಚಂದ್ರಾಯ ವರುಣಾಯ ಚ ॥ ೨೧ ॥

ಅಗ್ರಾಯ ಚೈವ ಚೋಗ್ರಾಯ ವಿಪ್ರಾಯಾನೇಕಚಕ್ಷುಷೇ ।
ರಜಸೇ ಚೈವ ಸತ್ವಾಯ ತಮಸೋಽವ್ಯಕ್ತಯೋನಯೇ ॥ ೨೨ ॥

ನಿತ್ಯಾಯಾನಿತ್ಯರೂಪಾಯ ನಿತ್ಯಾನಿತ್ಯಾಯ ವೈ ನಮಃ ।
ವ್ಯಕ್ತಾಯ ಚೈವಾವ್ಯಕ್ತಾಯ ವ್ಯಕ್ತಾವ್ಯಕ್ತಾಯ ವೈ ನಮಃ ॥ ೨೩ ॥

ನಿತ್ಯಾಯ ಚೈವಾಚಿಂತ್ಯಾಯ ಚಿಂತ್ಯಾಚಿಂತ್ಯಾಯ ವೈ ನಮಃ ।
ಭಕ್ತಾನಾಮಾರ್ತಿನಾಶಾಯ ನರನಾರಾಯಣಾಯ ಚ ॥ ೨೪ ॥

---

ಏಕರೂಪಿಯೂ, ಮಂಗಳಕರನೂ, ವರಪ್ರದನೂ, ತ್ರಿಪುರನಾಶಕನೂ, ವಂದನಾರ್ಹನೂ, ಸಪ್ತಮಾತೃಗಳ ಪತಿಯೂ, ಬುದ್ಧನೂ, ಶುದ್ಧನೂ, ಮುಕ್ತನೂ ಕೇವಲನೂ ಆದ ಮಹೇಶ್ವರನಿಗೆ ನಮಸ್ಕಾರಗಳೆಂದು ಹೇಳಿದನು.

೨೧-೨೪. ಕಮಲಪಾಣಿಯೂ, ದಿಗಂಬರನೂ, ಶಿಖಂಡಧಾರಿಯೂ, ಲೋಕತ್ರಯಕರ್ತನೂ, ಆಹ್ಲಾದಕನೂ, ವರುಣರೂಪಿಯೂ, ಉತ್ತಮನೂ, ಭಯಂಕರನೂ, ವಿಪ್ರರೂಪಿಯೂ, ಅನೇಕ ನೇತ್ರನೂ, ಸತ್ವರಜಸ್ತಮೋಗುಣ ಸ್ವರೂಪಿಯೂ, ಅವ್ಯಕ್ತಯೋಗಿಯೂ, ನಿತ್ಯನೂ, ಅನಿತ್ಯನೂ, ನಿತ್ಯಾನಿತ್ಯನೂ, ವ್ಯಕ್ತನೂ, ಅವ್ಯಕ್ತನೂ, ವ್ಯಕ್ತಾವ್ಯಕ್ತನೂ, ಚಿಂತ್ಯನೂ, ಅಚಿಂತ್ಯನೂ, ಚಿಂತಾಚಿಂತ್ಯನೂ, ಭಕ್ತರ ದುಃಖನಾಶಕನೂ, ನರನಾರಾಯಣಸ್ವರೂಪಿಯೂ, ಉಮಾಪ್ರಿಯನೂ, ಶರ್ವನೂ, ನಂದಿ

ಉಮಾಪ್ರಿಯಾಯ ಶರ್ವಾಯ ನಂದಿಚಕ್ರಾಂಕಿತಾಯ ಚ ।
ಪಕ್ಷಮಾಸಾರ್ಧಮಾಸಾಯ ನಮಃ ಸಂವತ್ಸರಾಯ ಚ || ೭೫ ||

ಬಹುರೂಪಾಯ ಮುಂಡಾಯ ದಂಡಿನೇಽಥ ವರೂಥಿನೇ ।
ನಮಃ ಕಪಾಲಹಸ್ತಾಯ ದಿಗ್ವಾಸಾಯ ಶಿಖಂಡಿನೇ || ೭೬ ||

ಧ್ವಜಿನೇ ರಥಿನೇ ಚೈವ ಯಾಮಿನೇ ಬ್ರಹ್ಮಚಾರಿಣೇ ।
ಋಗ್ಯಜುಃ ಸಾಮವೇದಾಯ ಪುರುಷಾಯೇಶ್ವರಾಯ ಚ ||
ಇತ್ಯೇವಮಾದಿಚರಿತೈಸ್ತುಭ್ಯಂ ದೇವ ನಮೋಽಸ್ತು ತೇ || ೭೭ ||

|| ಶ್ರೀ ಮಹಾದೇವ ಉವಾಚ ||

ಏವಂ ಸ್ತುತಸ್ತತೋ ದೇವೈಃ ಪ್ರಣಿಪತ್ಯ ವರಾನನೇ || ೭೮ ||

ಜ್ಞಾತ್ವಾ ತು ಭಕ್ತಿಂ ಮಮ ದೇವದೇವೋ
ಗಂಗಾಜಲಾಪ್ಲಾವಿತಕೇಶದೇಶಃ ।
ಸೂಕ್ಷ್ಮೋಽತಿಯೋಗಾತಿಶಯಾದಚಿಂತ್ಯೋ
ನ ಹಿ ಪ್ಲುತೋ ವ್ಯಕ್ತಮುಪೈತಿ ಚಂದ್ರಃ || ೭೯ ||

---

ಧ್ವಜನೂ, ಪಕ್ಷಮಾಸಸ್ವರೂಪಿಯೂ, ಸಂವತ್ಸರರೂಪಿಯೂ ಆದ ಪರಮೇಶ್ವರನಿಗೆ ಅನಂತಾನಂತಪ್ರಣಾಮಗಳೆಂದನು.

೭೬–೭೭. ಅನೇಕ ರೂಪಿಯೂ, ಮುಂಡಿಯೂ, ದಂಡಧಾರಿಯೂ, ಸೇನಾ ನಾಯಕನೂ, ಕಪಾಲಪಾಣಿಯೂ, ದಿಗಂಬರನೂ, ಶಿಖಂಡಿಯೂ, ಧ್ವಜವಂತನೂ, ಮಹಾರಥಿಕನೂ, ನಿಯಮವಂತನೂ, ಬ್ರಹ್ಮಚಾರಿಯೂ, ಋಗ್ಯಜುಸ್ಸಾಮವೇದ್ಯನೂ, ಪುರುಷರೂಪಿಯೂ, ಈಶ್ವರನೂ ಆದ ದೇವನೇ ನಿನಗೆ ನಮಸ್ಕಾರವು. ನಿನ್ನ ಅನೇಕ ಚರಿತ್ರೆಗಳು ಸರ್ವರಿಗೂ ವಿಸ್ಮಯಕರವಾಗಿವೆಯೆಂದು ಹೊಗಳಿದನು.

೭೮-೭೯. ಶ್ರೀ ಮಹಾದೇವನು ಹೇಳಿದನು :—ಹೇ ಸುಂದರಿಯಾದ ಪಾರ್ವತಿಯೇ, ದೇವತೆಗಳು ಹೀಗೆ ನನ್ನನ್ನು ಹೊಗಳಿ ನಮಸ್ಕಾರಪೂರ್ವಕವಾಗಿ ಪ್ರಾರ್ಥಿಸಿದರು. ದೇವದೇವನೂ, ಗಂಗಾಜಲದಿಂದ ತೋಯಿಸಲ್ಪಟ್ಟ ಜಟಾಜೂಟವುಳ್ಳವನೂ, ಸೂಕ್ಷ್ಮನೂ, ಅತ್ಯಂತವಾದ ಯೋಗಾತಿಶಯದಿಂದ ಅಚಿಂತ್ಯನೂ ಆದ ಈಶ್ವರನು ಗಂಗಾಜಲದಿಂದಾವೃತವಾದ ಚಂದ್ರನಂತೆ ವ್ಯಕ್ತಾವ್ಯಕ್ತನಾಗಿರುವನು.

ಏವಂ ಭಗವತಾ ಪೂರ್ವಂ ಬ್ರಹ್ಮಣಾ ಲೋಕಕರ್ತೃಣಾ ।
ಸ್ತುತೋಽಹಂ ವಿವಿಧೈಃ ಸ್ತೋತ್ರೈರ್ವೇದವೇದಾಂಗಸಂಭವೈಃ ॥ ೮೦ ॥

ತತಃ ಪ್ರೀತೋಹ್ಯಹಂತಸ್ಮೈ ಬ್ರಹ್ಮಣೇ ಸು ಮಹಾತ್ಮನೇ ।
ತತೋಽಹಂ ಸೂಕ್ಷ್ಮಯಾ ವಾಚಾ ಪಿತಾಮಹಮಥಾಬ್ರುವಂ ॥ ೮೧ ॥

ಭಗವನ್ ಭೂತಭವ್ಯೇಶ ಲೋಕನಾಥ ಜಗತ್ಪತೇ ।
ಕಿಂ ಕಾರ್ಯಂ ತೇ ಮಯಾ ಬ್ರಹ್ಮನ್ ಕರ್ತವ್ಯಂ ವದ ಸುವ್ರತ ॥ ೮೨ ॥

ಶ್ರುತ್ವಾ ವಾಕ್ಯ ತತೋ ಬ್ರಹ್ಮಾ ಪ್ರತ್ಯುವಾಚಾಂಬುಜೇಕ್ಷಣಃ ।
ಭೂತಭವ್ಯಭವನ್ನಾಥ ಶ್ರೂಯತಾಂ ಕಾರಣೇಶ್ವರ ॥ ೮೩ ॥

---

೮೦. ಎಲೌ ಪಾರ್ವತೀದೇವಿಯೇ, ಲೋಕಕರ್ತನೂ ಸಮಗ್ರೈಶ್ವರ್ಯಾದಿವಂತನೂ ಆದ ಬ್ರಹ್ಮದೇವನು ಹೀಗೆ ವೇದವೇದಾಂಗಗಳಿಂದ ಪೂರ್ಣವಾದ ವಿವಿಧ ಸ್ತೋತ್ರಗಳಿಂದ ಹೊಗಳಿದನು.

೮೧. ಅನಂತರ ನಾನು ಮಹಾತ್ಮನಾದ ಆ ಬ್ರಹ್ಮದೇವನಿಗೆ ಪ್ರೀತನಾಗಿ ಅತಿ ಸೂಕ್ಷ್ಮವೂ ಅರ್ಥಗರ್ಭಿತವೂ ಆದ ಮಾತಿನಿಂದ ಬ್ರಹ್ಮನನ್ನು ಕುರಿತು ಇಂತೆಂದೆನು.

೮೨. ಸ್ವಾಮಿಯೂ, ಭೂತಭವಿಷ್ಯತ್ತುಗಳಿಗೆ ಒಡೆಯನೂ, ಲೋಕನಾಥನೂ, ಜಗತ್ಪತಿಯೂ, ಸಮೀಚೀನವಾದ ನಿಯಮವುಳ್ಳವನೂ ಆದ ಬ್ರಹ್ಮದೇವನೆ, ನೀನು ನನ್ನನ್ನು ಹೊಗಳಲು ಕಾರಣವೇನು ? ನನ್ನಿಂದ ನಿನಗೇನಾಗಬೇಕಾಗಿದೆ ? ಮಾಡಬೇಕಾದ ಕಾರ್ಯವನ್ನು ತಿಳಿಸಬೇಕೆಂಬುದಾಗಿ ಈಶನು ಬ್ರಹ್ಮನಿಗೆ ಹೇಳಿದನು.

೮೩. ಅನಂತರ ಕಮಲಾಕ್ಷನಾದ ಬ್ರಹ್ಮದೇವನು ಈಶ್ವರನ ಆ ಮಾತುಗಳನ್ನು ಕೇಳಿದ ತರುವಾಯವೇ ಭೂತಭವಿಷ್ಯದ್ವರ್ತಮಾನಕಾಲದ ಪ್ರಜೆಗಳ ಈಶನೂ ಕಾರಣಕರ್ತನೂ ಆದ ದೇವನೇ ಕೇಳುವನಾಗೆಂದನು.

ಸುರಾಸುರೈರ್ಮಥ್ಯಮಾನೇ ಪಯೋಧಾವಂಬುಜೇಕ್ಷಣ ।
ಭಗವನ್ಮೇಘಸಂಕಾಶಂ ನೀಲಜೀಮೂತಸನ್ನಿಭಂ ॥ ೮೪ ॥

ಪ್ರಾದುರ್ಭೂತಂ ವಿಷಂಘೋರಂ ಸಂವರ್ತಾಗ್ನಿಸಮಪ್ರಭಂ ।
ಕಾಲಮೃತ್ಯುರಿವೋದ್ಭೂತಂ ಯುಗಾಂತಾದಿತ್ಯವರ್ಚಸಂ ॥ ೮೫ ॥

ತ್ರೈಲೋಕ್ಯೋತ್ಸಾದಿ ಸೂರ್ಯಾಭಂ ವಿಸ್ಫುರಂತಂ ಸಮಂತತಃ ।
ಅಗ್ರೇ ಸಮುತ್ಥಿತಂ ತಸ್ಮಿನ್ ವಿಷಂಕಾಲಾನಲಪ್ರಭಂ ॥ ೮೬ ॥

ತಂ ದೃಷ್ಟ್ವಾ ತು ವಯಂ ಸರ್ವೇ ಭೀತಾಃ ಸಂಭ್ರಾಂತಚೇತಸಃ ।
ತತ್ ಪಿಬಸ್ವ ಮಹಾದೇವ ಲೋಕಾನಾಂ ಹಿತಕಾಮ್ಯಯಾ ॥
ಭವಾನಗ್ರ್ಯಸ್ಯ ಭೋಕ್ತಾ ವೈ ಭವಾಂಶ್ಚೈವ ವರಃ ಪ್ರಭುಃ ॥ ೮೭ ॥

---

೮೪–೮೫. ಎಲೈ ಕಮಲಾಕ್ಷನಾದ ಪರಮೇಶ್ವರನೇ, ಕ್ಷೀರಸಾಗರವು ದೇವಾಸುರರಿಂದ ಕಡೆಯಲ್ಪಡಲಾಗಿ ಮೇಘಸಮಾನವೂ, ನೀಲಮೇಘಶ್ಯಾಮವೂ, ಪ್ರಲಯಾಗ್ನಿಗೆ ಸಮಾನವಾದ ಕಾಂತಿಯುಳ್ಳದ್ದೂ, ಪ್ರಲಯಕಾಲದ ಸೂರ್ಯನಿಗೆ ಸಮಾನವಾದ ತೇಜಸ್ಸುಳದ್ದೂ, ಅತಿ ಘೋರವೂ ಆದ ಕಾಲಕೂಟವೆಂಬ ವಿಷವು ಉದ್ಭವಿಸಿತು.

೮೬. ಆ ವಿಷವು ತ್ರಿಲೋಕನಾಶಕವೂ, ಸೂರ್ಯನಂತೆ ಸರ್ವತ್ರ ಪ್ರಕಾಶಕವೂ, ಪ್ರಲಯಾಗ್ನಿಗೆ ಸಮಪ್ರಭೆಯುಳ್ಳದ್ದೂ ಆಗಿ ಮೊದಲೇ ಉತ್ಪನ್ನವಾಯಿತು.

೮೭. ಅಂತಹ ವಿಷವನ್ನು ನೋಡಿ ನಾವೆಲ್ಲರೂ ಭೀತರೂ ಭ್ರಾಂತಮನಸ್ಕರೂ ಆಗಿರುತ್ತೇವೆ. ಆದುದರಿಂದ ಎಲೈ ಮಹಾದೇವನೇ, ಲೋಕಗಳ ಹಿತಾಪೇಕ್ಷೆಯಿಂದ ನೀನು ಆ ವಿಷವನ್ನು ಪಾನಮಾಡು. ನೀನೇ ಆದಿಯಲ್ಲಿ ಉತ್ಪನ್ನವಾದ ಈ ವಿಷವನ್ನು ಕುಡಿಯಲು ಶಕ್ತನಾಗಿರುವಿ. ನೀನೇ ಎಲ್ಲರಿಗೂ ಉತ್ತಮನೂ ಪ್ರಭುವೂ ಆಗಿರುತ್ತೀಯೆ.

ತ್ವಾಮೃತೇಽನ್ಯೋ ಮಹಾದೇವ ವಿಷಂ ಸೋಢುಂ ನ ವಿದ್ಯತೇ ।
ನಾಸ್ತಿ ಕಶ್ಚಿತ್ ಪುಮಾನ್ ಶಕ್ತಸ್ತ್ರೈಲೋಕ್ಯೇಷು ಚ ಗೀಯತೇ ॥ ೮೮ ॥

ಏವಂ ತಸ್ಯ ವಚಃ ಶ್ರುತ್ವಾ ಬ್ರಹ್ಮಣಃ ಪರಮೇಷ್ಠಿನಃ ।
ಬಾಢಮಿತ್ಯೇವ ತದ್ವಾಕ್ಯಂ ಪ್ರತಿಗೃಹ್ಯ ವರಾನನೇ ॥ ೮೯ ॥

ತತೋಽಹಂ ಪಾತುಮಾರಬ್ಧೋ ವಿಷಮಂತಕಸನ್ನಿಭಂ ।
ಪಿಬತೋ ಮೇ ಮಹಾಘೋರಂ ವಿಷಂ ಸುರಭಯಂಕರಂ ॥
ಕಂಠಃ ಸಮಭವತ್ತೂರ್ಣಂ ಕೃಷ್ಣೋ ಮೇ ವರವರ್ಣಿನಿ ॥ ೯೦ ॥

ತಂ ದೃಷ್ಟ್ವೋತ್ಪಲಪತ್ರಾಭಂ ಕಂಠೇ ಸಕ್ತಮಿವೋರಗಂ ।
ತಕ್ಷಕಂ ನಾಗರಾಜಾನಂ ಲೇಲಿಹಾನಮಿವಸ್ಥಿತಂ ॥ ೯೧ ॥

ಅಥೋವಾಚ ಮಹಾತೇಜಾ ಬ್ರಹ್ಮಾ ಲೋಕಪಿತಾಮಹಃ ।
ಶೋಭಸೇ ತ್ವಂ ಮಹಾದೇವ ಕಂಠೇನಾನೇನ ಸುವ್ರತ ॥ ೯೨ ॥

---

೮೮. ಎಲೈ ಮಹಾದೇವನೇ, ನಿನ್ನನ್ನು ಬಿಟ್ಟರೆ ಈ ವಿಷವನ್ನು ಸಹಿಸಲು ಯಾರಿಗೂ ಶಕ್ತಿಯಿಲ್ಲ. ಮೂರು ಲೋಕದಲ್ಲಿಯೂ ನಿನ್ನನ್ನು ಹೊರತು ಮತ್ತೊಬ್ಬ ಪುರುಷನು ಈ ವಿಷವನ್ನು ಗ್ರಹಿಸಲು ಸಮರ್ಥನಲ್ಲವೆಂದು ಬ್ರಹ್ಮನು ನುಡಿದನು.

೮೯-೯೦. ಎಲೌ ಸುಂದರಿ, ಪರಮಪದವೀಗತನೂ ಸೃಷ್ಟಿಕರ್ತನೂ ಆದ ಬ್ರಹ್ಮನ ಆ ಮಾತುಗಳನ್ನು ನಾನು ಕೇಳಿ ಹಾಗೆಯೇ ಆಗಲೆಂದು ಒಪ್ಪಿಕೊಂಡು, ಯಮನಂತೆ ಭಯಂಕರವಾದ ಆ ವಿಷವನ್ನು ಪಾನಮಾಡಲುಪಕ್ರಮಿಸಿದೆನು. ಓ ಪ್ರಿಯಳೇ, ದೇವದೈತ್ಯರಿಗೆ ಭಯಜನಕವೂ ಘೋರವೂ ಆದ ಆ ವಿಷವನ್ನು ನಾನು ಪಾನಮಾಡಲಾಗಿ ಕೂಡಲೇ ಶುಭ್ರವಾದ ಈ ನನ್ನ ಕಂಠವು ಹೀಗೆ ಕೃಷ್ಣವರ್ಣವಾಗಿ ಪರಿಣಮಿಸಿತೆಂದು ಈಶ್ವರನು ದೇವಿಗೆ ಹೇಳಿದನು.

೯೧-೯೨. ಅನಂತರ ಮಹಾ ತೇಜಸ್ವಿಯೂ, ಲೋಕಪಿತಾಮಹನೂ ಆದ ಬ್ರಹ್ಮದೇವನು ನೈದಲೆ ಪುಷ್ಪದಂತೆ ಕಾಂತಿಯುಳ್ಳ ಆ ಕಂಠವನ್ನು ನೋಡಿ, ಅವನ ಕಂಠದಲ್ಲಿ ನಾಗರಾಜನೂ ತಕ್ಷಕನೂ ಆದ ಸರ್ಪವು ಅಡಗಿರುವಂತೆ ತಿಳಿದು, ಎಲೈ ಸುವ್ರತನಾದ ಮಹಾದೇವನೇ, ಈ ಕಪ್ಪಾದ ಕಂಠದಿಂದ ನೀನು ಬಹಳವಾಗಿ ಹೊಳೆಯುತ್ತೀಯೆ ಎಂದನು.

ತತಸ್ತಸ್ಯ ವಚಃ ಶ್ರುತ್ವಾ ಮಯಾ ಗಿರಿವರಾತ್ಮಜೇ |
ಪಶ್ಯತಾಂ ದೇವಸಂಘಾನಾಂ ದೈತ್ಯಾನಾಂ ಚ ವರಾನನೇ || ೯೩ ||

ಯಕ್ಷಗಂಧರ್ವಭೂತಾನಾಂ ಪಿಶಾಚೋರಗರಾಕ್ಷಸಾಂ |
ಧೃತಂ ಕಂಠೇ ವಿಷಂ ಘೋರಂ ನೀಲಕಂಠಸ್ತತೋಽಹ್ಯಹಂ || ೯೪ ||

ತತ್ ಕಾಲಕೂಟಂ ವಿಷಮುಗ್ರತೇಜಃ
ಕಂಠೇ ಮಯಾ ಪರ್ವತರಾಜಪುತ್ರಿ |
ನಿವೇಶ್ಯಮಾನಂ ಸುರದೈತ್ಯಸಂಘೋ
ದೃಷ್ಟ್ವಾ ಪರಂ ವಿಸ್ಮಯಮಾಜಗಾಮ || ೯೫ ||

ತತಃ ಸುರಗಣಾಃ ಸರ್ವೇ ಸದೈತ್ಯೋರಗರಾಕ್ಷಸಾಃ |
ಊಚುಃ ಪ್ರಾಂಜಲಯೋ ಭೂತ್ವಾ ಮತ್ತಮಾತಂಗಗಾಮಿನೀ || ೯೬ ||

---

೯೩-೯೪. ಗಿರಿಪುತ್ರಿಯಾದ ಪಾರ್ವತಿಯೇ, ತರುವಾಯ ನಾನು ಆ ಬ್ರಹ್ಮನ ಮಾತನ್ನು ಕೇಳಿ ದೇವದೈತ್ಯರ ಸಂಘಗಳು, ಯಕ್ಷರು, ಗಂಧರ್ವರು, ಭೂತಗಳು, ಪಿಶಾಚಗಳು, ಉರಗಗಳು, ಮತ್ತು ರಾಕ್ಷಸರು ಇವರು ನೋಡುತ್ತಿರಲಾಗಿ ಆ ಘೋರವಾದ ವಿಷವನ್ನು ಕಂಠವಲ್ಲಿ ಧರಿಸಿದೆನು. ಅದರಿಂದ ನಾನು ನೀಲಕಂಠನಾದೆನು.

೯೫. ಎಲೌ ಪಾರ್ವತಿಯೇ, ಅತಿ ತೇಜಸ್ವಿಯೂ, ಮಹಾ ಘೋರವೂ ಆದ ಕಾಲಕೂಟವೆಂಬ ವಿಷವನ್ನು ನಾನು ಕತ್ತಿನಲ್ಲಿ ಧರಿಸಿದೆನು. ಹೀಗೆ ನಾನು ಆ ವಿಷವನ್ನು ಕಂಠದಲ್ಲಿ ಧರಿಸಿದ್ದನ್ನು ನೋಡಿ ದೇವದೈತ್ಯರ ಸಂಘವು ಅತ್ಯಂತ ವಿಸ್ಮಯವನ್ನು ಹೊಂದಿತು.

೯೬. ಮಂದಗಮನೆಯಾದ ಪರ್ವತರಾಜ ಕುಮಾರಿಯೇ, ಅನಂತರ ಸಮಸ್ತವಾದ ದೇವಗಣಗಳೂ, ದೈತ್ಯರೂ, ಉರಗಗಳೂ, ರಾಕ್ಷಸರೂ ಇವರೇ ಮೊದಲಾದವರು ಅಂಜಲೀಬದ್ಧರಾಗಿ ಇಂತೆಂದರು.

ಅಹೋ ಬಲಂ ವೀರ್ಯಪರಾಕ್ರಮುಸ್ತೇ
ಅಹೋ ಪುನರ್ಯೋಗಬಲಂ ತವ ।
ಅಹೋ ಪ್ರಭುತ್ವ ತವ ದೇವದೇವ
ಗಂಗಾಜಲಾಸ್ಫಾಲಿ ತಮುಕ್ತಕೇಶ ॥ ೯೭ ॥

ತ್ವಮೇವ ವಿಷ್ಣುಶ್ಚತುರಾಸನಸ್ತ್ವಂ
ತ್ವಮೇವ ಮೃತ್ಯುರ್ವರ ದಸ್ತ್ವಮೇವ ।
ತ್ವಮೇವ ಸೂರ್ಯೋ ರಜನೀಕರಶ್ಚ ।
ತ್ವಮೇವ ಭೂಮಿಃ ಸಲಿಲಂ ತ್ವಮೇವ ॥ ೯೮ ॥

ತ್ವಮೇವ ಯಜ್ಞೋ ನಿಯಮುಸ್ತ್ವಮೇವ
ತ್ವಮೇವ ಭೂತಂ ಭವಿತಾ ತ್ವಮೇವ ।
ತ್ವಮೇವ ಚಾದಿರ್ನಿಧನಂ ತ್ವಮೇವ
ಸ್ಥೂಲಶ್ಚ ಸೂಕ್ಷ್ಮಃ ಪ್ರುರುಷಸ್ತ್ವಮೇವ ॥ ೯೯ ॥

ತ್ವಮೇವ ಸೂಕ್ಷ್ಮಸ್ಯ ಪರಸ್ಯ ಸೂಕ್ಷ್ಮಃ
ತ್ವಮೇವ ವಹ್ನಿಃ ಪವನಸ್ತ್ವಮೇವ ।
ತ್ವಮೇವ ಸರ್ವಸ್ಯ ಚರಾಚರಸ್ಯ
ಲೋಕಸ್ಯ ಕರ್ತಾ ಪ್ರಲಯೇ ಚ ಗೋಪ್ತಾ ॥ ೧೦೦ ॥

---

೯೭. ಗಂಗಾಜಲದಿಂದ ಪೊಡೆಯಲ್ಪಟ್ಟ ಕೇಶಪಾಶವುಳ್ಳ ದೇವದೇವನಾದ ಪರಮೇಶ್ವರನೇ, ನಿನ್ನ ವೀರ್ಯ, ಪರಾಕ್ರಮ, ಶಕ್ತಿ, ಸಾಮರ್ಥ್ಯ, ಯೋಗ, ಪ್ರಭಾವ, ಘೋರಿತನ ಇವುಗಳು ಪರಮಾಶ್ಚರ್ಯಕರವಾಗಿವೆ.

೯೮. ಎಲೈ ಪರಮೇಶ್ವರನೇ, ನೀನೇ ಬ್ರಹ್ಮನೂ, ವಿಷ್ಣುವೂ, ಮಹೇಶ್ವರನೂ, ಯಮನೂ, ವರದನೂ, ಸೂರ್ಯನೂ, ಚಂದ್ರನೂ, ಭೂಮಿಯೂ, ಜಲವೂ ಇವುಗಳಾಗಿರುತ್ತೀಯೆ.

೯೯-೧೦೦. ನೀನೇ ಸೂಕ್ಷ್ಮವಸ್ತುಗಿಂತಲೂ ಅತ್ಯಂತ ಸೂಕ್ಷ್ಮನಾಗಿಯೂ, ನೀನೇ ಅಗ್ನಿಯೂ, ಗಾಳಿಯೂ, ಚರಾಚರಾತ್ಮಕವಾದ ಸಕಲ ಲೋಕಗಳ ಕರ್ತನೂ, ಪ್ರಳಯವಲ್ಲಿ ರಕ್ಷಕನೂ ಆಗಿರುತ್ತೀಯೆ ಎಂಬುದಾಗಿ ಈಶನನ್ನು ಹೊಗಳಿದರು.

ಇತೀದಮುಕ್ತ್ವಾ ವಚನಂ ಸುರೇಂದ್ರಾಃ
ಪ್ರಗೃಹ್ಯ ಸೋಮಂ ಪ್ರಣಿಪತ್ಯ ಮೂರ್ಧ್ನಾ ।
ಗತಾ ವಿಮಾನೈರನಿಗೃಹ್ಯ ವೇಗೈಃ
ಮಹಾತ್ಮನೋ ಮೇರುಮುಪೇತ್ಯ ಸರ್ವೇ ॥ ೧೦೧ ॥

ಇತ್യೇತತ್ಪರಮಂ ಗುಹ್ಯಂ ಪುಣ್ಯಾತ್ಪುಣ್ಯಮುಹತ್ತರಂ ।
ನೀಲಕಂಠೇತಿ ಯತ್ ಪ್ರೋಕ್ತಂ ವಿಖ್ಯಾತಂ ಲೋಕವಿಶ್ರುತಂ ॥ ೧೦೨ ॥

ಸ್ವಯಂ ಸ್ವಯಂಭುವಾ ಪ್ರೋಕ್ತಂ ಪುಣ್ಯಾಂ ಪಾಪಪ್ರಣಾಶನೀಂ ।
ಯಸ್ತು ಧಾರಯತೇ ನಿತ್ಯಮೇನಾಂ ಬ್ರಹ್ಮೋದ್ಭವಾಂ ಕಥಾಂ ॥
ತಸ್ಯಾಹಂ ಸಂಪ್ರವಕ್ಷ್ಯಾಮಿ ಫಲಂ ವೈ ವಿಪುಲಂ ಮಹತ್ ॥ ೧೦೩ ॥

ವಿಷಂ ತಸ್ಯ ವರಾರೋಹೇ ಸ್ಥಾವರಂ ಜಂಗಮಂತಥಾ ।
ಗಾತ್ರಂ ಪ್ರಾಪ್ಯ ಚ ಸುಶ್ರೋಣಿ ಕ್ಷಿಪ್ರಂ ತತ್ ಪ್ರತಿಹನ್ಯತೇ ॥ ೧೦೪ ॥

---

೧೦೧. ಮಹಾತ್ಮರಾದ ದೇವತೆಗಳೆಲ್ಲರೂ ಹೀಗೆ ಈ ಮಾತುಗಳಿಂದ ಪರಮೇಶನನ್ನು ಹೊಗಳಿ, ಅವನ ಆಜ್ಞೆಯನ್ನು ಸ್ವೀಕರಿಸಿ. ಅವನಿಗೆ ನಮಸ್ಕರಿಸಿ, ಚಂದ್ರನನ್ನು ಕರೆದುಕೊಂಡು ಅತಿ ವೇಗವಾದ ವಿಮಾನದಿಂದ ಮೇರುಪರ್ವತಕ್ಕೆ ಎಲ್ಲರೂ ಹೋದರು.

೧೦೨. ಪರಮೇಶ್ವರನಿಗೆ ನೀಲಕಂಠನೆಂಬ ಯಾವ ನಾಮವು ಮೂರುಲೋಕಗಳಲ್ಲಿಯೂ ಪ್ರಖ್ಯಾತವಾಗಿದೆಯೋ, ಅದು ಅತಿ ರಹಸ್ಯವಾಗಿಯೂ, ಪುಣ್ಯಕ್ಕಿಂತಲೂ ಪುಣ್ಯಕರವಾಗಿಯೂ, ಅತ್ಯುತ್ತಮವಾಗಿಯೂ ಇರುತ್ತದೆ.

೧೦೩. ಈ ಕಥೆಯನ್ನು ಪೂರ್ವದಲ್ಲಿ ಸಾಕ್ಷಾತ್ ಬ್ರಹ್ಮದೇವನೇ ಹೇಳಿರುವನು. ಈ ಆಖ್ಯಾನವು ಪುಣ್ಯಕರವಾಗಿಯೂ, ಪಾಪನಾಶಕವಾಗಿಯೂ ಇರುತ್ತದೆ. ಯಾವ ಪುರುಷನು ಬ್ರಹ್ಮನು ಹೇಳಿದ ಈ ಕಥೆಯನ್ನು ಕೇಳಿ ಹೃದಯದಲ್ಲಿ ಧರಿಸುತ್ತಾನೆಯೋ ಅದನಿಗೆ ಉಂಟಾಗುವ ಮಹಾ ಫಲವನ್ನು ವಿವರಿಸುತ್ತೇನೆ ಕೇಳು ಎಂದು ಈಶ್ವರನು ಹೇಳಿದನು.

೧೦೪. ಯಾವ ಪುರುಷನು ಈ ಕಥೆಯನ್ನು ಕೇಳುವನೋ ಅವನಿಗೆ ಸ್ಥಾವರ ಜಂಗಮಗಳಿಂದ ಸಂಭವಿಸಿದ ಘೋರ ವಿಷವು ಕ್ಷಿಪ್ರದಲ್ಲಿ ಪರಿಹಾರವಾಗುವುದು. ಎಲೌ ಸುಂದರಿ, ಈ ಮಾತು ನಿಜವಾಗಿರುವುದು.

ಶಮಯತ್ಯಶುಭಂ ಘೋರಂ ದುಸ್ವಪ್ನಂ ಚಾಪಕರ್ಷತಿ ।
ಸ್ತ್ರೀಷು ವಲ್ಲಭತಾಂ ಯಾತಿ ಸಭಾಯಾಂ ಪಾರ್ಥಿವಸ್ಯ ಚ ॥ ೧೧೫ ॥

ವಿವಾದೇ ಜಯಮಾಪ್ನೋತಿ ಯುದ್ಧೇ ಶೂರತ್ವಮೇವ ಚ ।
ಗಚ್ಛತಃ ಕ್ಷೇಮಮಧ್ವಾನಂ ಗೃಹೇ ಚ ನಿತ್ಯಸಂಪದಃ ॥ ೧೧೬ ॥

ಶರೀರಭೇದೇ ವಕ್ಷ್ಯಾಮಿ ಗತಿಂ ತಸ್ಯ ವರಾನನೇ ।
ನೀಲಕಂಠೋ ಹರಿಚ್ಛ್ಮಶ್ರುಃ ಶಶಾಂಕಾಂಕಿತಮೂರ್ಧಜಃ ॥ ೧೧೭ ॥

ತ್ರ್ಯಕ್ಷಸ್ತ್ರಿಶೂಲಪಾಣಿಶ್ಚ ವೃಷಯಾನಃ ಪಿನಾಕಧೃಕ್ ।
ನಂದಿತುಲ್ಯಃ ಬಲಃ ಶ್ರೀಮಾನ್ ನಂದಿತುಲ್ಯಪರಾಕ್ರಮಃ ॥ ೧೧೮ ॥

---

೧೧೫. ಮತ್ತು ಈ ಕಥೆಯು ಭಯಂಕರವಾದ ಅಮಂಗಳವನ್ನು ಪರಿಹರಿಸುವುದು. ದುಸ್ವಪ್ನವನ್ನು ಪರಿಹರಿಸುವುದು. ಸ್ತ್ರೀಯರ ಪರಮ ಪ್ರೀತಿಗೆ ಪಾತ್ರನಾಗುವನು. ರಾಜರ ಸಭೆಯಲ್ಲಿ ವಿವಾದವಾದರೆ ಜಯವನ್ನು ಪಡೆಯುವನು.

೧೧೬. ಯಾವನು ಈ ಕಥೆಯನ್ನು ಕೇಳುವನೋ ಅವನಿಗೆ ವಿವಾದದಲ್ಲಿಯೂ ಜಗಳದಲ್ಲಿಯೂ ಜಯವೂ, ಯುದ್ಧದಲ್ಲಿ ಶತ್ರುನಾಶನವೂ, ಮಾರ್ಗದಲ್ಲಿ ಕ್ಷೇಮವೂ, ಗೃಹದಲ್ಲಿ ನಿತ್ಯಸಂಪತ್ತೂ ಉಂಟಾಗುವುವು.

೧೧೭-೧೧೮. ಎಲೌ ಸುಂದರಮುಖಿಯೇ, ಹೀಗೆ ಮೇಲೆ ಹೇಳಿದ ಐಹಿಕ ಸಂಪತ್ತು ಉಂಟಾಗುವುದಲ್ಲದೆ, ಪರದಲ್ಲಾಗುವ ವಿಷಯವನ್ನು ಹೇಳುವೆನು ಕೇಳು ಯಾವನು ಕಥಾಶ್ರವಣ ಮಾಡುವನೋ, ಅವನು ನೀಲಕಂಠನೂ, ಹಸುರಾದ ದಾಡೀ ಮೀಸೆಯುಳ್ಳವನೂ, ಚಂದ್ರಮೌಳಿಯೂ, ತ್ರಿನೇತ್ರನೂ, ಶೂಲಪಾಣಿಯೂ, ವೃಷಭವಾಹನನೂ, ಪಿನಾಕಧರನೂ, ನಂದೀಶ್ವರನಿಗೆ ಸಮನಾದ ಬಲ, ಸಂಪತ್ತು, ಸಾಮರ್ಥ್ಯ ಇವುಗಳುಳ್ಳವನಾಗಿ ಸನ್ನಪ್ಪಣೆಯಂತೆ ಸರ್ವಲೋಕಗಳಲ್ಲಿ ಸಂಚಾರಮಾಡುವನು.

ವಿಚರತ್ಯಚಿರಾತ್ ಸರ್ವಾನ್ ಸರ್ವಲೋಕಾನ್ಮಮಾಜ್ಞಯಾ ।
ನ ಹನ್ಯಂತೇ ಗತಿಸ್ತಸ್ಯ ಅನಿಲಸ್ಯ ಯಥಾಽಪರೇ ॥
ಮಮ ತುಲ್ಯಬಲೋ ಭೂತ್ವಾ ತಿಷ್ಠತ್ಯ ಭೂತಸಂಪ್ಲವಂ ॥ ೧೦೯ ॥

ಮಮ ಭಕ್ತಾ ವರಾರೋಹೇ ಯೇ ಚ ಶೃಣ್ವಂತಿ ಮಾನವಾಃ ।
ತೇಷಾಂ ಗತಿಂ ಪ್ರವಕ್ಷ್ಯಾಮಿ ಇಹಲೋಕೇ ಪರತ್ರ ಚ ॥ ೧೧೦ ॥

ಬ್ರಾಹ್ಮಣೋ ವೇದಮಾಪ್ನೋತಿ ಕ್ಷತ್ರಿಯೋ ಜಯತೇ ಮಹೀಂ ।
ವೈಶಸ್ತು ಲಭತೇ ಲಾಭಂ ಶೂದ್ರಃ ಸುಖಮವಾಪ್ನುಯಾತ್ ॥ ೧೧೧ ॥

ವ್ಯಾಧಿತೋ ಮುಚ್ಯತೇ ರೊಗಾದ್ಬದ್ಧೋ ಮುಚ್ಯತೇ ಬಂಧನಾತ್ ।
ಗುರ್ವಿಣೀ ಲಭತೇ ಪುತ್ರಂ ಕನ್ಯಾಮಿಂದತಿ ಸತ್ಪತಿಂ ॥
ನಷ್ಟಂ ಚ ಲಭತೇ ಸರ್ವಂ ಇಹಲೋಕೇ ಪರತ್ರ ಚ ॥ ೧೧೨ ॥

---

೧೦೯. ಅವನು ಆಕಾಶವೇ ಮೊದಲಾದ ಸ್ಥಳಗಳಲ್ಲಿ ವಾಯುವಿನಂತೆ ತಡೆಯಿಲ್ಲದೆ ಸಂಚರಿಸಬಲ್ಲನು. ಮತ್ತು ನನಗೆ ಸಮಾನವಾದ ಶಕ್ತಿಗಳುಳ್ಳವನಾಗಿ ಭೂತಪ್ರಲಯದ ವರೆಗೂ ಸ್ಥಿರವಾಗಿರುವನು.

೧೧೦. ಎಲೌ ಮಂಗಳಾಂಗಿಯಾದ ಗಿರಿಜೆಯೇ, ನನ್ನ ಭಕ್ತರಲ್ಲಿ ಯಾವನು ಈ ಕಥೆಯನ್ನು ಕೇಳುವನೋ ಅವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉಂಟಾಗುವ ಫಲವನ್ನು ಹೇಳುತ್ತೇನೆ ಕೇಳುವನಾಗು.

೧೧೧-೧೧೨. ಈ ಕಥೆಯನ್ನು ಕೇಳಿದ ಬ್ರಾಹ್ಮಣನು ವೇದಾಧ್ಯಯನಪರ ನಾಗುವನು. ಕ್ಷತ್ರಿಯನು ಭೂಮಿಯನ್ನು ಜಯಿಸುವನು. ವೈಶ್ಯನು ವ್ಯಾಪಾರದಲ್ಲಿ ಲಾಭವನ್ನು ಹೊಂದುವನು. ಶೂದ್ರನು ನಿತ್ಯಸುಖವನ್ನು ಪಡೆಯುವನು. ರೋಗಿಯು ರೋಗದಿಂದ ಮುಕ್ತನಾಗುವನು. ಬದ್ಧನಾದವನು ಬಂಧನದಿಂದ ವಿಮುಕ್ತನಾಗುವನು. ಗರ್ಭಿಣಿಯಾದವಳು ದಿವ್ಯಪುತ್ರನನ್ನು ಪಡೆಯುವಳು. ಕನ್ನಿಕೆಯು ಉತ್ತಮನಾದ ಪತಿಯನ್ನು ಪಡೆಯುವಳು. ವಸ್ತುಗಳೇನಾದರೂ ನಷ್ಟವಾಗಿದ್ದರೆ ಅವನ್ನು ಹೊಂದುವರು. ಪರಲೋಕದಲ್ಲಿಯೂ ಉತ್ತಮ ಪದವಿಯು ದೊರೆಯುವುದು.

ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ ಫಲಂ ।
ತತ್ ಫಲಂ ಭವತಿ ಶ್ರುತ್ವಾ ವಿಭೋರ್ದಿವ್ಯಾಮಿಮಾಂ ಕಥಾಂ ॥ ೧೧೩ ॥

ಪಾದಂ ವಾ ಯದಿ ವಾಪ್ಯರ್ಧಂ ಶ್ಲೋಕಂ ಶ್ಲೋಕಾರ್ಥಮೇವವಾ ।
ಯಸ್ತು ಧಾರಯತೇ ನಿತ್ಯಂ ರುದ್ರಲೋಕಂ ಸ ಗಚ್ಛತಿ ॥ ೧೧೪ ॥

ಕಥಾಮಿಮಾಂ ಪುಣ್ಯಫಲಾದಿಯುಕ್ತಾಂ
ನಿವೇದ್ಯ ದೇವ್ಯಾಃ ಶಶಿಬದ್ಧಮೂರ್ಧಜಃ ।
ವೃಷಸ್ಯ ಪೃಷ್ಠೇನ ಸಹೋಮಯಾ ಪ್ರಭುಃ
ಜಗಾಮ ಕಿಷ್ಕಿಂಧಗುಹಾಂ ಗುಹಪ್ರಿಯಃ ॥ ೧೧೫ ॥

ಕ್ರಾಂತಂ ಮಯಾ ಪಾಪಹರಂ ಮಹಾಪದಂ
ನಿವೇದ್ಯ ತೇಭ್ಯಃ ಪ್ರದದೌ ಪ್ರಭಂಜನಃ ।

---

೧೧೩. ಸ್ವಾಮಿಯಾದ ಪರಮೇಶ್ವರನ ಈ ಕಥೆಯನ್ನು ಯಾವನು ಕೇಳು ವನೋ, ಅವನಿಗೆ ಲಕ್ಷ ಗೋದಾನ ಮಾಡಿದರೆ ಯಾವ ಫಲ ಬರುವುದೋ, ಅಂತಹ ಫಲವು ಖಂಡಿತವಾಗಿ ಬರುವುದು.

೧೧೪. ಯಾವನು ಈ ಕಥೆಯ ಸಂಬಂಧವಾದ ಶ್ಲೋಕದ ಒಂದು ಪಾದ ವನ್ನಾಗಲೀ ಅರ್ಧ ಪಾದವನ್ನಾಗಲೀ ಶ್ಲೋಕವನ್ನು ಅಥವಾ ಶ್ಲೋಕಾರ್ಥವನ್ನು ಹೃದಯದಲ್ಲಿ ಧರಿಸುವನೋ ಅವನು ರುದ್ರಪದವಿಯನ್ನು ಹೊಂದುವನು.

೧೧೫. ಗುಹಪ್ರಿಯನೂ, ಚಂದ್ರಮೌಳಿಯೂ, ಪ್ರಭುವೂ ಆದ ಪರಮೇಶ್ವರನು ಉಮಾದೇವಿಗೆ ಅತ್ಯಂತ ಪುಣ್ಯಪ್ರದವಾದ ಈ ಕಥೆಯನ್ನು ನಿರೂಪಿಸಿ, ಪಾರ್ವತಿಯ ಸಂಗಡ ವೃಷಭಾರೂಢನಾಗಿ ಕಿಷ್ಕಿಂಧಾಗುಹೆಯನ್ನು ಪ್ರವೇಶಮಾಡಿದನು.

೧೧೬. ಎಲೈ ವಿಪ್ರವರ್ಯರೇ, ವಾಯುದೇವನು ಹೀಗೆ ಈ ಕಥೆಯನ್ನು ಆ ಮಹರ್ಷಿಗಳಿಗೆ ಹೇಳಿ, ಪಾಪನಾಶಕವಾದ ಮಹಾ ಪದವಿಯನ್ನು ಅವರಿಗೆ ಕೊಟ್ಟು,

ಅಧೀತ್ಯ ಸರ್ವಂತ್ವಖಿಲಂ ಸುಲಕ್ಷಣಂ
ಜಗಾಮ ಆದಿತ್ಯಪಥಂ ದ್ವಿಜೋತ್ತಮಃ ॥ ೧೧೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ನೀಲಕಂಠಸ್ತವೋ" ನಾಮ ಚತುಃಪಂಚಾಶೋಽಧ್ಯಾಯಃ

---

ಸುಲಕ್ಷಣವಾದ ಸಂಪೂರ್ಣ ಕಥೆಯನ್ನು ಸ್ವಯಂಪಠಿಸಿ, ಸೂರ್ಯದ್ವಾರದಿಂದ ಪರಮಪದವಿಯನ್ನು ಹೊಂದಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ನೀಲಕಂಠಸ್ತವವೆಂಬ ಐವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.

## ಐವತ್ತನಾಲ್ಕನೆಯ ಅಧ್ಯಾಯದ ಸಾರಾಂಶವು

ಪರಮೇಶ್ವರನು ವಿಷವನ್ನು ಪಾನಮಾಡಿ ತನ್ನ ಕಂಠದಲ್ಲಿ ಸ್ಥಾಪಿಸಿರುವುದರಿಂದ ನೀಲಕಂಠನಾದನೆಂಬ ವಿಷಯವು ಈ ಅಧ್ಯಾಯದ ಸಾರಾಂಶವಾಗಿದೆ. ಅತಿ ಮನೋಹರವಾದ ಕೈಲಾಸಗಿರಿಯಲ್ಲಿ ಪಾರ್ವತೀ ಪರಮೇಶ್ವರರು ಸಂತೋಷದಿಂದಿರಲು, ಒಂದಾನೊಂದು ದಿವಸ ಪಾರ್ವತಿಯು ಈಶನನ್ನು ನೋಡಿ ಪ್ರಭುವೇ, ಶುಭ್ರವಾದ ನಿನ್ನ ಕಂಠವು ನೀಲಮೇಘದಂತೆ ಕಪ್ಪಾಗಲು ಕಾರಣವೇನೆಂದು ಕೇಳಿದಳು. ಆಗ ಈಶ್ವರನು ಓ ಪ್ರಿಯಳೇ, ಪೂರ್ವದಲ್ಲಿ ದೇವಾಸುರರು ಕೂಡಿ ಅಮೃತಕ್ಕಾಗಿ ಸಮುದ್ರವನ್ನು ಮಥಿಸಿದರು. ಆಗ ಅತಿ ಭಯಂಕರವೂ ಪ್ರಲಯಾಗ್ನಿಗೆ ಸಮವೂ ಆದ ಕಾಲಕೂಟವಿಷವು ಮೊದಲು ಉತ್ಪನ್ನವಾಯಿತು. ಅದರಿಂದ ವಿಷ್ಣುವಿನ ದೇಹವು ನೀಲಮೇಘಶ್ಯಾಮವಾಯಿತು. ಅದನ್ನು ಕಂಡು ದೇವಾದಿಗಳು ಭಯಭ್ರಾಂತರಾಗಿ ಬ್ರಹ್ಮನ ಬಳಿಗೆ ಹೋಗಿ ಮೊರೆಹೊಕ್ಕರು. ಆಗ ಬ್ರಹ್ಮದೇವನು ಇದನ್ನು ಧರಿಸಲು ಈಶ್ವರನೊಬ್ಬನೇ ಶಕ್ತನು. ಮತ್ತೆ ಯಾರಿಂದಲೂ ಸಾಧ್ಯವಿಲ್ಲವೆಂದು ಹೇಳಿ ಆ ದೇವತೆಗಳೊಡನೆ ಕೈಲಾಸಕ್ಕೆ ಹೋಗಿ ಪರಮೇಶನನ್ನು ಹೊಗಳಿ ದೇವತೆಗಳನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದನು. ಆಗ ಮಹಾದೇವನು ಲೋಕಕಲ್ಯಾಣಕ್ಕಾಗಿ ಆ ವಿಷವನ್ನು ತನ್ನ ಕಂಠದಲ್ಲಿ ಧರಿಸಿದನು. ಅದರಿಂದ ಈ ಕಂಠವು ಹೀಗ ನೀಲವಾಗಿದೆಯೆಂದು ಹೇಳಿದನು. ಈ ಕಥೆಯನ್ನು ಕೇಳಿದವರಿಗೆ ಇಹಪರಗಳಲ್ಲಿ ಪರಮಸುಖಲಾಭವಾಗುವುದೆಂಬ ವಿಷಯವು ವರ್ಣಿತವಾಗಿದೆ.

—|| ಹರಿಃ ಓಂ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣಂ

## ಪಂಚಪಂಚಾಶೋಽಧ್ಯಾಯಃ

|| ಋಷಯ ಊಚುಃ ||

ಗುಣಕರ್ಮಪ್ರಭಾವೈಶ್ಚ ಕೋಽಧಿಕೋ ವದತಾಂ ವರ |
ಶ್ರೋತುಮಿಚ್ಛಾಮಹೇ ಸಮ್ಯಗಾಶ್ಚರ್ಯಂ ಗುಣವಿಸ್ತರಂ || ೧ ||

|| ಸೂತ ಉವಾಚ ||

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ |
ಮಹಾದೇವಸ್ಯ ಮಹಾತ್ಮ್ಯಂ ವಿಭುತ್ವಂಚ ಮಹಾತ್ಮನಃ || ೨ ||

---

## ಮೂವತ್ತೈದನೆಯ ಅಧ್ಯಾಯವು

೧. ಮುನಿಗಳು ಹೇಳಿದರು:—ಎಲೈ ವಕ್ತೃಗಳಲ್ಲಿ ಶ್ರೇಷ್ಠನಾದ ಸೂತ ಮುನಿಯೇ, ಬ್ರಹ್ಮಾದಿ ದೇವತೆಗಳಲ್ಲಿ ಗುಣ, ಕರ್ಮ, ಸಾಮರ್ಥ್ಯ ಇವುಗಳಿಂದ ಉತ್ತಮನಾದವರು ಯಾರು? ಈ ವಿಷಯಗಳನ್ನು ಕೇಳಬೇಕೆಂಬ ಕುತೂಹಲವು ನಮಗೆ ಬಹಳವಾಗಿದೆ. ಆದುದರಿಂದ ಆಶ್ಚರ್ಯಕರವಾದ ಅವರ ಗುಣವನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಕೇಳಿಕೊಂಡರು.

೨. ಸೂತಮುನಿಯು ಹೇಳಿದನು:—ಎಲೈ ಮುನಿವರ್ಯರೇ, ಈ ವಿಷಯದಲ್ಲಿ ಅತಿ ಪುರಾತನವಾದ ಇತಿಹಾಸವನ್ನು ಹೇಳುವೆನು ಕೇಳಿ. ಅದರಲ್ಲಿ ಮಹಾತ್ಮನಾದ ಮಹಾದೇವನ ಮಾಹಾತ್ಮ್ಯವೂ ಮತ್ತು ವಿಭುತ್ವವೂ ವರ್ಣಿತವಾಗಿದೆ.

ಪೂರ್ವಂ ತ್ರೈಲೋಕ್ಯವಿಜಯೋ ವಿಷ್ಣುನಾ ಸಮುದಾಹೃತಂ ।
ಬಲಿಂಬದ್ಧ್ವಾ ಮಹೌಜಾಸ್ತು ತ್ರೈಲೋಕ್ಯಾಧಿಪತಿಃ ಪುರಾ ॥ ೩ ॥

ಪ್ರಣಷ್ಟೇಷು ಚ ದೈತ್ಯೇಷು ಪ್ರಹೃಷ್ಟೇ ಚ ಶಚೀಪತೌ ।
ಅಥಾಜಗ್ಮುಃ ಪ್ರಭುಂದ್ರಷ್ಟುಂ ಸರ್ವೇ ದೇವಾಃ ಸವಾಸವಾಃ ॥ ೪ ॥

ಯತ್ರಾಸ್ತೇ ವಿಶ್ವರೂಪಾತ್ಮಾ ಕ್ಷೀರೋದಸ್ಯ ಸಮೀಪತಃ ।
ಸಿದ್ಧಬ್ರಹ್ಮರ್ಷಯೋ ಯಕ್ಷ ಗಂಧರ್ವಾಪ್ಸರಸೌಂಗಣಾಃ ॥ ೫ ॥

ನಾಗಾ ದೇವರ್ಷಯಶ್ಚೈವ ನದ್ಯಃ ಸರ್ವೇ ಚ ಪರ್ವತಾಃ ।
ಅಭಿಗಮ್ಯ ಮಹಾತ್ಮಾನಂ ಸ್ತುವಂತಿ ಪುರುಷಂ ಹರಿಂ ॥ ೬ ॥

---

೩. ಪೂರ್ವದಲ್ಲಿ ಮೂರು ಲೋಕಾಧಿಪತಿಯೂ, ಮಹಾ ತೇಜಸ್ವಿಯೂ ಆದ ಶ್ರೀಹರಿಯು ಬಲಿಚಕ್ರವರ್ತಿಯನ್ನು ಬಂಧಿಸಿ, ತ್ರೈಲೋಕ್ಯವಿಜಯವನ್ನು ಹೊಂದಿದ ಇತಿಹಾಸವನ್ನು ಹೇಳಿದನು.

೪. ಅಂತಹ ಸಮಯದಲ್ಲಿ ದೈತ್ಯರೆಲ್ಲರೂ ನಾಶವಾದರು. ಇಂದ್ರನೇ ಮೊದಲಾದ ದೇವತೆಗಳಿಗೆ ಸಂತೋಷವಾಯಿತು. ಹೀಗೆ ಸಂತುಷ್ಟರಾದ ದೇವತೆಗಳೆಲ್ಲರೂ ಇಂದ್ರನ ಸಂಗಡ ಪ್ರಭುವಾದ ವಿಷ್ಣುವನ್ನು ನೋಡಲು ಬಂದರು.

೫-೬. ವಿಶ್ವರೂಪಿಯಾದ ಶ್ರೀಹರಿಯು ಆಗ ಕ್ಷೀರಸಾಗರದಲ್ಲಿ ಶೇಷಶಾಯಿಯಾಗಿದ್ದನು. ಅಂತಹ ಸಮಯದಲ್ಲಿ ಸಿದ್ಧರು, ಬ್ರಹ್ಮರ್ಷಿಗಳು, ಯಕ್ಷರು, ಗಂಧರ್ವರು, ಅಪ್ಸರಸಿಯರು, ನಾಗಗಳು, ದೇವರ್ಷಿಗಳು, ನದಿಗಳು, ಪರ್ವತಗಳು ಇವೇ ಮೊದಲಾದ ಸರ್ವರೂ ಮಹಾತ್ಮನಾದ ಶ್ರೀಹರಿಯ ಬಳಿಗೆ ಹೋಗಿ ಸ್ತೋತ್ರ ಮಾಡಿದರು.

ತ್ವಂ ಧಾತಾ ತ್ವಂಚ ಕರ್ತಾಸ್ಯ ತ್ವಂ ಲೋಕಾನ್‌ಸೃಜಿಸಿ ಪ್ರಭೋ ।
ತ್ವತ್ಪ್ರಸಾದಾಚ್ಚ ಕಲ್ಯಾಣಂ ಪ್ರಾಪ್ತಂ ತ್ರೈಲೋಕ್ಯಮವ್ಯಯಂ ॥
ಅಸುರಾಶ್ಚ ಜಿತಾಃ ಸರ್ವೇ ಬಲಿರ್ಬದ್ಧಶ್ಚ ವೈ ತ್ವಯಾ ॥ ೭ ॥

ಏವಮುಕ್ತಃ ಸುರೈರ್ವಿಷ್ಣುಃ ಸಿದ್ಧೈಶ್ಚ ಪರಮರ್ಷಿಭಿಃ ।
ಪ್ರತ್ಯುವಾಚ ತತೋ ದೇವಾನ್ ಸರ್ವಾಂಸ್ತಾನ್ ಪುರುಷೋತ್ತಮಃ ॥ ೮ ॥

ಶ್ರೂಯತಾಮಭಿಧಾಸ್ಯಾಮಿ ಕಾರಣಂ ಸುರಸತ್ತಮಾಃ ।
ಯಃ ಸ್ರಷ್ಟಾ ಸರ್ವಭೂತಾನಾಂ ಕಾಲಃ ಕಾಲಕರಃ ಪ್ರಭುಃ ॥ ೯ ॥

ಯೇನ ಹಿ ಬ್ರಹ್ಮಣಾ ಸಾರ್ಧಂ ಸೃಷ್ಟಾ ಲೋಕಾಶ್ಚ ಮಾಯಯಾ ।
ತಸ್ಯೈವ ಚ ಪ್ರಸಾದೇನ ಆದೌ ಸಿದ್ಧತ್ವಮಾಗತಂ ॥ ೧೦ ॥

---

೭. ಎಲೈ ಶ್ರೀಹರಿಯೇ, ನೀನೇ ಬ್ರಹ್ಮನು. ನೀನೇ ಸೃಷ್ಟಿಕರ್ತನು. ಪ್ರಭುವಾದ ನೀನೇ ಲೋಕಗಳನ್ನು ಸೃಷ್ಟಿಸುತ್ತೀಯೆ. ನಿನ್ನ ಅನುಗ್ರಹದಿಂದಲೇ, ಮೂರು ಲೋಕವೂ ಕಲ್ಯಾಣವನ್ನು ಹೊಂದಿದೆ. ನಾಶರಹಿತವಾಗಿಯೂ ಇದೆ. ಸಮಸ್ತರಾದ ದೈತ್ಯರೆಲ್ಲರೂ ಸೋತುಹೋಗಿರುವರು. ಬಲಿಯನ್ನು ಬಂಧಿಸಿರುತ್ತೀಯೆ ಎಂದು ದೇವತೆಗಳು ಹರಿಯನ್ನು ಹೊಗಳಿದರು.

೮. ಹೀಗೆ ಸುರರು, ಸಿದ್ಧರು, ಪರಮರ್ಷಿಗಳು ಶ್ರೀವಿಷ್ಣುವನ್ನು ಹೊಗಳಲಾಗಿ, ಪುರುಷೋತ್ತಮನಾದ ಹರಿಯು ಆ ಸಮಸ್ತರಾದ ದೇವತೆಗಳನ್ನು ಕುರಿತು ಇಂತೆಂದನು.

೯-೧೦. ಎಲೈ ದೇವತೆಗಳಿರಾ, ಇದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳಿರಿ. ಯಾವನು ಸರ್ವಭೂತಗಳಿಗೂ ಸೃಷ್ಟಿಕರ್ತನೂ, ಕಾಲರೂಪಿಯೂ, ಕಾಲನಿಯಾಮಕನೂ, ಪ್ರಭುವೂ ಆಗಿರುವನೋ, ಮತ್ತು ಯಾವನು ಮಾಯೆಯಿಂದ ಬ್ರಹ್ಮಾದಿ ಸಮಸ್ತ ಲೋಕಗಳನ್ನು ಸೃಷ್ಟಿಸಿರುವನೋ, ಅವನ ಅನುಗ್ರಹದಿಂದಲೇ ಪೂರ್ವದಲ್ಲಿ ಜಯವು ಸಂಭವಿಸಿರುತ್ತದೆ ಎಂದು ಹರಿಯು ಹೇಳಿದನು.

ಪುರಾ ತಮಸಿ ಚಾವ್ಯಕ್ತೇ ತ್ರೈಲೋಕ್ಯೇ ಗ್ರಾಸಿತೇ ಮಯಾ ।
ಉದರಸ್ಥೇಷು ಭೂತೇಷು ಲೋಕೇಽಹಂ ಶಯಿತಸ್ತದಾ ॥ ೧೧ ॥

ಸಹಸ್ರಶೀರ್ಷಾ ಭೂತ್ವಾ ಚ ಸಹಸ್ರಾಕ್ಷಃ ಸಹಸ್ರಪಾತ್ ।
ಶಂಖಚಕ್ರಗದಾಪಾಣಿಃ ಶಯಿತೋ ವಿಮಲೇಂಭಸಿ ॥ ೧೨ ॥

ಏತಸ್ಮಿನ್ನಂತರೇ ದೂರಾತ್ ಪಶ್ಯಾಮಿ ಹ್ಯಮಿತಪ್ರಭಂ ।
ಶತಸೂರ್ಯಪ್ರತೀಕಾಶಂ ಜ್ವಲಂತಂ ಸ್ವೇನ ತೇಜಸಾ ॥ ೧೩ ॥

ಚತುರ್ವಕ್ತ್ರಂ ಮಹಾಯೋಗಂ ಪುರುಷಂ ಕಾಂಚನಪ್ರಭಂ ।
ಕೃಷ್ಣಾಜಿನಧರಂ ದೇವಂ ಕಮಂಡಲುವಿಭೂಷಿತಂ ॥
ನಿಮೇಷಾಂತರಮಾತ್ರೇಣ ಪ್ರಾಪ್ತೋಽಸೌ ಪುರುಷೋತ್ತಮಃ ॥ ೧೪ ॥

ತತೋ ಮಾಮಬ್ರವೀದ್ಬ್ರಹ್ಮಾ ಸರ್ವಲೋಕನಮಸ್ಕೃತಃ ।
ಕಸ್ತ್ವಂ ಕುತೋ ವಾ ಕಿಂಚೇಹ ತಿಷ್ಠಸೇ ವದ ಮೇ ವಿಭೋ ॥ ೧೫ ॥

---

೧೧. ಪೂರ್ವದಲ್ಲಿ ಅವ್ಯಕ್ತರೂಪಿಯಾದ ತಮಸ್ಸು ಮೂರುಲೋಕಗಳನ್ನೂ ವ್ಯಾಪಿಸಲು ಲೋಕಗಳು ನಷ್ಟವಾಯಿತು. ಆಗ ಸಮಸ್ತ ಭೂತಗಳೂ ನನ್ನ ಉದರದಲ್ಲಿ ಅಡಗಿದ್ದುವು. ನಾನು ಜಲಶಾಯಿಯಾಗಿದ್ದೆನು.

೧೨. ಆಗ ನಾನು ಸಹಸ್ರ ಶಿರಸ್ಕನೂ, ಸಹಸ್ರಾಕ್ಷನೂ, ಸಹಸ್ರಪಾದಗಳುಳ್ಳವನೂ, ಶಂಖ ಚಕ್ರ ಗದೆಗಳನ್ನು ಧರಿಸಿದವನಾಗಿ ವಿಮಲೋದಕದಲ್ಲಿ ಮಲಗಿದ್ದೆನು.

೧೩-೧೪. ಹೀಗಿರುವಲ್ಲಿ ಒಂದು ದಿವಸ ಅಪರಿಮಿತಕಾಂತಿಯುಳ್ಳವನೂ, ನೂರಾರು ಸೂರ್ಯನಂತೆ ಪ್ರಭೆಯುಳ್ಳವನೂ, ತನ್ನ ತೇಜಸ್ಸಿನಿಂದಲೇ ಹೊಳೆಯುತ್ತಿರುವವನೂ, ಚತುರ್ಮುಖನೂ, ಮಹಾಯೋಗಿಯೂ, ಸುವರ್ಣಚ್ಛಾಯೆಯುಳ್ಳವನೂ, ಕೃಷ್ಣಾಜಿನಧಾರಿಯೂ, ಕಮಂಡಲುವಿನಿಂದಲಂಕೃತನೂ, ಪುರುಷಶ್ರೇಷ್ಠನೂ ಆದ ಒಬ್ಬನೊಬ್ಬ ಪುರುಷನು ಬರುತ್ತಿರುವುದನ್ನು ದೂರದಿಂದಲೇ ನಾನು ನೋಡಿದೆನು.

೧೫. ಅನಂತರ ಸಮಸ್ತ ಲೋಕಗಳಿಂದ ವಂದಿತನಾದ ಬ್ರಹ್ಮದೇವನು ನನ್ನನ್ನು ನೋಡಿ ನೀನು ಯಾರು ? ಎಲ್ಲಿಂದ ಬಂದಿರುತ್ತೀಯೆ ? ಏತಕ್ಕಾಗಿ ಇಲ್ಲಿಗೆ ಬಂದಿರುತ್ತೀಯೆ ? ಏಕೆ ಸುಮ್ಮನೆ ಇರುತ್ತೀಯೆ ? ಎಲೈ ಪ್ರಭುವೇ, ಈ ವಿಷಯಗಳನ್ನು ನನಗೆ ಹೇಳು ಎಂದನು.

**ಅಹಂ ಕರ್ತಾಸ್ಮಿ ಲೋಕಾನಾಂ ಸ್ವಾಯಂಭೂರ್ವಿಶ್ವತೋಮುಖಃ ।**
**ಏವಮುಕ್ತಸ್ತದಾ ತೇನ ಬ್ರಹ್ಮಣಾಹಮುವಾಚ ತಂ ॥ ೧೬ ॥**

**ಅಹಂ ಕರ್ತಾ ಚ ಲೋಕಾನಾಂ ಸಂಹರ್ತಾ ಚ ಪುನಃ ಪುನಃ ।**
**ಏವಂ ಸಂಭಾಷಮಾಣಾಭ್ಯಾಂ ಪರಸ್ಪರ ಜಿಯೈಷಿಣಾಂ ॥**
**ಉತ್ತರಾಂ ದಿಶಮಾಸ್ಥಾಯ ಜ್ವಾಲಾ ದೃಷ್ಟಾಪ್ಯಧಿಷ್ಠತಿ ॥ ೧೭ ॥**

**ಜ್ವಾಲಾಂ ತತಸ್ತಾಮಾಲೋಕ್ಯ ವಿಸ್ಮಿತೌ ಚ ತದಾನಯೋಃ ।**
**ತೇಜಸಾ ಚೈವ ತೇನಾಥ ಸರ್ವಂ ಜ್ಯೋತಿಃ ಕೃತಂ ಜಲಂ ॥ ೧೮ ॥**

**ವರ್ಧಮಾನೇ ತದಾ ವಹ್ನಾವತ್ಯಂತ ಪರಮಾದ್ಭುತೇ ।**
**ಅತಿದುದ್ರಾವ ತಾಂ ಜ್ವಾಲಾಂ ಬ್ರಹ್ಮಾ ಚಾಹಂ ಚ ಸತ್ವರಃ ॥ ೧೯ ॥**

---

೧೬. ಆಗ ಬ್ರಹ್ಮದೇವನು ನಾನು ಲೋಕಗಳನ್ನು ಸೃಷ್ಟಿಮಾಡುವ ಚತುರ್ಮುಖನಾದ ಬ್ರಹ್ಮನಾಗಿರುತ್ತೇನೆಂದು ಹೇಳಲು, ಆಗ ನಾನು ಅವನಿಗೆ ಇಂತೆಂದನು.

೧೭. ನಾನೇ ಲೋಕಗಳನ್ನು ಸೃಷ್ಟಿಮಾಡುವವನು. ಮತ್ತು ಪುನಃ ಪುನಃ ಸಂಹಾರಮಾಡುವವನೂ ನಾನೇ ಆಗಿರುತ್ತೇನೆಂದು ಪರಸ್ಪರ ಜಯಾಕಾಂಕ್ಷೆಯಿಂದ ಮಾತನಾಡುತ್ತಿರಲಾಗಿ, ಉತ್ತರದಿಗ್ಭಾಗದಲ್ಲಿ ಜ್ವಾಲೆಗಳಿಂದ ವ್ಯಾಪ್ತವಾಗಿರುವ ದಿವ್ಯ ತೇಜಸ್ಸು ನಮ್ಮ ದೃಷ್ಟಿಗೆ ವಿಷಯವಾಯಿತು.

೧೮. ಅನಂತರ ನಾವಿಬ್ಬರೂ ಆ ದಿವ್ಯ ಜ್ವಾಲೆಯನ್ನು ನೋಡಿ ಬೆರಗಾದೆವು. ವಿಸ್ಮಿತರಾದೆವು. ಆ ದಿವ್ಯ ತೇಜಸ್ಸಿನಿಂದ ಪ್ರಲಯೋದಕವೆಲ್ಲವೂ ಜ್ಯೋತಿರ್ಮಯವಾಯಿತು.

೧೯. ಆ ಜ್ವಾಲೆಯು ಬರಬರುತ್ತಾ ಬಹಳವಾಗಿ ವೃದ್ಧಿಯಾಗಲು, ಅದನ್ನು ನೋಡಿ ಬ್ರಹ್ಮನೂ ನಾನೂ ಸಹ ಹೆದರಿ ಅಲ್ಲಿಂದ ಬೇಗನೇ ಪಲಾಯನಮಾಡಲು ಯತ್ನಿಸಿದೆನು.

ದಿವಂ ಭೂಮಿಂ ಚ ವಿಷ್ಟಭ್ಯ ತಿಷ್ಠಂತಂ ಜ್ವಾಲಮಂಡಲಂ ।
ತಸ್ಯ ಜ್ವಾಲಸ್ಯ ಮಧ್ಯೇ ತು ಪಶ್ಯಾವೋ ವಿಪುಲಪ್ರಭಂ ॥ ೨೦ ॥

ಪ್ರಾದೇಶಮಾತ್ರಮವ್ಯಕ್ತಂ ಲಿಂಗಂ ಪರಮದೀಪಿತಂ ।
ನ ಚ ತತ್ಕಾಂಚನಂ ಮಧ್ಯೇ ನ ಶೈಲಂ ನ ಚ ರಾಜತಂ ॥ ೨೧ ॥

ಅನಿರ್ದೇಶ್ಯಮಚಿಂತ್ಯಂ ಚ ಲಕ್ಷ್ಯಾಲಕ್ಷ್ಯಂ ಪುನಃ ಪುನಃ ।
ಮಹೌಜಸಂ ಮಹಾಘೋರಂ ವರ್ದ್ಧಮಾನಂ ಭೃಶಂ ತದಾ ॥
ಜ್ವಾಲಾಮಾಲಾಯುತಂ ನ್ಯಸ್ತಂ ಸರ್ವಭೂತಭಯಂಕರಂ ॥ ೨೨ ॥

ಅಸ್ಯ ಲಿಂಗಸ್ಯ ಯೋಽಂತಂ ವೈ ಗಚ್ಛತೇ ಮಂತ್ರಕಾರಣಂ ।
ಘೋರರೂಪಿಣಮತ್ಯರ್ಥಂ ಬಿಂದಂತಮಿವ ರೋದಸೀ ॥ ೨೩ ॥

ತತೋ ಮಾಮಬ್ರವೀದ್ಬ್ರಹ್ಮಾ ಅಧೋ ಗಚ್ಛತ್ವತಂದ್ರಿತಃ ।
ಅಂತಮಸ್ಯ ವಿಜಾನೀಮೋ ಲಿಂಗಸ್ಯ ತು ಮಹಾತ್ಮನಃ ॥ ೨೪ ॥

---

೨೦–೨೧. ಅದು ಅಷ್ಟರಲ್ಲಿಯೇ ಭೂಮ್ಯಾಕಾಶಗಳನ್ನಾವರಿಸಿಕೊಂಡು ನಮ್ಮೆದುರಿಗೆ ಬಂದು ನಿಂತಿತು. ಆ ಜ್ವಾಲೆಗಳ ಮಧ್ಯದಲ್ಲಿ ಅತಿತೇಜಸ್ವಿಯೂ, ಜೋಟುದ್ದಮಾತ್ರವೂ, ಅತಿಪ್ರಕಾಶಕವೂ ಆದ ದಿವ್ಯ ಲಿಂಗವನ್ನು ನೋಡಿದೆವು. ಅದು ಸುವರ್ಣಮಯವಾದ ಮೇರುವೂ, ರಜತಮಯವಾದ ಕೈಲಾಸವೂ ಆಗಿರಲಿಲ್ಲ.

೨೨. ಆ ಲಿಂಗವು ಇಂತಹದೆಂದು ಹೇಳಲಶಕ್ಯವೂ, ಅಚಿಂತ್ಯವೂ, ದೃಶ್ಯಾದೃಶ್ಯವೂ, ಮಹಾತೇಜಸ್ವಿಯೂ, ಮಹಾಭಯಂಕರವೂ, ಬಹಳವಾಗಿ ವೃದ್ಧಿಯಾಗತಕ್ಕದ್ದೂ, ಜ್ವಾಲಾಮಾಲೆಗಳಿಂದ ವ್ಯಾಪ್ತವೂ, ಸರ್ವಭೂತ ಭಯಂಕರವೂ, ಅತಿ ಸ್ಥಿರವೂ ಆಗಿತ್ತು.

೨೩. ಸಕಲಮಂತ್ರಗಳಿಗೆ ಕಾರಣವೂ, ಮಹತ್ತೂ, ಭೂಮ್ಯಂತರಿಕ್ಷಗಳನ್ನು ಭೇಧಿಸುವುದೂ, ಘೋರರೂಪಿಯೂ ಆದ ಈ ಲಿಂಗದ ಆದ್ಯಂತವನ್ನು ಯಾವನು ತಿಳಿಯುತ್ತಾನೋ ಅವನೇ ಶ್ರೇಷ್ಠನೆಂದು ನಿಶ್ಚಿತವಾಯಿತು.

೨೪.೨೫. ಅನಂತರ ಬ್ರಹ್ಮನು ಎಲೈ ಹರಿಯೇ, ನೀನು ಈ ಲಿಂಗದ ಒಡವನ್ನು ನೋಡಲು ಹೋಗು. ಮಹತ್ತಾದ ಈ ಲಿಂಗದ ಅಂತವನ್ನು ತಿಳಿಯುವ

**ಅಹಮೂರ್ಧ್ವಂ ಗಮಿಷ್ಯಾಮಿ ಯಾವದಂತೋಽಸ್ಯ ದೃಶ್ಯತೇ ।**
**ತದಾ ತೌ ಸಮಯಂ ಕೃತ್ವಾ ಗತಾವೂರ್ಧ್ವಮಧಶ್ಚ ಹ ॥ ೨೫ ॥**

**ತತೋ ವರ್ಷಸಹಸ್ರಂ ತು ಅಹಂ ಪುನರಧೋ ಗತಃ ।**
**ನ ಚ ಪಶ್ಯಾಮಿ ತಸ್ಯಾಂತಂ ಭೀತಶ್ಚಾಹಂ ನ ಸಂಶಯಃ ॥ ೨೬ ॥**

**ತಥಾ ಬ್ರಹ್ಮಾ ಚ ಶಾಂತಶ್ಚ ನ ಚಾಂತಂತಸ್ಯ ಪಶ್ಯತಿ ।**
**ಸಮಾಗತೋ ಮಯಾ ಸಾರ್ಧಂ ತತ್ರೈವ ಚ ಮಹಾಂಭಸಿ ॥ ೨೭ ॥**

**ತತೋ ವಿಸ್ಮಯಮಾಪನ್ನಾವುಭೌ ತಸ್ಯ ಮಹಾತ್ಮನಃ ।**
**ಮಾಯಯಾ ಮೋಹಿತೌ ತೇನ ನಷ್ಟಸಂಜ್ಞೌ ವ್ಯವಸ್ಥಿತೌ ॥ ೨೮ ॥**

**ತತೋ ಧ್ಯಾನಗತಂ ತತ್ರ ಈಶ್ವರಂ ಸರ್ವತೋಮುಖಂ ।**
**ಪ್ರಭವಂ ನಿಧನಂ ಚೈವ ಲೋಕಾನಾಂ ಪ್ರಭುಮವ್ಯಯಂ ॥ ೨೯ ॥**

---

ನಾಗೆಂದು ಹೇಳಿದನು. ನಾನು ಇದರ ಕೊನೆಯನ್ನು ತಿಳಿಯಲು ಮೇಲಕ್ಕೆ ಹೋಗು ತ್ತೇನೆ. ಇವರ ಉಭಯಾಂತರಗಳನ್ನು ನಾವಿಬ್ಬರೂ ತಿಳಿಯೋಣವೆಂದು ಪ್ರತಿಜ್ಞೆ ಯನ್ನು ಮಾಡಿಕೊಂಡು ಬ್ರಹ್ಮನು ಮೇಲಕ್ಕೂ, ವಿಷ್ಣುವು ಕೆಳಗೂ ಹೋದರು.

೨೬-೨೭. ಆಗ ಹರಿಯು ಒಂದುಸಹಸ್ರವರ್ಷಗಳವರೆಗೂ ಕೆಳಗಡೆ ಹುಡುಕಿ ದರೂ ಕೊನೆಯು ಸಿಕ್ಕದೇ ಭಯಪಟ್ಟು ಹಿಂತಿರುಗಿದನು. ಅದರಂತೆಯೇ ಬ್ರಹ್ಮನೂ ಕೂಡ ಮೇಲ್ಭಾಗಕ್ಕೆ ಹೊರಟು ಸಾವಿರಾರು ವರ್ಷಗಳು ಹುಡುಕಿದರೂ ಆ ಲಿಂಗದ ಅಂತವನ್ನು ಕಾಣಲಿಲ್ಲ. ಕೊನೆಗೆ ಅವರಿಬ್ಬರೂ ಮೊದಲಿದ್ದ ಸ್ಥಳಕ್ಕೆ ಬಂದು ಸೇರಿದರು.

೨೮. ಅನಂತರ ಬ್ರಹ್ಮವಿಷ್ಣುಗಳಿಬ್ಬರೂ ಆಶ್ಚರ್ಯವನ್ನು ಹೊಂದಿ ಮಹಾತ್ಮ ನಾದ ಪರಮೇಶ್ವರನ ಮಾಯೆಯಿಂದ ಮೋಹಿತರಾದರು. ಅನಂತರ ಪುನಃ ಚೇತರಿಸಿ ಕೊಂಡು ಧ್ಯಾನಾಸಕ್ತರಾದರು.

೨೯-೩೦. ತರುವಾಯ ಬ್ರಹ್ಮದೇವನು ಧ್ಯಾನಾರ್ಹನೂ, ಸರ್ವತ್ರ ಮುಖ ವುಳ್ಳವನೂ, ಲೋಕಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ, ಸಮರ್ಥನೂ, ನಾಶ

ಬ್ರಹ್ಮಾಂಜಲಿಪುಟೋ ಭೂತ್ವಾ ತಸ್ಮೈ ಶರ್ವಾಯ ಶೂಲಿನೇ ।
ಮಹಾಭೈರವನಾದಾಯ ಭೀಮರೂಪಾಯ ದಂಷ್ಟ್ರಿಣೇ ॥
ಅವ್ಯಕ್ತಾಯ ಮಹಾಂತಾಯ ನಮಸ್ಕಾರಂ ಪ್ರಕುರ್ಮಹೇ ॥ ೩೦ ॥

ನಮೋಽಸ್ತು ತೇ ಲೋಕಸುರೇಶ ದೇವ
ನಮೋಽಸ್ತು ತೇ ಭೂತಪತೇ ಮಹಾಕ್ಷ ।
ನಮೋಽಸ್ತು ತೇ ಶಾಶ್ವತ ಸಿದ್ಧಯೋನೇ
ನಮೋಽಸ್ತು ತೇ ಸರ್ವಜಗತ್ಪ್ರತಿಷ್ಠ ॥ ೩೧ ॥

ಪರಮೇಷ್ಠಿಂ ಪರಂ ಬ್ರಹ್ಮ ಅಕ್ಷರಂ ಪರಮಂ ಪದಂ ।
ಶ್ರೇಷ್ಠಸ್ತ್ವಂ ವಾಮದೇವಶ್ಚ ರುದ್ರಃ ಸ್ಕಂದಃ ಶಿವಃ ಪ್ರಭುಃ ॥ ೩೨ ॥

ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮೋಂಕಾರಃ ಪರಂ ಪದಂ ।
ಸ್ವಾಹಾಕಾರೋ ನಮಸ್ಕಾರಃ ಸಂಸ್ಕಾರಃ ಸರ್ವಕರ್ಮಣಾಂ ॥ ೩೩ ॥

---

ರಹಿತನೂ ಆದ ಈಶ್ವರನನ್ನು ಧ್ಯಾನಮಾಡಿ, ಅಂಜಲಿಬದ್ಧನಾಗಿ ಶೂಲಪಾಣಿಯೂ, ಶುಭಪ್ರದನೂ, ಮಹಾಭಯಂಕರನಾದವುಳ್ಳವನೂ, ಭೀಮರೂಪಿಯೂ, ದಂಷ್ಟ್ರಿಯೂ, ಅವ್ಯಕ್ತನೂ. ಮಹಾತ್ಮನೂ ಆದ ಮಹೇಶ್ವರನಿಗೆ ಅನಂತ ವಂದನೆಗಳೆಂದು ಹೇಳಿದನು.

೩೧. ಲೋಕೇಶನೂ, ಸುರೇಶನೂ, ಭೂತಪತಿಯೂ, ಮಹಾತ್ಮನೂ, ಶಾಶ್ವತನೂ, ಸಿದ್ಧಪುರುಷರಿಗೆ ಮುಖ್ಯಕಾರಣನೂ, ಸರ್ವಜಗತ್ತಿಗೆ ಮೂಲಕಾರಣನೂ ಆದ ನಿನಗೆ ಅನಂತಾನಂತ ಪ್ರಣಾಮಗಳು.

೩೨. ಎಲೈ ಪರಮೇಶ್ವರನೇ, ನೀನು ಪರಮಪದವಿಯಲ್ಲಿರತಕ್ಕವನೂ, ಪರಬ್ರಹ್ಮನೂ, ನಾಶರಹಿತನೂ, ಪರಮಪದದಾಯಕನೂ, ಶ್ರೇಷ್ಠನೂ, ವಾಮದೇವನೂ, ರುದ್ರನೂ, ಸ್ಕಂಧನೂ, ಶಿವನೂ, ಸ್ವಾಮಿಯೂ ಆಗಿರುತ್ತೀಯೆ. ಇಂತಹ ನಿನಗೆ ನಮಸ್ಕಾರಗಳು.

೩೩. ಎಲೈ ಪ್ರಭುವೇ, ನೀನು ಯಜ್ಞರೂಪಿಯೂ, ನೀನೇ ವಷಟ್ಕಾರಸ್ವರೂಪನೂ, ಓಂಕಾರರೂಪನೂ, ಪರಮಪದಪ್ರದನೂ, ಸ್ವಾಹಾಕಾರನೂ, ನಮಸ್ಕಾರ್ಯನೂ, ಸರ್ವಕರ್ಮಗಳ ಸಂಸ್ಕಾರರೂಪಿಯೂ ಆಗಿರುತ್ತೀಯೆ.

**ಸ್ವಧಾಕಾರಾಶ್ಚ ಜಾಪ್ಯಶ್ಚ ವ್ರತಾನಿ ನಿಯಮಾಸ್ತಥಾ ।**
**ವೇದ ಲೋಕಾಶ್ಚ ದೇವಾಶ್ಚ ಭಗವಾನೇವ ಸರ್ವಶಃ || ೩೪ ||**

**ಆಕಾಶಸ್ಯ ಚ ಶಬ್ದಸ್ತ್ವಂ ಭೂತಾನಾಂ ಪ್ರಭವಾವ್ಯಯಂ ।**
**ಭೂಮೇರ್ಗಂಧೋ ರಸಶ್ಚಾಪಾಂ ತೇಜೋರೂಪಂ ಮಹೇಶ್ವರ || ೩೫ ||**

**ವಾಯೋಃ ಸ್ಪರ್ಶಶ್ಚ ದೇವಶ್ಚ ವಪುಶ್ಚಂದ್ರಮಸಸ್ತಥಾ ।**
**ಬುಧೋ ಜ್ಞಾನಂ ಚ ದೇವೇಶ ಪ್ರಕೃತೌ ಬೀಜಮೇವ ಚ || ೩೬ ||**

**ತ್ವಂ ಕರ್ತಾ ಸರ್ವಭೂತಾನಾಂ ಕಾಲೋ ಮೃತ್ಯುರ್ಯಮೋಂತಕಃ ।**
**ತ್ವಂ ಧಾರಯಸಿ ಲೋಕಾಂಸ್ತ್ರೀಂಸ್ತ್ವಮೇವ ಸೃಜಸಿ ಪ್ರಭೋ || ೩೭ ||**

---

೩೪. ಮತ್ತು ನೀನು ಸ್ವಧಾಕಾರನೂ, ಜಪಾರ್ಹನೂ, ವ್ರತನಿಯಮಸ್ವರೂಪಿಯೂ, ದೇವನೂ, ಲೋಕರೂಪಿಯೂ, ವೇದಸ್ವರೂಪಿಯೂ, ಸರ್ವರೂಪಿಯೂ ಆಗಿರುತ್ತೀಯೆ. ಇಂತಹ ನಿನಗೆ ನಮಸ್ಕಾರಗಳು.

೩೫. ಎಲೈ ದೇವನೇ, ನೀನು ಆಕಾಶದ ಗುಣವಾದ ಶಬ್ದರೂಪನೂ, ಭೂತಗಳಿಗೆ ಕಾರಣನೂ, ನಾಶವಿಲ್ಲದವನೂ, ಭೂಮಿಯ ಗುಣವಾದ ಗಂಧರೂಪನೂ, ಜಲದರಸರೂಪನೂ, ತೇಜೋರೂಪನೂ ಆಗಿರುತ್ತೀಯೆ.

೩೬, ಎಲೈ ಪರಮೇಶನೇ, ನೀನು ವಾಯುಗುಣವಾದ ಸ್ಪರ್ಶರೂಪನಾಗಿಯೂ, ದೇವನಾಗಿಯೂ, ಚಂದ್ರನ ಶರೀರಿಯಾಗಿಯೂ, ವಿದ್ವಾಂಸನಾಗಿಯೂ, ಜ್ಞಾನಿಯಾಗಿಯೂ, ಪ್ರಕೃತಿಗೆ ಬೀಜರೂಪನಾಗಿಯೂ ಇರುತ್ತೀಯೆ.

೩೭. ನೀನು ಸರ್ವಭೂತಗಳಿಗೆ ಕರ್ತನೂ, ಕಾಲರೂಪಿಯೂ, ಮೃತ್ಯುರೂಪಿಯೂ, ಯಮಸ್ವರೂಪನೂ, ಅಂತಕನೂ, ಮೂರುಲೋಕಗಳ ಧಾರಕನೂ, ಸೃಷ್ಟಿಕರ್ತನೂ ಆಗಿರುತ್ತೀಯೆ ಎಂದು ಹೊಗಳಿದನು.

ಪೂರ್ವೇಣ ವದನೇನ ತ್ವಮಿಂದ್ರತ್ವಂ ಚ ಪ್ರಕಾಶಸೇ ।
ದಕ್ಷಿಣೇನ ಚ ವಕ್ತ್ರೇಣ ಲೋಕಾನ್ ಸಂಕ್ಷೇಯಸೇ ಪ್ರಭೋ ॥ ೩೮ ॥

ಪಶ್ಚಿಮೇನ ತು ವಕ್ತ್ರೇಣ ವರುಣತ್ವಂ ಕರೋಷಿ ವೈ ।
ಉತ್ತರೇಣ ತು ವಕ್ತ್ರೇಣ ಸೌಮ್ಯತ್ವಂ ಚ ವ್ಯವಸ್ಥಿತಂ ॥ ೩೯ ॥

ರಾಜಸೇ ಬಹುಧಾ ದೇವ ಲೋಕಾನಾಂ ಪ್ರಭವಾವ್ಯಯಃ ।
ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನೀಸುತೌ ॥ ೪೦ ॥

ಸಾಧ್ಯಾ ವಿದ್ಯಾಧರಾ ನಾಗಾಶ್ಚಾರಣಾಶ್ಚ ತಪೋಧನಾಃ ।
ವಾಲಖಿಲ್ಯಾ ಮಹಾತ್ಮಾನಸ್ತಪಃ ಸಿದ್ಧಾಶ್ಚ ಸುವ್ರತಾಃ ॥ ೪೧ ॥

ತ್ವತ್ತಃ ಪ್ರಸೂತಾ ದೇವೇಶ ಯೇ ಚಾನ್ಯೇ ನಿಯತವ್ರತಾಃ ।
ಉಮಾ ಸೀತಾ ಸಿನೀವಾಲೀ ಕುಹೂರ್ಗಾಯತ್ರಿರೇವ ಚ ॥ ೪೨ ॥

---

೩೮-೩೯. ಎಲೈ ದೇವನೇ, ನೀನು ಪೂರ್ವದ ಮುಖದಿಂದ ಇಂದ್ರನಹಾಗೆ ಶೋಭಿಸುತ್ತೀಯೆ. ದಕ್ಷಿಣಮುಖದಿಂದ ಲೋಕನಾಶಕನಾದ ಯಮನ ಹಾಗೆ ಹೊಳೆಯುತ್ತೀಯೆ. ಪಶ್ಚಿಮಭಾಗದ ಮುಖದಿಂದ ವರುಣನಹಾಗೆ ಶೋಭಿಸುತ್ತೀಯೆ. ಉತ್ತರಭಾಗದ ಮುಖದಿಂದ ಚಂದ್ರನಹಾಗೆ ಪ್ರಕಾಶಿಸುತ್ತೀಯೆ.

೪೦. ಎಲೈ ದೇವನೇ, ಲೋಕಗಳ ಕಾರಣನಾಗಿಯೂ, ಅವ್ಯಯನಾಗಿಯೂ, ಆದಿತ್ಯರೂ, ವಸುಗಳೂ, ರುದ್ರರೂ ಮರುತ್ತುಗಳೂ, ಅಶ್ವಿನೀದೇವತೆಗಳೂ ಆಗಿಯೂ ಇರುತ್ತೀಯೆ ಎಂದು ಹೊಗಳಿದನು.

೪೧-೪೩. ಎಲೈ ಪರಮೇಶ್ವರನೇ, ನೀನು ಸಾಧ್ಯರೂ, ವಿದ್ಯಾಧರರೂ, ನಾಗಗಳೂ, ಚಾರಣರೂ, ತಪೋಧನರೂ, ಮಹಾತ್ಮರಾದ ವಾಲಖಿಲ್ಯಾದಿ ಮಹರ್ಷಿಗಳೂ, ತಪಃಸಿದ್ಧರೂ, ಸುವ್ರತಿಗಳೂ ಇವರೇ ಮೊದಲಾದವರನ್ನು ಸೃಷ್ಟಿಸುತ್ತೀಯೆ. ಇವರಂತೆಯೇ ಉಮಾ, ಸೀತಾ, ಅಮಾವಾಸ್ಯಾ, ಕುಹೂ, ಗಾಯತ್ರೀ, ಲಕ್ಷ್ಮೀ,

ಲಕ್ಷ್ಮೀಃ ಕೀರ್ತಿರ್ಧೃತಿರ್ಮೇಧಾ ಲಜ್ಜಾ ಕ್ಷಾಂತಿರ್ವಪುಃ ಸ್ವಧಾ ।
ತುಷ್ಟಿಃ ಪುಷ್ಟಿಃ ಕ್ರಿಯಾ ಚೈವ ವಾಚಾಂ ದೇವೀ ಸರಸ್ವತೀ ॥
ತ್ವತ್ತಃ ಪ್ರಸೂತಾ ದೇವೇಶ ಸಂಧ್ಯಾ ರಾತ್ರಿಸ್ತಥೈವ ಚ ॥ ೪೩ ॥

ಸೂರ್ಯಾಯುತಾನಾಮಯುತಪ್ರಭಾ ಚ
ನಮೋಽಸ್ತು ತೇ ಚಂದ್ರಸಹಸ್ರಗೋಚರ ।
ನಮೋಽಸ್ತು ತೇ ಪರ್ವತರೂಪಧಾರಿಣೇ
ನಮೋಽಸ್ತು ತೇ ಸರ್ವಗುಣಾಕರಾಯ ॥ ೪೪ ॥

ನಮೋಽಸ್ತು ತೇ ಪಟ್ಟಿಶರೂಪಧಾರಿಣೇ ।
ನಮೋಽಸ್ತು ತೇ ಚರ್ಮವಿಭೂತಿಧಾರಿಣೇ ॥
ನಮೋಽಸ್ತು ತೇ ರುದ್ರಪಿನಾಕಪಾಣಯೇ
ನಮೋಽಸ್ತು ತೇ ಸಾಯಕಚಕ್ರಧಾರಿಣೇ ॥ ೪೫ ॥

ನಮೋಽಸ್ತು ತೇ ಭಸ್ಮವಿಭೂಷಿತಾಂಗ
ನಮೋಽಸ್ತು ತೇ ಕಾಮಶರೀರನಾಶನ ।
ನಮೋಽಸ್ತು ತೇ ದೇವ ಹಿರಣ್ಯವಾಸಸೇ
ನಮೋಽಸ್ತು ತೇ ದೇವ ಹಿರಣ್ಯಬಾಹವೇ ॥ ೪೬ ॥

---

ಕೀರ್ತಿ, ಧೃತಿ, ಮೇಧಾ, ಲಜ್ಜಾ, ಕ್ಷಾಂತಿ, ವಪು, ಸ್ವಧಾ, ತುಷ್ಟಿ, ಪುಷ್ಟಿ, ಕ್ರಿಯಾ, ವಾಗ್ದೇವಿಯಾದ ಸರಸ್ವತಿ, ಸಂಧ್ಯೆ ಮತ್ತು ರಾತ್ರಿ ಇವುಗಳೆಲ್ಲವನ್ನೂ ಸೃಷ್ಟಿಸಿ ರಕ್ಷಿಸುತ್ತೀಯೆಂದು ಹೊಗಳಿದರು.

೪೪. ಸಹಸ್ರಾರು ಸೂರ್ಯರಂತೆ ಅಮಿತವಾದ ಕಾಂತಿವಂತನೂ, ಸಾವಿರಾರು ಚಂದ್ರಗಳಂತೆ ಪ್ರಕಾಶಿಸುವವನೂ, ಪರ್ವತರೂಪಧಾರಿಯೂ, ಸರ್ವಗುಣಾಕರನೂ ಆದ ನಿನಗೆ ನಮಸ್ಕಾರವು.

೪೫. ಯುದ್ಧದ ಕೊಡಲಿಯನ್ನು ಧರಿಸಿರುವವನೂ, ಚರ್ಮಾಂಬರನೂ, ವಿಭೂತಿಯುತನೂ, ಭಯಂಕರವಾದ ಪಿನಾಕವೆಂಬ ಧನಸ್ಸನ್ನು ಧರಿಸಿರುವವನೂ, ಬಾಣ, ಬತ್ತಳಿಕೆ, ಚಕ್ರ ಇವುಗಳನ್ನು ಧರಿಸಿರುವವನೂ ಆದ ನಿನಗೆ ನಮಸ್ಕಾರಗಳು.

೪೬. ಭಸ್ಮದಿಂದಲಂಕೃತವಾದ ಶರೀರವುಳ್ಳವನೂ, ಕಾಮನ ಶರೀರವನ್ನು ದಹಿಸಿದವನೂ, ಸುವರ್ಣವಸ್ತ್ರವುಳ್ಳವನೂ, ಸುವರ್ಣಮಯವಾದ ಭುಜಗಳುಳ್ಳವನೂ ಆದ ನಿನಗೆ ನಮಸ್ಕಾರಗಳು.

ನಮೋಽಸ್ತು ತೇ ದೇವ ಹಿರಣ್ಯರೂಪ
ನಮೋಽಸ್ತು ತೇ ದೇವ ಹಿರಣ್ಯನಾಭ ।
ನಮೋಽಸ್ತು ತೇ ನೇತ್ರಸಹಸ್ರಚಿತ್ರ
ನಮೋಽಸ್ತು ತೇ ದೇವ ಹಿರಣ್ಯರೇತಃ ॥ ೪೭ ॥

ನಮೋಽಸ್ತು ತೇ ದೇವ ಹಿರಣ್ಯವರ್ಣ
ನಮೋಽಸ್ತು ತೇ ದೇವ ಹಿರಣ್ಯಗರ್ಭ ।
ನಮೋಽಸ್ತು ತೇ ದೇವ ಹಿರಣ್ಯಚೀರ
ನಮೋಽಸ್ತು ತೇ ದೇವ ಹಿರಣ್ಯದಾಯಿನೇ ॥ ೪೮ ॥

ನಮೋಽಸ್ತು ತೇ ದೇವ ಹಿರಣ್ಯಮಾಲಿನೇ
ನಮೋಽಸ್ತು ತೇ ದೇವ ಹಿರಣ್ಯವಾಹಿನೇ ।
ನಮೋಽಸ್ತು ತೇ ದೇವ ಹಿರಣ್ಯವರ್ತ್ಮನೇ
ನಮೋಽಸ್ತು ತೇ ಭೈರವನಾದನಾದಿನೇ ॥ ೪೯ ॥

ನಮೋಽಸ್ತು ತೇ ಭೈರವವೇಗವೇಗ
ನಮೋಽಸ್ತು ತೇ ಶಂಕರ ನೀಲಕಂಠ ।
ನಮೋಽಸ್ತು ತೇ ದಿವ್ಯ ಸಹಸ್ರಬಾಹೋ
ನಮೋಽಸ್ತು ತೇ ವರ್ತನನಾದನಪ್ರಿಯ ॥ ೫೦ ॥

---

೪೭. ದೇವನೂ, ಹಿರಣ್ಯರೂಪಿಯೂ, ಸುವರ್ಣಮಯವಾದ ನಾಭಿಯುಳ್ಳವನೂ, ಸಾವಿರಾರು ನೇತ್ರಗಳಿಂದ ವಿಚಿತ್ರರೂಪಿಯೂ, ಹಿರಣ್ಯರೇತಸ್ಕನೂ ಆದ ಪರಮೇಶ್ವರನಿಗೆ ವಂದನೆಗಳು.

೪೮. ದೇವನೂ, ಸುವರ್ಣವರ್ಣವುಳ್ಳವನೂ, ಹಿರಣ್ಯಗರ್ಭನೂ, ಸುವರ್ಣಮಯವಾದ ವಸ್ತ್ರಧಾರಿಯೂ, ಭಕ್ತರಿಗೆ ಸುವರ್ಣವೃಷ್ಟಿಯನ್ನು (ಕೊಡತಕ್ಕವನೂ) ಕರೆಯುವವನೂ ಆದ ನಿನಗೆ ನಮಸ್ಕಾರವು.

೪೯-೫೦. ಎಲೈ ದೇವನೇ, ನೀನು ಸುವರ್ಣಮಯಮಾಲೆಯುಳ್ಳವನೂ, ಸುವರ್ಣಮಯವಾಹನವುಳ್ಳವನೂ, ಸುವರ್ಣಮಯಮಾರ್ಗಗಾಮಿಯೂ, ಭಯಂಕರ ನಾದ ಪ್ರಿಯನೂ, ವೇಗವಾಗಿ ಸಂಚರಿಸುವವರಲ್ಲಿ ಅಗ್ರಗಣ್ಯನೂ, ಸುಖಕರನೂ, ನೀಲಕಂಠನೂ, ದಿವ್ಯವಾದ ಸಹಸ್ರಭುಜವುಳ್ಳವನೂ, ನರ್ತನ ಗಾನಗಳಲ್ಲಿ ಪ್ರೀತಿಯುಳ್ಳವನೂ ಆಗಿರುತ್ತೀ. ಇಂತಹ ನಿನಗೆ ಅನಂತಾನಂತ ವಂದನೆಗಳಿಂದನು.

ಏವಂ ಸಂಸ್ತೂಯಮಾನಸ್ತು ವ್ಯಕ್ತೋ ಭೂತ್ವಾ ಮಹಾಮತಿಃ ।
ಭಾತಿ ದೇವೋ ಮಹಾಯೋಗೀ ಸೂರ್ಯಕೋಟಿಸಮಪ್ರಭಃ ॥ ೫೧ ॥

ಅಭಿಭಾಷ್ಯಸ್ತದಾ ಹೃಷ್ಟೋ ಮಹಾದೇವೋ ಮಹೇಶ್ವರಃ ।
ವಕ್ತ್ರಕೋಟಿಸಹಸ್ರೇಣ ಗ್ರಸಮಾನ ಇವಾಪರಂ ॥ ೫೨ ॥

ಏಕಗ್ರೀವಸ್ತ್ವೇಕಜಟೋ ನಾನಾಭೂಷಣಭೂಷಿತಃ ।
ನಾನಾಚಿತ್ರವಿಚಿತ್ರಾಂಗಃ ನಾನಾಮಾಲ್ಯಾನುಲೇಪನಃ ॥ ೫೩ ॥

ಪಿನಾಕಪಾಣಿರ್ಭಗವಾರ್ನ ವೃಷಭಾಸನಶೂಲಧೃಕ್ ।
ದಂಡಕೃಷ್ಣಾಜಿನಧರಃ ಕಪಾಲೀ ಘೋರರೂಪಧೃಕ್ ॥ ೫೪ ॥

ವ್ಯಾಲಯಜ್ಞೋಪವೀತೀ ಚ ಸುರಾಣಾಮಭಯಂಕರಃ ।
ದುಂದುಭಿಸ್ವನನಿರ್ಘೋಷಪರ್ಜನ್ಯನಿನದೋಪಮಃ ॥
ಮುಕ್ತೋ ಹಾಸಸ್ತದಾ ತೇನ ನಭಃ ಸರ್ವಮಪೂರಯತ್ ॥ ೫೫ ॥

---

೫೧. ಹೀಗೆ ಬ್ರಹ್ಮಾದಿ ದೇವತೆಗಳು ಹೊಗಳಲಾಗಿ ಜ್ಞಾನಿಯಾದ ಪರಮೇಶ್ವರನು ಅವರಿಗೆ ಪ್ರತ್ಯಕ್ಷನಾಗಿ ಮಹಾ ಯೋಗಿಯೂ, ಕೋಟಿಸೂರ್ಯರಂತೆ ಕಾಂತಿಯುತನೂ ಆಗಿ ಪ್ರಜ್ವಲಿಸಿದನು.

೫೨. ಮತ್ತು ಮಹಾದೇವನಾದ ಪರಮೇಶ್ವರನು ಸಂತುಷ್ಟನೂ, ಮಂದಹಾಸದಿಂದ ವಿವಕ್ಷುವೂ ಆಗಿ, ಕೋಟ್ಯಂತರ ಮುಖಗಳಿಂದ ಪರರನ್ನು ನುಂಗುವಂತೆ ತೋರಿದನು.

೫೩-೫೫. ಮಹಾದೇವನೂ, ಒಂದೇ ಕತ್ತುಳ್ಳವನೂ, ಒಂದೇ ಜಡೆಯುಳ್ಳವನೂ, ವಿವಿಧ ಭೂಷಣಗಳಿಂದಲಂಕೃತನೂ, ನಾನಾಚಿತ್ರಗಳಿಂದ ವಿಚಿತ್ರವಾದ ಅಂಗಗಳುಳ್ಳವನೂ, ನಾನಾವಿಧವಾದ ಮಾಲೆಗಳು, ಅನುಲೇಪನ ಇವುಗಳುಳ್ಳವನೂ, ಪಿನಾಕಪಾಣಿಯೂ, ಭಗವಂತನೂ, ವೃಷಭವಾಹನನೂ, ಶೂಲಧಾರಿಯೂ, ದಂಡಕಾಷ್ಟ, ಕೃಷ್ಣಾಜಿನ ಇವುಗಳನ್ನು ಧರಿಸಿರುವವನೂ, ಕಪಾಲಧಾರಿಯೂ, ಘೋರರೂಪಿಯೂ, ಸರ್ಪವೆಂಬ ಯಜ್ಞೋಪವೀತವುಳ್ಳವನೂ, ದೇವತೆಗಳಿಗೆ ಪ್ರಿಯದರ್ಶನನೂ, ನಗಾರಿಯಂತೆ ಗಂಭೀರ ಧ್ವನಿಯುಳ್ಳವನೂ, ಮೇಘದಂತೆ ಧ್ವನಿಯುಳ್ಳವನೂ ಆದ ಪರಮೇಶ್ವರನು ಹಾಸವನ್ನು ಮಾಡಿದನು. ಆ ಧ್ವನಿಯು ದಿಗಂತವನ್ನೂ ಅಂತರಿಕ್ಷವನ್ನೂ ಪೂರ್ಣಮಾಡಿತು.

ತೇನ ಶಬ್ದೇನ ಮಹತಾ ವಯಂ ಭೀತಾ ಮಹಾತ್ಮನಃ ।
ತದೋವಾಚ ಮಹಾಯೋಗೀ ಪ್ರೀತೋಹಂ ಸುರಸತ್ತಮೌ ॥ ೫೬ ॥

ಪಶ್ಯೇತಾಂ ಚ ಮಹಾಮಾಯಾಂ ಭಯಂ ಸರ್ವಂ ಪ್ರಮುಚ್ಯತಾಂ ।
ಯುವಾಂ ಪ್ರಸೂತೌ ಗಾತ್ರೇಷು ಮಮ ಪೂರ್ವಂ ಸನಾತನೌ ॥ ೫೭ ॥

ಅಯಂ ಮೇ ದಕ್ಷಿಣೋ ಬಾಹುರ್ಬ್ರಹ್ಮಾ ಲೋಕಪಿತಾಮಹಃ ।
ವಾಮೋ ಬಾಹುಶ್ಚ ಮೇ ವಿಷ್ಣುರ್ನಿತ್ಯಂ ಯುದ್ಧೇಷು ತಿಷ್ಠತಿ ॥
ಪ್ರೀತೋಹಂ ಯುವಯೋಃ ಸಮ್ಯಗ್ವರಂ ದದ್ಮಿ ಯಥೋಪ್ಸಿತಂ ॥ ೫೮ ॥

ತತಃ ಪ್ರಹೃಷ್ಟಮನಸೌ ಪ್ರಣತೌ ಪಾದಯೋಃ ಪುನಃ ।
ಊಚತುಶ್ಚ ಮಹಾತ್ಮಾನೌ ಪುನರೇವ ತದಾನಘೌ ॥ ೫೯ ॥

ಯದಿ ಪ್ರೀತಿಃ ಸಮುತ್ಪನ್ನಾ ಯದಿ ದೇಯೋ ವರಶ್ಚ ನೌ ।
ಭಕ್ತಿರ್ಭವತು ನೌ ನಿತ್ಯಂ ತ್ವಯಿ ದೇವ ಸುರೇಶ್ವರ ॥ ೬೦ ॥

---

೫೬. ಮಹಾತ್ಮನಾದ ಪರಮೇಶ್ವರನ ಅಟ್ಟಹಾಸದಿಂದ ನಾವೆಲ್ಲರೂ ಭಯ ಭ್ರಾಂತರಾದೆವು. ಆಗ ಮಹಾಯೋಗಿಯಾದ ಪರಮೇಶ್ವರನು ಎಲೈ ದೇವೋತ್ತಮರಾದ ಬ್ರಹ್ಮವಿಷ್ಣುಗಳಿರಾ, ನಿಮಗೆ ನಾನು ಬಹಳವಾಗಿ ಪ್ರೀತನಾಗಿರುವೆನು.

೫೭–೫೮. ಎಲೈ ಸುರೋತ್ತಮರೇ, ನೀವು ಈ ನನ್ನ ಮಾಯೆಯನ್ನು ನೋಡಿರಿ. ನೀವು ಭೀತಿಯನ್ನು ಬಿಡಿ. ಅತ್ಯಂತ ಪುರಾತನರಾದ ನೀವಿಬ್ಬರೂ ನನ್ನ ಶರೀರದಿಂದ ಪೂರ್ವದಲ್ಲಿ ಸೃಷ್ಟರಾಗಿರುತ್ತೀರಿ. ಈ ನನ್ನ ಬಲಭುಜವೇ ಲೋಕಪಿತಾಮಹನಾದ ಬ್ರಹ್ಮನಾಗಿಯೂ, ಎಡಭುಜವೇ ಮಹಾವಿಷ್ಣುವಾಗಿಯೂ ಅವತರಿಸಿವೆ. ಆದುದರಿಂದ ನೀವು ನಿತ್ಯವೂ ಯುದ್ಧಾಸಕ್ತರಾಗಿರುವಿರಿ ಎಂದು ಹೇಳಿ. ನಿಮ್ಮಿಬ್ಬರಿಗೂ ನಾನು ಪ್ರೀತನಾಗಿರುವನು. ಅಪೇಕ್ಷಿತವಾದ ವರಗಳನ್ನು ಕೊಡಲು ಸಿದ್ಧನಾಗಿರುವೆನೆಂದು ಈಶ್ವರನು ಬ್ರಹ್ಮವಿಷ್ಣುಗಳಿಗೆ ಹೇಳಿದನು.

೫೯–೬೦. ಅನಂತರ ಆ ಮಾತುಗಳಿಂದ ಸಂತುಷ್ಟರಾದ ಬ್ರಹ್ಮವಿಷ್ಣುಗಳು ಮಹಾತ್ಮರೂ, ನಿರ್ದೋಷಿಗಳೂ ಆದುದರಿಂದ ಅವನಿಗೆ ನಮಸ್ಕರಿಸಿ ಪುನಃ ಇಂತೆಂದರು. ಎಲೈ ಸುರೋತ್ತಮನಾದ ದೇವನೇ, ನೀನು ನಿಜವಾಗಿ ಪ್ರೀತನಾಗಿ ವರಗಳನ್ನು ಕೊಡುವುದಾದರೆ, ದೇವನಾದ ನಿನ್ನಲ್ಲಿ ಅಚಂಚಲವಾದ ಭಕ್ತಿಯೊಂದನ್ನು ಮಾತ್ರ ಕೊಡು. ಅದು ಸ್ಥಿರವಾಗಿರಲೆಂದರು.

|| ಭಗವಾನುವಾಚ ||

ಏವಮಸ್ತು ಮಹಾಭಾಗೌ ಸೃಜತಾಂ ವಿವಿಧಾಃ ಪ್ರಜಾಃ ।
ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧೀಯತ || ೬೧ ||

ಏವಮೇಷ ಮಯೋಕ್ತೋ ವಃ ಪ್ರಭಾವಸ್ತಸ್ಯ ಯೋಗಿನಃ ।
ತೇನ ಸರ್ವಮಿದಂ ಸೃಷ್ಟಂ ಹೇತುಮಾತ್ರಾ ವಯಂತ್ವಿಹ || ೬೨ ||

ಏತದ್ಧಿ ರೂಪ ಮಜ್ಞಾತಮವ್ಯಕ್ತಂ ಶಿವಸಂಜ್ಞಿತಂ ।
ಅಚಿಂತ್ಯಂ ತದ ದೃಶ್ಯಂ ಚ ಪಶ್ಯಂತಿ ಜ್ಞಾನಚಕ್ಷುಷಃ || ೬೩ ||

ತಸ್ಮೈ ದೇವಾದಿಪತ್ಯಾಯ ನಮಸ್ಕಾರಂ ಪ್ರಯುಂಕ್ತ ಹ ।
ಯೇನ ಸೂಕ್ಷ್ಮಮಚಿಂತ್ಯಂ ಪಶ್ಯಂತಿ ಜ್ಞಾನಚಕ್ಷುಷಃ || ೬೪ ||

---

೬೧. ಶ್ರೀ ಭಗವಂತನು ಹೇಳಿದನು:— ಎಲೈ ಸುರೋತ್ತಮರೇ, ಅದು ಹಾಗೆಯೇ ಉಂಟಾಗಲಿ. ಮಹಾಭಾಗ್ಯಶಾಲಿಗಳಾದ ನೀವು ವಿವಿಧ ಪ್ರಜೆಗಳನ್ನು ಸೃಷ್ಟಿಮಾಡಿರಿ, ಎಂದು ಭಗವಂತನು ಹೇಳಿ ಅಲ್ಲಿಯೇ ಮಾಯವಾದನು

೬೨. ಎಲೈ ಮುನಿವರ್ಯರೇ, ನಾನು ನಿಮಗಾಗಿ ಹೀಗೆ ಮಹಾಯೋಗಿಯಾದ ಪರಮೇಶ್ವರನ ಪ್ರಭಾವವನ್ನು ತಿಳಿಸಿರುತ್ತೇನೆ. ಆ ಪರಮೇಶ್ವರನೇ ಈ ಜಗತ್ತೆಲ್ಲವನ್ನೂ ಸೃಷ್ಟಿಸಿರುವನು. ನಾವುಗಳು ನಿಮಿತ್ತಮಾತ್ರವಾಗಿರುವೆವು ಎಂದನು.

೬೩. ಈ ಭಗವಂತನ ರೂಪವು ಸರ್ವರಿಂದ ತಿಳಿಯಲಶಕ್ಯವಾಗಿಯೂ, ಅವ್ಯಕ್ತವಾಗಿಯೂ, ಶಿವಸಂಜ್ಞಿಕವಾಗಿಯೂ, ಅಚಿಂತ್ಯವಾಗಿಯೂ, ಅದೃಶ್ಯವಾಗಿಯೂ ಇದೆ. ಆದರೆ ಜ್ಞಾನಿಗಳು ಜ್ಞಾನನೇತ್ರದಿಂದ ಈ ದಿವ್ಯರೂಪವನ್ನು ನೋಡುವರು.

೬೪. ಯಾವ ಮಹಾಜ್ಞಾನಿಗಳು ತಮ್ಮ ಜ್ಞಾನಚಕ್ಷುಸ್ಸಿನಿಂದ ಸೂಕ್ಷ್ಮವೂ ಅಚಿಂತ್ಯವೂ ಆದ ಈ ಭಗವಂತನ ರೂಪವನ್ನು ನೋಡುವರೋ, ಅಂತಹ ದೇವೋತ್ತಮರಿಗೆ ನಾವು ಅನಂತವಂದನೆಗಳನ್ನು ಮಾಡುತ್ತೇವೆ.

ಮಹಾದೇವ ನಮಸ್ತೇಽಸ್ತು ಮಹೇಶ್ವರ ನಮೋಽಸ್ತು ತೇ ।
ಸುರಾಸುರವರ ಶ್ರೇಷ್ಠ ಮನೋಽಹಂಸ ನಮೋಽಸ್ತು ತೇ ॥ ೬೫ ॥

॥ ಸೂತ ಉವಾಚ ॥

ಏತಚ್ಛ್ರುತ್ವಾ ಗತಾಃ ಸರ್ವೇ ಸುರಾಃ ಸ್ವಂ ಸ್ವಂ ನಿವೇಶನಂ ।
ನಮಸ್ಕಾರಂ ಪ್ರಯುಂಜಾನಾಃ ಶಂಕರಾಯ ಮಹಾತ್ಮನೇ ॥ ೬೬ ॥

ಇಮಂಸ್ತವಂ ಪಠೇದ್ಯಸ್ತು ಈಶ್ವರಸ್ಯ ಮಹಾತ್ಮನಃ ।
ಕಾಮಾಂಶ್ಚ ಲಭತೇ ಸರ್ವಾನ್ ಪಾಪೇಭ್ಯಸ್ತು ವಿಮುಚ್ಯತೇ ॥ ೬೭ ॥

ಏತತ್ಸರ್ವಂ ಸದಾ ತೇನ ವಿಷ್ಣುನಾ ಪ್ರಭವಿಷ್ಣುನಾ ।
ಮಹಾದೇವಪ್ರಸಾದೇನ ಉಕ್ತಂ ಬ್ರಹ್ಮ ಸನಾತನಂ ॥
ಏತದ್ವಃ ಸರ್ವಮಾಖ್ಯಾತಂ ಮಯಾ ಮಾಹೇಶ್ವರಂ ಬಲಂ ॥ ೬೮ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ
" ಲಿಂಗೋದ್ಭವಸ್ತವೋ " ನಾಮ ಪಂಚಪಂಚಾಶೋಽಧ್ಯಾಯಃ

---

೬೫. ಮಹಾದೇವನೂ, ಮಹೇಶ್ವರನೂ, ಸುರಾಸುರವರ್ಯನೂ, ಶ್ರೇಷ್ಠನೂ, ಮನೋಽಹಂಸನೂ ಆದ ಭಗವಂತನಿಗೆ ನಮಸ್ಕಾರಗಳೆಂದು ದೇವತೆಗಳು ಹೇಳಿ ಹೊರಟುಹೋದರು.

೬೬. ಸೂತಮುನಿಯು ಹೇಳಿದನು :— ಇದನ್ನು ಕೇಳಿದ ಸಮಸ್ತರಾದ ದೇವತೆಗಳೂ ಈ ಮಹಾತ್ಮನಾದ ಶಂಕರನಿಗೆ ನಮಸ್ಕಾರಗಳನ್ನು ಮಾಡಿ, ತಂತಮ್ಮ ಸ್ಥಾನಗಳಿಗೆ ಹೋದರು.

೬೭–೬೮. ಮಹಾತ್ಮನಾದ ಪರಮೇಶ್ವರನ ಈ ಸ್ತೋತ್ರವನ್ನು ಯಾರು ಪಠನಮಾಡುತ್ತಾರೆಯೋ ಅವರು ಸರ್ವಪಾಪಗಳಿಂದಲೂ ಮುಕ್ತರಾಗುವುದಲ್ಲದೆ, ಸಕಲೇಷ್ಟಾರ್ಥಗಳನ್ನೂ ಹೊಂದುವರು. ಅತ್ಯಂತ ಸಮರ್ಥನಾದ ಮಹಾವಿಷ್ಣುವು ಮಹಾದೇವನ ಅನುಗ್ರಹದಿಂದ ಸನಾತನವೂ ಆದ ಈ ಬ್ರಹ್ಮವಿಷಯಕವಾದ ಕಥೆಯನ್ನು ಲೋಕಾನುಗ್ರಹಕ್ಕಾಗಿ ನಿರೂಪಿಸಿರುವನು. ಅಂತಹ ಮಹೇಶ್ವರ ಮಾಹಾತ್ಮ್ಯ ವಿಷಯಕವಾದ ಕಥೆಯನ್ನು ನಾನು ನಿಮಗಾಗಿ ಹೇಳಿರುತ್ತೇನೆ ಎಂಬುದಾಗಿ ಸೂತ ಮುನಿಯು ಮಹರ್ಷಿಗಳಿಗೆ ಹೇಳಿದರು.

ಇಲ್ಲಿಗೆ ಶ್ರೀ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಈಶ್ವರನ ಲಿಂಗೋದ್ಭವ ಲಿಂಗಸ್ತವನವೆಂಬ ಐವತ್ತೈದನೆಯ ಅಧ್ಯಾಯವು ಸಮಾಪ್ತವಾದುದು.

# ಐವತ್ತೈದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪರಮೇಶ್ವರನ ಲಿಂಗೋದ್ಭವವೂ ಅದರ ಉತ್ಪತ್ತಿಯೂ ವಿಶೇಷವಾಗಿ ವರ್ಣಿತವಾಗಿದೆ. ಪೂರ್ವದಲ್ಲಿ ಮಹಾವಿಷ್ಣುವು ಬಲಿಚಕ್ರವರ್ತಿಯನ್ನು ಬಂಧಿಸಿ, ರಾಕ್ಷಸರನ್ನು ಸಂಹರಿಸಿ ಕ್ಷೀರಸಾಗರದಲ್ಲಿ ಮಲಗಿದ್ದನು. ಆಗ ಚರಾಚರಾತ್ಮಕವಾದ ಲೋಕಗಳು ಉದರಗತವಾಗಿದ್ದುವು. ಆಗ ಸೃಷ್ಟಿಕರ್ತನಾದ ಬ್ರಹ್ಮನು ವಿಷ್ಣುವಿನ ಬಳಿಗೆ ಬಂದು ಪರಸ್ಪರ ತಿಳಿಯದವರಂತೆ ನಟನಮಾಡುತ್ತಿದ್ದರು. ಆಗ ದಿವ್ಯತೇಜೋಮಯವಾದ ಲಿಂಗವು ಪ್ರತ್ಯಕ್ಷವಾಯಿತು. ಆ ಲಿಂಗದ ಕೊನೆ ಮೊದಲನ್ನು ಯಾವನು ತಿಳಿಯುವನೋ ಅವನೇ ಉತ್ತಮನೆಂದು ವ್ಯಕ್ತವಾಯಿತು. ಆಗ ಬ್ರಹ್ಮನು ಮೇಲ್ಭಾಗಕ್ಕೂ, ವಿಷ್ಣುವು ಆ ಲಿಂಗದ ಕೆಳಭಾಗಕ್ಕೂ ಕೊನೆಯನ್ನು ಕಾಣಲು ಹೊರಟರು. ಒಂದುಸಹಸ್ರ ವರ್ಷಗಳು ಹುಡುಕಿದರೂ ಕೊನೆಯು ಇಬ್ಬರಿಗೂ ಸಿಕ್ಕಲಿಲ್ಲ. ಆಗ ಅವರು ಹಿಂದಕ್ಕೆ ಬಂದರು. ಬ್ರಹ್ಮದೇವನು ಈಶ್ವರನನ್ನು ನಾನಾ ರೀತಿಯಾಗಿ ಹೊಗಳಿದನು. ಆಗ ಪರಮೇಶ್ವರನು ಬ್ರಹ್ಮ ವಿಷ್ಣುಗಳಿಗೆ ವರಗಳನ್ನು ಕೊಟ್ಟು ತಕ್ಷಣ ಮಾಯವಾದನು. ಬ್ರಹ್ಮಾದಿ ದೇವತೆಗಳು ತಂತಮ್ಮ ಲೋಕಗಳಿಗೆ ತೆರಳಿದರು. ಎಂಬುದಾಗಿ ವಾಯುದೇವನು ದೇವರ್ಷಿಗಳಿಗೆ ಹೇಳಿದ ವಿಷಯವನ್ನೇ ನಿಮಗೆ ತಿಳಿಸಿರುತ್ತೇನೆಂದು ಸೂತಮುನಿಯು ಮುನಿಗಳಿಗೆ ತಿಳಿಸಿರುವ ವಿಷಯವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಷಟ್‌ಪಂಚಾಶೋಽಧ್ಯಾಯಃ

॥ ಶಾಂಶಪಾಯನ ಉವಾಚ ॥

ಅಗಾತ್ಕಥಮಮಾವಾಸ್ಯಾಂ ಮಾಸಿ ಮಾಸಿ ದಿವಂ ನೃಪಃ ।
ಏಲಃ ಪುರೂರವಾಃ ಸುತ ಕಥಂ ವಾಽತರ್ಪಯತ್ ಪಿತೄನ್ ॥ ೧ ॥

॥ ಸೂತ ಉವಾಚ ॥

ತಸ್ಯ ಚಾಹಂ ಪ್ರವಕ್ಷ್ಯಾಮಿ ಪ್ರಭಾವಂ ಶಾಂಶಪಾಯನ ।
ಏಲಸ್ಯಾದಿತ್ಯಸಂಯೋಗಂ ಸೋಮಸ್ಯ ಚ ಮಹಾತ್ಮನಃ ॥ ೨ ॥

---

### ಐವತ್ತಾರನೆಯ ಅಧ್ಯಾಯ ಪ್ರಾರಂಭವು

೧. ಶಾಂಶಪಾಯನ ಮುನಿಯು ಹೇಳಿದನು :—ಎಲೈ ಸೂತಮುನಿಯೇ, ಏಲರಾಜನ ಪುತ್ರನಾದ ಪುರೂರವ ಮಹಾರಾಜನು ಪ್ರತಿಮಾಸದ ಅಮಾವಾಸ್ಯೆಯಲ್ಲಿಯೂ ಸ್ವರ್ಗಕ್ಕೆ ಹೋಗಿ ಹೇಗೆ ಪಿತೃಗಳಿಗೆ ತೃಪ್ತಿಯನ್ನುಂಟುಮಾಡಿದನು. ಈ ವಿಷಯಗಳನ್ನು ದಯವಿಟ್ಟು ತಿಳಿಸಬೇಕೆಂದು ಕೇಳಿದರು.

೨. ಸೂತಮುನಿಯು ಹೇಳಿದನು :— ಎಲೈ ಶಾಂಶಪಾಯನಮುನಿಯೇ, ಮಹಾತ್ಮನಾದ ಪುರೂರವಸ ಮಹಾರಾಯನ ಮಾಹಾತ್ಮ್ಯವನ್ನೂ, ಮಹಾತ್ಮರಾದ ಸೋಮಸೂರ್ಯರ ಸಂಸರ್ಗವನ್ನೂ ನಿನಗಾಗಿ ವರ್ಣಿಸುವೆನು ಕೇಳೆಂದನು.

**ಅಪಾಂಸಾರಮಯಸ್ಯೇಂದೋಃ ಪಕ್ಷಯೋಃ ಶುಕ್ಲಕೃಷ್ಣಯೋಃ ।**
**ಹ್ರಾಸವೃದ್ಧೀ ಪಿತೃಮತಃ ಪಕ್ಷಸ್ಯ ಚ ವಿನಿರ್ಣಯಃ ॥ ೩ ॥**

**ಸೋಮಾಚ್ಚೈವಾಮೃತಪ್ರಾಪ್ತಿಃ ಪಿತೃಣಾಂತರ್ಪಣಂ ತಥಾ ।**
**ಕವ್ಯಾಗ್ನೇಶ್ಚಾತ್ತಸೋಮಾನಾಂ ಪಿತೄಣಾಂತರ್ಪಣಂ ತಥಾ ॥ ೪ ॥**

**ಯಥಾ ಪುರೂರವಾಶ್ಚೈಲಸ್ತರ್ಪಯಾಮಾಸ ವೈ ಪಿತೄನ್ ।**
**ಏತತ್ಸರ್ವಂ ಪ್ರವಕ್ಷ್ಯಾಮಿ ಪರ್ವಾಣಿ ಚ ಯಥಾಕ್ರಮಂ ॥ ೫ ॥**

**ಯದಾ ತು ಚಂದ್ರಸೂರ್ಯೌ ತೌ ನಕ್ಷತ್ರೇಣ ಸಮಾಗತೌ ।**
**ಅಮಾವಾಸ್ಯಾನ್ನಿವಸತ ಏಕರಾತ್ರ್ಯೈ ಕಮಂಡಲೇ ॥ ೬ ॥**

---

೩. ಜಲದ ಸಾರಮಯನಾದ ಚಂದ್ರನಿಗೆ ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿ ಉಂಟಾಗುವ ಹ್ರಾಸವೃದ್ಧಿಗಳನ್ನೂ, ಕೃಷ್ಣಪಕ್ಷದಲ್ಲಿ ಪಿತೃಗಳಿಗೆ ಉಂಟಾಗುವ ತೃಪ್ತಿಯನ್ನೂ ನಿರ್ಣಯಿಸಿ ಹೇಳುವೆನು ಕೇಳೆಂದನು.

೪. ಮತ್ತು ಚಂದ್ರನಿಂದ ಅಮೃತಪ್ರಾಪ್ತಿಯು. ಅವರಿಂದ ಪಿತೃಗಳಿಗೆ ಉಂಟಾಗುವ ತೃಪ್ತಿಯು. ಕವ್ಯ, ಅಗ್ನಿ, ಸೋಮ ಮತ್ತು ಪಿತೃಗಳು ಇವರ ದರ್ಶನ. ಈ ವಿಷಯಗಳನ್ನು ತಿಳಿಸುವೆನು ಕೇಳೆಂದನು.

೫. ಏಲವಂಶೀಕನಾದ ಪುರೂರುವ ಮಹಾರಾಜನು ಹೇಗೆ ಪಿತೃಗಳನ್ನು ತೃಪ್ತಿಪಡಿಸಿದನು ? ಪರ್ವಕಾಲವೆಂದರೇನು ? ಈ ವಿಷಯಗಳನ್ನು ಕ್ರಮವಾಗಿ ಯಥಾಸ್ಥಿತರೀತಿಯಲ್ಲಿ ವರ್ಣಿಸುವೆನು ಕೇಳಿ ಎಂದನು.

೬. ಯಾವಾಗ ಸೂರ್ಯ ಚಂದ್ರರಿಬ್ಬರೂ ನಕ್ಷತ್ರಗಳೊಡನೆ ಸೇರುವರೋ, ಆಗ ಅಮಾವಾಸ್ಯೆಯಾಗುವುದು. ಅವರು ಏಕರಾತ್ರಿಯಲ್ಲಿ ಏಕಮಂಡಲದಲ್ಲಿರುವರು.

ಸ ಗಚ್ಛತಿ ತದಾ ದ್ರಷ್ಟುಂ ದಿವಾಕರನಿಶಾಕರೌ ।
ಅಮಾವಾಸ್ಯಾಮಮಾ ವಾಸ್ಯಾಂ ಮಾತಾಮಹಪಿತಾಮಹೌ ॥
ಅಭಿವಾದ್ಯ ತದಾ ತತ್ರ ಕಾಲಾಪೇಕ್ಷಃ ಪ್ರತೀಕ್ಷ್ಯತೇ ॥ ೭ ॥

ಪ್ರಸೀದಮಾನಾತ್ ಸೋಮಾಚ್ಚ ಪಿತ್ರರ್ಥಂ ತತ್ಪರಿಸ್ರವಾತ್ ।
ಏಲಃ ಪುರೂರವಾ ವಿದ್ವಾನ್ ಮಾಸಿ ಮಾಸಿ ಪ್ರಯತ್ನತಃ ॥
ಉಪಾಸ್ತೇ ಪಿತೃಮಂತಂ ತಂ ಸಸೋಮಂ ಸ ದಿವಾಸ್ಥಿತಃ ॥ ೮ ॥

ದ್ವಿಲವಂ ಕುಹುಮಾತ್ರಂ ತು ತೇ ಉಭೇ ತು ವಿಚಾರ್ಯ ಸಃ ।
ಸಿನೀವಾಲೀಪ್ರಮಾಣೇನ ಸಿನೀವಾಲೀಮುಪಾಸಕಃ ॥ ೯ ॥

ಕುಹೂ ಮಾತ್ರಂ ಕಲಾಂ ಚೈವ ಜ್ಞಾತ್ವೋಪಾಸ್ತೇ ಕುಹಂ ಪುನಃ ।
ಸ ತದಾ ಭಾನುಮತ್ಯೇಕಕಾಲಾವೇಕ್ಷೀ ಪ್ರಪಶ್ಯತಿ ॥ ೧೦ ॥

---

೭–೮. ಆಗ ಪುರೂರುವಸ ಮಹಾರಾಜನು ಸೂರ್ಯ ಚಂದ್ರರನ್ನು ನೋಡುವುದಕ್ಕಾಗಿ ಪ್ರತಿ ಅಮಾವಾಸ್ಯೆಯಲ್ಲಿಯೂ ಸ್ವರ್ಗಕ್ಕೆ ಹೋಗುವನು. ಆಗ ಅವನು ಮಾತಾಮಹ ಪಿತಾಮಹರನ್ನು ಕಂಡು ನಮಸ್ಕರಿಸಲೋಸ್ಕರ ಕಾಲವನ್ನು ನಿರೀಕ್ಷಿಸುತ್ತಿರುವನು. ಅಲ್ಲಿಗೆ ಬಂದ ಪಿತೃಗಳಿಗೆ ನಮಸ್ಕರಿಸಿ ಬರುವನು. ಹೀಗೆ ಪ್ರತಿಮಾಸದಲ್ಲಿಯೂ ನಡೆಯುವುದು. ಏಲರಾಜನವಂಶದ ಪುರೂರವ ಮಹಾರಾಜನು ಪ್ರಸನ್ನನಾದ ಚಂದ್ರನಿಂದ ಪಿತೃಗಳಿಗೆ ಉಂಟಾದ ಅಮೃತಪಾನದ ತೃಪ್ತಿಯಿಂದ ಸಂತುಷ್ಟನಾಗಿ ಪ್ರತಿ ಅಮಾವಾಸ್ಯೆಯಲ್ಲಿಯೂ ಸ್ವರ್ಗಕ್ಕೆ ಹೋಗಿ ಪಿತೃಗಳನ್ನೂ ಚಂದ್ರನನ್ನೂ ಸೇವಿಸುವನು.

೯. ಚಂದ್ರನ ಕಲೆಗಳು ಸಂಪೂರ್ಣವಾಗಿ ನಷ್ಟವಾದರೆ ಕುಹೂ ಎಂದೂ, ಚಂದ್ರನ ಕಲೆಗಳಿರುವ ಅಮಾವಾಸ್ಯೆಗೆ ಸಿನೀವಾಲಿಯೆಂದೂ ಸಂಜ್ಞೆಗಳುಂಟಾಗಿವೆ. ಹೀಗೆ ಸಿನೀವಾಲಿಯನ್ನು ಸಂಪೂರ್ಣವಾಗಿ ಅರಿತು ಅಮಾವಾಸ್ಯೆಯನ್ನು ಸೇವಿಸುವನು.

೧೦. ದ್ವಿಮಾತ್ರಾವಶಿಷ್ಟವಾದ ಕುಹೂ ಎಂಬ ಅಮಾವಾಸ್ಯೆಯನ್ನು ತಿಳಿದು ಸೇವಿಸಬೇಕು. ಕಲಾಸಹಿತವಾದ ಸಿನೀವಾಲಿ ಎಂಬ ಅಮಾವಾಸ್ಯೆಯನ್ನೂ, ಕಲಾರಹಿತವಾದ ಕುಹೂ ಎಂಬ ಅಮಾವಾಸ್ಯೆಯನ್ನೂ ತಿಳಿದು ಅವನ್ನೂ ಪಿತೃಗಳನ್ನೂ ಪ್ರತ್ಯೇಕವಾಗಿ ಸೇವಿಸುತ್ತಾರೆ.

ಸುಧಾಮೃತಂ ಕುತಃ ಸೋಮಾತ್ ಪಸ್ರವೇನ್ಮಾಸತೃಪ್ತಯೇ ।
ದಶಭಿಃ ಪಂಚಭಿಶ್ಚೈವ ಸುಧಾಮೃತಪರಿಸ್ರವೈಃ ॥ ೧೧ ॥

ಕೃಷ್ಣಪಕ್ಷೇ ತದಾ ಪೀತ್ವಾ ದುಹ್ಯಮಾನಂ ತಥಾಂಶುಭಿಃ ।
ಸದ್ಯಃ ಪಕ್ಷರತಾ ತೇನ ಸೌಮ್ಯೇನ ಮಧುನಾ ಚ ಸಃ ॥ ೧೨ ॥

ನಿರ್ವಾಪಣಾರ್ಥಂ ದತ್ತೇನ ಪಿತ್ರೇಣ ವಿಧಿನಾ ನೃಪಃ ।
ಸುಧಾಮೃತೇನ ರಾಜೇಂದ್ರಸ್ತರ್ಪಯಾಮಾಸ ವೈ ಪಿತೄನ್ ॥
ಸೌಮ್ಯಾ ಬರ್ಹಿಷದಃ ಕಾವ್ಯಾ ಅಗ್ನಿಷ್ವಾತ್ತಾಸ್ತಥೈವ ಚ ॥ ೧೩ ॥

ಋತುರಗ್ನಿಸ್ತು ಯಃ ಪ್ರೋಕ್ತಃ ಸ ತು ಸಂವತ್ಸರೋ ಮತಃ ।
ಜಜ್ಞಿರೇ ಹ್ಯೃತವಸ್ತಸ್ಮಾದೃತುಭ್ಯಶ್ಚಾರ್ತವಾಶ್ಚ ಯೇ ॥ ೧೪ ॥

ಆರ್ತವಾ ಹ್ಯರ್ಧಮಾಸಾಖ್ಯಾಃ ಪಿತರೋ ಹ್ಯಬ್ದಸೂನವಃ ।
ಋತುಃ ಪಿತಾಮಹಾ ಮಾಸಾ ಋತುಶ್ಚೈವಾಬ್ದಸೂನವಃ ॥ ೧೫ ॥

---

೧೧. ಸುಧಾರೂಪವಾದ ಅಮೃತವು ಚಂದ್ರನಿಂದ ಹೇಗೆ ಸ್ರವಿಸುವುದು. ಹದಿನೈದು ದಿವಸಗಳು ಸುರಿಯುವ ಅಮೃತದಿಂದ ಪಿತೃಗಳಿಗೂ ದೇವತೆಗಳಿಗೂ ಒಂದುತಿಂಗಳವರೆಗೂ ಹೇಗೆ ತೃಪ್ತಿಯಾಗುವುದು ಎಂದನು.

೧೨. ಕೃಷ್ಣಪಕ್ಷದಲ್ಲಿ ಕಿರಣಗಳಿಂದ ಪೀತವಾದ ಕರೆಯಲ್ಪಟ್ಟ ಅಮೃತವು ಕಿರಣಮೂಲಕವಾಗಿ ಸ್ರವಿಸಿ, ಪಿತೃಗಳಿಗೂ ದೇವತೆಗಳಿಗೂ ತೃಪ್ತಿಯನ್ನುಂಟು ಮಾಡುತ್ತದೆ.

೧೩. ಅಂತಹ ದಿವಸಗಳಲ್ಲಿ ಪುರೂರವಸ ಮಹಾರಾಜನು ಶಾಸ್ತ್ರೋಕ್ತಕ್ರಮ ದಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಕೊಟ್ಟ ದಾನಗಳು ಅಮೃತಮಯವಾಗಿ ಪರಿಣಮಿಸು ವುದರಿಂದ ಅಂತಹ ಅಮೃತದಿಂದ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವನು. ಸೌಮ್ಯರು, ಬರ್ಹಿಷದರು, ಕಾವ್ಯರು, ಅಗ್ನಿಷ್ವಾತ್ತರೆಂಬುದಾಗಿ ಪಿತೃಗಳು ನಾಲ್ಕು ವಿಧಗಳಾಗಿರುವರು.

೧೪-೧೫. ಋತುನಾಮಕಾಗ್ನಿಗೆ ಸಂವತ್ಸರವೆಂದು ನಾಮವು ಪ್ರಾಪ್ತವಾಗಿದೆ. ಅದರಿಂದ ಋತುಗಳೂ, ಆ ಋತುಗಳಿಂದ ಆರ್ತವಗಳೂ ಜನ್ಯವಾಗಿವೆ. ಆರ್ತವಗಳೇ ಅರ್ಧಮಾಸಗಳು. ಅಬ್ದಪುತ್ರರೇ ಪಿತೃಗಳು. ಋತುಗಳಿಗೆ ಮಾಸಗಳು ಪಿತಾ ಮಹಂದಿರು. ಋತುವೇ ಅಬ್ದಪುತ್ರರು.

ಪ್ರಪಿತಾಮಹಾಸ್ತು ವೈ ದೇವಾಃ ಪಂಚಾಬ್ದಾ ಬ್ರಹ್ಮಣಃ ಸುತಾಃ ।
ಸೌಮ್ಯಾಸ್ತು ಸೌಮ್ಯಜಾ ಜ್ಞೇಯಾಃ ಕಾವ್ಯಾ ಜ್ಞೇಯಾಃ ಕವೇಃ ಸುತಾಃ॥೧೬॥

ಉಪಹೂತಾಃ ಸ್ಮೃತಾ ದೇವಾಃ ಸೋಮಜಾಃ ಸೋಮಪಾಸ್ತಥಾ ।
ಆಜ್ಯಪಾಸ್ತು ಸ್ಮೃತಾಃ ಕಾವ್ಯಾಸ್ತೃಪ್ಯಂತಿ ಪಿತೃಜಾತಯಃ ॥ ೧೭ ॥

ಕಾವ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ತೇ ತ್ರಿಧಾ ।
ಗೃಹಸ್ಥಾ ಯೇ ಚ ಯಜ್ವಾನಾ ಋತುರ್ಬರ್ಹಿಷದೋ ಧ್ರುವಂ ॥ ೧೮ ॥

ಗೃಹಸ್ಥಾಶ್ಚಾಪಿ ಯಜ್ವಾನಾ ಅಗ್ನಿಷ್ವಾತ್ತಾಸ್ತಥಾರ್ತವಾಃ ।
ಅಷ್ಟಕಾಪತಯಃ ಕಾವ್ಯಾಃ ಪಂಚಾಬ್ದಾಸ್ತಾನ್ನಿಬೋಧತ ॥ ೧೯ ॥

ಏಷಾಂ ಸಂವತ್ಸರೋ ಹ್ಯಗ್ನಿಃ ಸೂರ್ಯಸ್ತು ಪರಿವತ್ಸರಃ ।
ಸೋಮ ಇದ್ವತ್ಸರಃ ಪ್ರೋಕ್ತೋ ವಾಯುಶ್ಚೈವಾನುವತ್ಸರಃ ॥ ೨೦ ॥

---

೧೬. ದೇವತೆಗಳೇ ಪ್ರಪಿತಾಮಹಂದರು (ಮುತ್ತಾತಂದಿರು), ಪಂಚವರ್ಷಗಳೂ ಬ್ರಹ್ಮನ ಮಾನಸಪುತ್ರರಾಗಿರುವರು. ಸೌಮ್ಯರು ಸೌಮ್ಯಜರೆಂದೂ, ಕಾವ್ಯರು ಕವಿಯಪುತ್ರರಾಗಿಯೂ ಇರುವರು.

೧೭. ದೇವತೆಗಳು ಉಪಹೂತರೆಂದು ಪ್ರಖ್ಯಾತರಾಗಿರುವರು. ಸೋಮಜರು ಸೋಮಪರೆಂದು ಪ್ರಸಿದ್ಧರಾಗಿರುವರು. ಕಾವ್ಯರಿಗೆ ಆಜ್ಯಪರೆಂದೂ ನಾಮಗಳಿವೆ. ಪಿತೃವಂಶಕ್ಕೆ ಸೇರಿದ ಈ ದೇವತೆಗಳು ತೃಪ್ತರಾಗಿರುವರು.

೧೮-೧೯. ಆ ಪಿತೃದೇವತೆಗಳು ಕಾವ್ಯರು, ಬರ್ಹಿಷದರು, ಅಗ್ನಿಷ್ವಾತ್ತರೆಂದು ಅವರು ಮೂರುವಿಧಗಳಾಗಿರುವರು. ಗೃಹಸ್ಥರೂ, ಯಾಗಶೀಲರೂ ಆದ ಋತುಗಳಿಗೆ ಬರ್ಹಿಷದರೆಂದು ಸಂಜ್ಞೆಯು ಪ್ರಸಿದ್ಧವಾಗಿದೆ. ಗೃಹಸ್ಥರೂ, ಋಜ್ವಿಗಳೂ ಆದ ಋತುಗಳಿಗೆ, ಕೆಲವು ಪಿತೃಗಳಿಗೆ ಅಗ್ನಿಷ್ವಾತ್ತರೆಂದು ಸಂಜ್ಞೆಯು ಪ್ರಾಪ್ತವಾಗಿರುತ್ತದೆ. ಋತುಗಳೂ, ಅಷ್ಟಕಾಪತಿಗಳೂ ಆದವರು ಕಾವ್ಯರು. ಈ ಪಂಚಾಬ್ದಗಳಿಗೆ ಯುಗವೆಂಬ ಸಂಜ್ಞೆಯುಂಟಾಗಿದೆ. ಈ ಪಂಚಸಂವತ್ಸರಗಳನ್ನು ತಿಳಿಯಿರಿ.

೨೦-೨೩. ಇವುಗಳಲ್ಲಿ ಅಗ್ನಿಗೆ ಸಂವತ್ಸರವೆಂದೂ, ಸೂರ್ಯನಿಗೆ ಪರಿವತ್ಸರವೆಂದೂ, ಚಂದ್ರನಿಗೆ ಇದ್ವತ್ಸರವೆಂದೂ, ವಾಯುವಿಗೆ ಅನುವತ್ಸರವೆಂದೂ, ರುದ್ರನಿಗೆ

ರುದ್ರಸ್ತು ವತ್ಸರಸ್ತೇಷಾಂ ಪಂಚಾಬ್ದಾ ಯೇ ಯುಗಾತ್ಮಕಾಃ ।
ಲೇಖಾಶ್ಚೈವೋಷ್ಮಪಾಶ್ಚೈವ ದಿವಾಕೀರ್ತ್ಯಾಶ್ಚ ತೇ ಸ್ಮೃತಾಃ ॥ ೨೦ ॥

ಏತೇ ಪಿಬಂತ್ಯಮಾವಾಸ್ಯಾಂ ಮಾಸಿ ಮಾಸಿ ಸುಧಾಂ ದಿವಿ ।
ತಾಂಸ್ತೇನ ತರ್ಪಯಾಮಾಸ ಯಾವದಾಸೀತ್ ಪುರೂರವಾಃ ॥ ೨೨ ॥

ಯಸ್ಮಾತ್ ಪ್ರಸ್ರವತೇ ಸೋಮಾನ್ಮಾಸಿ ಮಾಸಿ ನಿಬೋಧತ ।
ತಸ್ಮಾತ್ ಸುಧಾಮೃತಂ ತದ್ವೈ ಪಿತೃಣಾಂ ಸೋಮಪಾಯಿನಾಂ ॥ ೨೩ ॥

ಏವಂ ತದಮೃತಂ ಸೌಮ್ಯಂ ಸುಧಾ ಚ ಮಧು ಚೈವ ಹ ।
ಕೃಷ್ಣಪಕ್ಷೇ ಯಥಾ ಚೇಂದೋಃ ಕಲಾಃ ಪಂಚದಶ ಕ್ರಮಾತ್ ॥ ೨೪ ॥

ಪಿಬಂತ್ಯಂಬುಮಯೀರ್ದೇವಾಸ್ತ್ರಯಸ್ತ್ರಿಂಶತ್ತು ಛಂದಜಾಃ ॥
ಪೀತ್ವಾ ಚ ಮಾಸಂ ಗಚ್ಛಂತಿ ಚತುರ್ದಶ್ಯಾಂ ಸುಧಾಮೃತಂ ॥ ೨೫ ॥

---

ವತ್ಸರವೆಂದೂ ಸಂಜ್ಞೆಯು ಪ್ರಾಪ್ತವಾಗಿದೆ. ಈ ಐದುವತ್ಸರಗಳಿಗೂ ಯುಗವೆಂಬ ಸಂಜ್ಞೆಯು ಸಿದ್ಧವಾಗಿದೆ. ಅವರಿಗೆ ಲೇಖರು, ಊಷ್ಮಪರು, ದಿವಾಕೀರ್ತಿಗಳು ಎಂಬ ನಾಮಗಳೂ ಸಿದ್ಧವಾಗಿವೆ. ಇವರೆಲ್ಲರೂ ಪ್ರತಿ ತಿಂಗಳ ಅಮಾವಾಸ್ಯೆಯಲ್ಲಿಯೂ ಸ್ವರ್ಗದಲ್ಲಿ ಅಮೃತಪಾನವನ್ನು ಮಾಡುವರು. ಪುರೂರವಸರಾಜನು ಇರುವವರೆಗೂ ಆ ದೇವತೆಗಳನ್ನು ಅಮೃತದಿಂದ ತೃಪ್ತಿಪಡಿಸಿದನು.

೨೩. ಪ್ರತಿಮಾಸದಲ್ಲಿಯೂ ಯಾವ ಚಂದ್ರನಿಂದ ಸುಧಾಪ್ರವಾಹವು ಹರಿಯುತ್ತದೆಯೋ, ಅಂತಹ ಅಮೃತವನ್ನು ಸೋಮಪಾಯಿಗಳಾದ ಪಿತೃಗಳು ಪಾನ ಮಾಡುತ್ತಾರೆಂದು ಸೂತನು ಹೇಳಿದನು.

೨೪. ಈ ರೀತಿಯಲ್ಲಿ ಚಂದ್ರನಲ್ಲಿರುವ ಅಮೃತ ಸುಧೆ ಮಧುನಾಮಕವಾದ ಹದಿನೈದು ಕಲೆಯನ್ನು ಕೃಷ್ಣಪಕ್ಷದಲ್ಲಿ ಕ್ರಮವಾಗಿ ಪಿತೃಗಳು ಮತ್ತು ದೇವತೆಗಳು ಪಾನಮಾಡುವರು.

೨೫. ಮೂವತ್ತುಮೂರುಕೋಟಿ ದೇವತೆಗಳು ಛಾಂದಸರಾಗಿ ಜಲಮಯ ವಾದ ಅಮೃತವನ್ನು ಪಾನಮಾಡುತ್ತಾರೆ. ಹೀಗೆ ಪ್ರತಿಮಾಸದ ಚತುರ್ದಶಿಯಲ್ಲಿಯೂ ಸುಧಾಮೃತವನ್ನು ಪಾನಮಾಡಿ ತೃಪ್ತರಾಗುವರು.

ಇತ್ಯೇವಂ ಪೀಯಮಾನಸ್ತು ದೈವತೈಶ್ಚ ನಿಶಾಕರಃ ।
ಸಮಾಗಚ್ಛದಮಾವಾಸ್ಯಾಂ ಭಾಗೇ ಪಂಚದಶೇ ಸ್ಥಿತಃ ॥ ೨೬ ॥

ಸುಷುಮ್ನಾಪ್ಯಾಯಿತಂ ಚೈವ ಅಮಾವಾಸ್ಯಾಂ ಯಥಾಕ್ರಮಂ ।
ಪಿಬಂತಿ ದ್ವಿಕಲಂ ಕಾಲಂ ಪಿತರಸ್ತೇ ಸುಧಾಮೃತಂ ॥ ೨೭ ॥

ತತಃ ಪೀತಕ್ಷಯೇ ಸೋಮೇ ಸೂರ್ಯೋऽಸಾವೇಕರಶ್ಮಿನಾ ।
ಆಪ್ಯಾಯಯತ್ಸುಷುಮ್ನೇನ ಪಿತೄಣಾಂ ಸೋಮಪಾಯಿನಾಂ ॥ ೨೮ ॥

ನಿಃಶೇಷಾಯಾಂ ಕಲಾಯಾಂ ತು ಸೋಮಮಾಪ್ಯಾಯಯತ್ಪುನಃ ।
ಸುಷುಮ್ನಾಪ್ಯಾಯಮಾನಸ್ಯ ಭಾಗಂ ಭಾಗಮಹಃ ಕ್ರಮಾತ್ ॥
ಕಲಾಃ ಕ್ಷೀಯಂತಿ ತಾಃ ಕೃಷ್ಣಾಃ ಶುಕ್ಲಶ್ಚಾಪ್ಯಾಯಯಂತಿ ಚ ॥ ೨೯ ॥

---

೨೬. ಹೀಗೆ ದೇವತೆಗಳಿಂದ ಪಾನಮಾಡಲ್ಪಟ್ಟ ಕಲೆಗಳುಳ್ಳ ಚಂದ್ರನು ಅಮಾವಾಸ್ಯೆಯಲ್ಲಿ ಹದಿನೈದನೆಯ ಕಲಾವಿಶಿಷ್ಟನಾಗಿ ಇರುವರು. ಅಂತಹ ಪರ್ವಗಳಲ್ಲಿ ಪಿತೃಗಳು ಅಮೃತವನ್ನು ಪಾನಮಾಡುವರು.

೨೭. ಅನಂತರ ದ್ವಿಕಲಾಮಾತ್ರವಿಶಿಷ್ಟನಾದ ಚಂದ್ರನು ಸುಷುಮ್ನಾನಾಮಕ ಕಲೆಗಳಿಂದ ಅಮಾವಾಸ್ಯೆಯಲ್ಲಿ ಕ್ರಮವಾಗಿ ಪಿತೃಗಳನ್ನು ತೃಪ್ತಿಗೊಳಿಸುವನು. ಅಂತಹ ಅಮಾವಾಸ್ಯೆಯಲ್ಲಿ ಪಿತೃಗಳು ಚಂದ್ರನ ಅಮೃತವನ್ನು ಪಾನಮಾಡುವರು.

೨೮. ಅನಂತರ ಏಕಕಲಾವಿಶಿಷ್ಟನಾದ ಚಂದ್ರನು ಅಮಾವಾಸ್ಯೆಯಲ್ಲಿ ಸೂರ್ಯನನ್ನು ಹೊಂದುವನು. ತರುವಾಯ ಸೂರ್ಯನು ಸೋಮಪಾಯಿಗಳಾದ ಪಿತೃಗಳಿಗೆ ಸುಷುಮ್ನಾನಾಮಕಕಲೆಯಿಂದ ಆನಂದವನ್ನುಂಟುಮಾಡುವನು.

೨೯. ಹೀಗೆ ಚಂದ್ರನ ಕಲೆಯು ಸಂಪೂರ್ಣವಾಗಿ ಕ್ಷಯಿಸಲಾಗಿ ಸೂರ್ಯನು ಸುಷುಮ್ನಾನಾಮಕ ಅವಶಿಷ್ಟಕಲೆಯಿಂದ ಶುಕ್ಲಪಕ್ಷದಲ್ಲಿ ಒಂದೊಂದು ಭಾಗವನ್ನು ಕ್ರಮವಾಗಿ ವೃದ್ಧಿಪಡಿಸುವನು. ಹೀಗೆ ಕೃಷ್ಣಪಕ್ಷದಲ್ಲಿ ಕ್ಷಯವಾದ ಕಲೆಗಳು ಶುಕ್ಲಪಕ್ಷದಲ್ಲಿ ವೃದ್ಧಿಯಾಗುವುದು.

ಏವಂ ಸೂರ್ಯಸ್ಯ ವೀರ್ಯೇಣ ಚಂದ್ರಸ್ಯಾಪ್ಯಾಯಿತಾ ತನುಃ ।
ದೃಶ್ಯತೇ ಪೌರ್ಣಮಾಸ್ಯಾಂ ವೈ ಶುಕ್ಲಃ ಸಂಪೂರ್ಣಮಂಡಲಃ ॥
ಸಂಸಿದ್ಧಿರೇವಂ ಸೋಮಸ್ಯ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೩೦ ॥

ಇತ್ಯೇಷ ಪಿತೃಮಾನ್ ಸೋಮಃ ಸ್ಮೃತ ಇದ್ವತ್ಸರಃ ಕ್ರಮಾತ್ ।
ಕ್ರಾಂತಃ ಪಂಚದಶೈಃ ಸಾರ್ದ್ಧಂ ಸುಧಾಮೃತಪರಿಸ್ರವೈಃ ॥ ೩೧ ॥

ಅತಃ ಪರ್ವಾಣಿ ವಕ್ಷ್ಯಾಮಿ ಪರ್ವಣಾಃ ಸಂಧಯಸ್ತಥಾ ।
ಗ್ರಂಥಿಮಂತಿ ಯಥಾ ಪರ್ವಾಣಿಕ್ಷುವೇಣ್ವೋರ್ಭವಂತ್ಯುತ ॥ ೩೨ ॥

ತಥಾರ್ದ್ಧಮಾಸಪರ್ವಾಣಿ ಶುಕ್ಲಕೃಷ್ಣಾನಿ ವೈ ವಿದುಃ ।
ಪೂರ್ಣಿಮಾವಾಸ್ಯಯೋರ್ಭೇದೈರ್ಗ್ರಂಥಿರ್ಯಾ ಸಂಧಯಶ್ಚ ವೈ ॥
ಅರ್ದ್ಧಮಾಸಾಸ್ತು ಪರ್ವಾಣಿ ತೃತೀಯಾ ಪ್ರಭೃತೀನಿ ತು ॥ ೩೩ ॥

---

೩೦. ಹೀಗೆ ಸೂರ್ಯನ ಶಕ್ತಿಯಿಂದ ಚಂದ್ರನ ಶರೀರವು ವೃದ್ಧಿಯಾಗುವುದು. ಶುಕ್ಲಪಕ್ಷದ ಹುಣ್ಣಿಮೆಯಲ್ಲಿ ಚಂದ್ರನ ಸಂಪೂರ್ಣ ಕಲೆಗಳೂ ತುಂಬಿ ಪೂರ್ಣನಾಗಿರುವನು. ಹೀಗೆ ಪ್ರತಿಮಾಸದಲ್ಲಿಯೂ ಚಂದ್ರನ ಕಲೆಗಳು ಶುಕ್ಲಪಕ್ಷದಲ್ಲಿ ವೃದ್ಧಿಯನ್ನೂ, ಕೃಷ್ಣಪಕ್ಷದಲ್ಲಿ ಕ್ಷಯವನ್ನೂ ಹೊಂದುತ್ತವೆ.

೩೧. ಹೀಗೆ ಪಿತೃಮಂತನಾದ ಸೋಮನು ಕ್ರಮವಾಗಿ ಇದ್ವತ್ಸರನೆಂದು ಪ್ರಸಿದ್ಧನಾಗಿರುವನು. ಇಂತಹ ಚಂದ್ರನು ಸುಧಾಮೃತಪ್ರವಾಹಗಳಿಂದ ಹದಿನೈದು ದಿವಸದಲ್ಲಿ ಪೂರ್ಣನಾಗಿರುವನು.

೩೨. ಈಗ ಪರ್ವಕಾಲದ ಸಂಧಿಯನ್ನೂ, ಪರ್ವವನ್ನೂ ನಿರೂಪಿಸುವೆನು ಕೇಳಿರಿ. ಹೇಗೆ ಕಬ್ಬಿನ ಜಿಲ್ಲೆಯಲ್ಲಿಯೂ, ಬಿದುರಿನ ಕೋಲಿನಲ್ಲಿಯೂ ಗಂಟುಗಳೂ, ಗೆಣ್ಣುಗಳೂ ಇರುತ್ತವೆಯೋ, ಹಾಗೆಯೇ ಅಖಂಡಕಾಲದಲ್ಲಿ ಪೌರ್ಣಿಮಾ, ಅಮಾವಾಸ್ಯೆ, ವ್ಯತೀಪಾತ ಇವೇ ಮೊದಲಾದ ಪರ್ವಗಳು ಇರುತ್ತವೆ.

೩೩. ಅರ್ಧಮಾಸಗಳಿಗೆ ಅಂದರೆ ಪಕ್ಷಗಳಿಗೆ ಕೃಷ್ಣಪಕ್ಷ ಶುಕ್ಲಪಕ್ಷಗಳೆಂಬ ಪರ್ವಗಳಿವೆ. ಪೂರ್ಣಿಮಾ ಅಮಾವಾಸ್ಯೆಗಳೆಂಬ ಗ್ರಂಥಿಗಳು ಸಂಧಿಗಳು ಇರುತ್ತವೆ. ಅರ್ಧಮಾಸಕ್ಕೆ ತೃತೀಯಾದಿಗಳು ಪರ್ವಗಳಾಗಿವೆ.

ಅಗ್ನ್ಯಾಧಾನಕ್ರಿಯಾ ಯಸ್ಮಾತ್ ಕ್ರಿಯತೇ ಪರ್ವಸಂಧಿಷು |
ಸಾಯಾಹ್ನೇ ಪ್ರತಿಪಚ್ಚೈವ ಸ ಕಾಲಃ ಪೌರ್ಣಮಾಸಿಕಃ || ೩೪ ||

ವ್ಯತೀಪಾತೇ ಸ್ಥಿತೇ ಸೂರ್ಯೇ ಲೇಖೋರ್ಧ್ವಂ ತು ಯುಗಾಂತರೇ |
ಯುಗಾಂತರೋದಿತೇ ಚೈವ ಲೇಖೋರ್ಧ್ವಂ ಶಶಿನಃ ಕ್ರಮಾತ್ || ೩೫ ||

ಪೌರ್ಣಮಾಸೇ ವ್ಯತೀಪಾತೇ ಯದೀಕ್ಷೇತೇ ಪರಸ್ಪರಂ |
ಯಸ್ಮಿಂಕಾಲೇ ಸ ಸೀಮಾಂತೇ ಸ ವ್ಯತೀಪಾತ ಏವ ತು || ೩೬ ||

ಕಾಲಂ ಸೂರ್ಯಸ್ಯ ನಿರ್ದೇಶಂ ದೃಷ್ಟ್ವಾ ಸಂಖ್ಯಾ ತು ಸರ್ಪತಿ |
ಸ ವೈ ಪಥಂ ಕ್ರಿಯಾಕಾಲಃ ಕಾಲಾತ್ಸದ್ಯೋ ವಿಧೀಯತೇ || ೩೭ ||

---

೩೪. ಪರ್ವಸಂಧಿಗಳಲ್ಲಿಯೂ, ಸಾಯಂಕಾಲದಲ್ಲಿಯೂ, ಪಾಡ್ಯಮಿಯಲ್ಲಿಯೂ ಅಗ್ನ್ಯಾಧಾನಾದಿಕ್ರಿಯೆಗಳು ನಡೆಯುವುದರಿಂದ ಆ ಕಾಲಕ್ಕೆ ಪೌರ್ಣಿಮಾಸಿಕವೆಂಬ ಸಂಜ್ಞೆಯು ಪ್ರಾಪ್ತವಾಗಿದೆ.

೩೫. ಸೂರ್ಯನು ವ್ಯತೀಪಾತದಲ್ಲಿರಲಾಗಿ ಲೋಕಾಂತರದಲ್ಲಿ ಚಂದ್ರನು ಲೇಖೋರ್ಧ್ವಗತನಾಗುವನು. ಸೂರ್ಯನು ಯುಗಾಂತರದಲ್ಲಿ ಉದಯಿಸಲು ಚಂದ್ರನು ಲೇಖೋರ್ಧ್ವವನ್ನು ಕ್ರಮವಾಗಿ ಹೊಂದುವನು.

೩೬. ಪೌರ್ಣಿಮಾ ವ್ಯತೀಪಾತಗಳಿಗೆ ಯಾವಾಗ ಪರಸ್ಪರ ವೀಕ್ಷಣವಿರುತ್ತದೆಯೋ, ಸೀಮಾಂತದಲ್ಲಿ ಯಾವಾಗ ಸೂರ್ಯಾದಿ ಗ್ರಹಗಳಿರುತ್ತವೆಯೋ ಆ ಕಾಲಕ್ಕೆ ವ್ಯತೀಪಾತವೆಂಬ ಸಂಜ್ಞೆಯು ಉಂಟಾಗಿರುತ್ತದೆ.

೩೭. ಸೂರ್ಯನ ಕಾಲದೇಶಗಳನ್ನನುಸರಿಸಿ ಸಂಖ್ಯೆಯು ಪ್ರಾಪ್ತವಾಗುವುದು. ಅದನ್ನನುಸರಿಸಿ ಕ್ರಿಯಾಕಲಾಪವುಂಟಾಗುವುದು. ಇಂತಹ ಕಾಲದಲ್ಲಿ ಕರ್ಮಗಳು ವಿಧಿಸಲ್ಪಟ್ಟಿವೆ.

**ಪೂರ್ಣೇಂದೋಃ ಪರ್ಣಪಕ್ಷೇ ತು ರಾತ್ರಿಸಂಧಿಷು ಪೂರ್ಣಿಮಾ ।**
**ಯಸ್ಮಾತ್ತಾಮನುಪಶ್ಯಂತಿ ಪಿತರೋ ದೈವತೈಃ ಸಹ ॥**
**ತಸ್ಮಾದನುಮತಿರ್ನಾಮ ಪೂರ್ಣಿಮಾ ಪ್ರಥಮಾ ಸ್ಮೃತಾ ॥ ೩೮ ॥**

**ಅತ್ಯರ್ಥಂ ಭ್ರಾಜತೇ ಯಸ್ಮಾತ್ ಪೌರ್ಣಮಾಸ್ಯಾಂನಿಶಾಕರಃ ।**
**ರಂಜನಾಚ್ಚೈವ ಚಂದ್ರಸ್ಯ ರಾಕೇತಿ ಕವಯೋಃ ವಿದುಃ ॥ ೩೯ ॥**

**ಅಮಾ ವಸೇತಾಮೃಕ್ಷೇ ತು ಯದಾ ಚಂದ್ರದಿವಾಕರೌ ।**
**ಏಕಾಂ ಪಂಚದಶೀಂ ರಾತ್ರಿಮಮಾವಾಸ್ಯಾ ತತಃ ಸ್ಮೃತಾ ॥ ೪೦ ॥**

**ತತೋ ಪರಸ್ಯ ತ್ವೈರ್ವ್ಯಕ್ತಃ ಪೌರ್ಣಮಾಸ್ಯಾಂ ನಿಶಾಕರಃ ।**
**ಯದೀಕ್ಷತೇ ವ್ಯತೀಪಾತೇ ದಿವಾ ಪೂರ್ಣೇ ಪರಸ್ಪರಂ ॥**
**ಚಂದ್ರಾರ್ಕಾಪರಾಹ್ಣೇ ತು ಪೂರ್ಣಾತ್ಮಾಸೌ ತು ಪೂರ್ಣಿಮಾ ॥ ೪೧ ॥**

---

೩೮. ಶುಕ್ಲಪಕ್ಷದ ಯಾವ ರಾತ್ರಿಯಲ್ಲಿ ಚಂದ್ರನು ಪೂರ್ಣಮಂಡಲವಾಗಿ ಸಂಪೂರ್ಣ ಷೋಡಶ ಕಲೆಗಳಿಂದ ಪೂರ್ಣನಾಗಿರುವನೋ, ಆ ದಿವಸಕ್ಕೆ ಪೂರ್ಣಿಮೆ ಯೆಂದು ನಾಮವು ಇರುತ್ತದೆ. ಪಿತೃಗಳು ದೇವತೆಗಳ ಸಂಗಡ: ಆ ದಿವಸವನ್ನು ನಿರೀಕ್ಷಿಸುತ್ತಿರುವರು. ಆದುದರಿಂದ ಆ ಮೊದಲನೆಯ ಹುಣ್ಣಿಮೆಗೆ ಅನುಮತಿಯೆಂಬ ನಾಮವು ಪ್ರಾಪ್ತವಾಗಿದೆ.

೩೯. ಯಾವ ಹುಣ್ಣಿಮೆಯಲ್ಲಿ ಚಂದ್ರನು ಸಂಪೂರ್ಣ ಕಲಾಯುಕ್ತನಾಗಿ ಬಹಳವಾಗಿ ಪ್ರಜ್ವಲಿಸುತ್ತಾನೆಯೋ, ಆಗ ಜನಗಳಿಗೆ ಅತಿಯಾಗಿ ರಂಜನೆಯಾಗು ವುದು. ಇದರಿಂದ ಕವಿಗಳು ಅವನನ್ನು ರಾಕಾಚಂದ್ರನೆಂದು ಹೇಳುವರು.

೪೦. ಯಾವ ತಿಥಿಯಲ್ಲಿ ಸೂರ್ಯನ ಸಂಗಡ ಚಂದ್ರನು ವಾಸಿಸುವನೋ, ಸೂರ್ಯಚಂದ್ರರು ಒಂದೇಕಡೆಯಿರುವರೋ, ಅಂತಹ ಹದಿನೈದನೆಯ ರಾತ್ರಿಗೆ ಅಮಾವಾಸ್ಯೆಯೆಂಬ ನಾಮವು ಸಂಭವಿಸಿರುತ್ತದೆ. (ಅಮಾ ಸಹ ವಸತೀತಿ) ವ್ಯುತ್ಪತ್ತಿ ಯಿಂದ ಅಮಾವಾಸ್ಯೆಯಾಗುತ್ತದೆ.

೪೧. ಅನಂತರ ಶುಕ್ಲಪಕ್ಷದ ಹುಣ್ಣಿಮೆಯಲ್ಲಿ ಚಂದ್ರನು ಸಂಪೂರ್ಣ ಕಲೆ ಗಳಿಂದ ಪೂರ್ಣನಾಗಿ ವ್ಯತೀಪಾತದ ಹಗಲಲ್ಲಿ ಅಪರಾಹ್ಣಸಮಯದಲ್ಲಿ ಸೂರ್ಯನನ್ನು ನೋಡುವನು. ಹೀಗೆ ಸೂರ್ಯ ಚಂದ್ರರಿಬ್ಬರೂ ಅಪರಾಹ್ಣಕಾಲದ ಪೂರ್ಣಾತ್ಮರಾ ದುದರಿಂದ ಪೂರ್ಣಿಮೆಯೆಂಬ ನಾಮವು ಪ್ರಾಪ್ತವಾಗಿದೆ.

ವಿಚ್ಛಿನ್ನಾಂ ತಾಮಮಾವಾಸ್ಯಾಂ ಪಶ್ಯತಶ್ಚ ಸಮಾಗತೌ ।
ಅನ್ಯೋನ್ಯಂ ಚಂದ್ರಸೂರ್ಯೌ ತೌ ಯದಾ ತದ್ದರ್ಶ ಉಚ್ಯತೇ ॥ ೪೨ ॥

ದ್ವೌ ದ್ವೌ ಲವಾವಮಾವಾಸ್ಯಾಂ ಯಃ ಕಾಲಃ ಪರ್ವಸಂಧಿಷು ।
ದ್ವ್ಯಕ್ಷರಂ ಕುಹುಮಾತ್ರಂ ತು ಏವಂ ಕಾಲಸ್ತು ಸ ಸ್ಮೃತಃ ॥
ನಷ್ಟಚಂದ್ರಾಪ್ಯಮಾವಾಸ್ಯಾ ಮಧ್ಯಸೂರ್ಯೇಣ ಸಂಗತಾ ॥ ೪೩ ॥

ದಿವಸಾರ್ಧೇನ ರಾತ್ರ್ಯರ್ಧಂ ಸೂರ್ಯಂ ಪ್ರಾಪ್ಯ ತು ಚಂದ್ರಮಾಃ ।
ಸೂರ್ಯೇಣ ಸಹಸಾ ಮುಕ್ತಿಂ ಗತ್ವಾ ಪ್ರಾತಸ್ತನೋತ್ಸವೌ ॥
ದೌ ಕಾಲೌ ಸಂಗಮುಶ್ಚೈವ ಮಧ್ಯಾಹ್ನೇ ನಿಷ್ಪತೇದ್ರವಿಃ ॥ ೪೪ ॥

---

೪೨. ವಿಚ್ಛನ್ನವಾದ ಆ ಅಮಾವಾಸ್ಯೆಯಲ್ಲಿ ಚಂದ್ರನು ಕಲೆಗಳಿಂದ ಗಳಿತನಾಗಿ ಸೂರ್ಯನೊಡನೆ ಸಂಗತನಾಗುವನು. ಹೀಗೆ ಸೂರ್ಯಚಂದ್ರರು ಏಕತ್ರ ಮಿಳಿತರಾಗಿ ಪರಸ್ಪರ ದರ್ಶನವನ್ನೀಡುವುದರಿಂದ ಅದಕ್ಕೆ ದರ್ಶವೆಂಬ ನಾಮವು ಬಂದಿದೆ.

೪೩. ಯಾವ ಅಮಾವಾಸ್ಯೆಯಲ್ಲಿ ಚಂದ್ರನ ಎರಡುಕಾಲ ಕಲೆಗಳು ಪರ್ವಸಂಧಿಯಲ್ಲಿ ನಷ್ಟವಾಗುತ್ತವೆಯೋ, ಆ ನಷ್ಟವಾದ ಕಾಲಕ್ಕೆ ಕುಹುವೆಂಬ ಸಂಜ್ಞೆಯುಂಟಾಗುತ್ತದೆ. ಅಮಾವಾಸ್ಯೆಯಲ್ಲಿ ಚಂದ್ರನು ನಷ್ಟನಾದರೂ ಮಧ್ಯಕಾಲದಲ್ಲಿ ಸೂರ್ಯನ ಸಂಗಡ ಸೇರುವನು.

೪೪. ಚಂದ್ರನು ದಿವಸಾರ್ಧದಲ್ಲಿಯೂ, ರಾತ್ರಿಯ ಅರ್ಧದಲ್ಲಿಯೂ ಅಂದರೆ ಮಧ್ಯಾಹ್ನದಲ್ಲಿಯೂ, ಮಧ್ಯರಾತ್ರಿಯಲ್ಲಿಯೂ ಸೂರ್ಯನನ್ನು ಹೊಂದಿ, ಸೂರ್ಯನಿಂದ ಕೂಡಲೇ ಮುಕ್ತಿಯನ್ನು ಹೊಂದುವನು. ಹೀಗೆ ಅವರಿಬ್ಬರೂ ಸೇರುವ ಮತ್ತು ಮುಕ್ತರಾಗುವ ಕಾಲಗಳಿಗೆ ಪ್ರಾತಸ್ತನೋತ್ಸವಕಾಲವೆಂದು ನಾಮವು ಬಂದಿದೆ. ಆ ಮಧ್ಯಾಹ್ನದಲ್ಲಿ ಸೂರ್ಯನು ಚಂದ್ರನನ್ನು ಬಿಟ್ಟು ಹೊರಡುವನು.

ಪ್ರತಿಪಚ್ಛುಕ್ಲಪಕ್ಷಸ್ಯ ಚಂದ್ರಮಾಃ ಸೂರ್ಯಮಂಡಲಾತ್ ।
ನಿರ್ಮುಚ್ಯಮಾನಯೋರ್ಮಧ್ಯೇ ತಯೋರ್ಮಂಡಲಯೋಸ್ತು ವೈ ॥ ೪೫ ॥

ಸ ತದಾ ಹ್ಯಾಹುತೇಃ ಕಾಲೋ ದರ್ಶಸ್ಯ ಚ ವಷಟ್ ಕ್ರಿಯಾ ।
ಏತದೃತುಮುಖಂ ಜ್ಞೇಯಮಮಾವಾಸ್ಯಾಸ್ಯ ಪರ್ವಣಃ ॥ ೪೬ ॥

ದಿವಾ ಪರ್ವಣ್ಯಮಾವಾಸ್ಯಾಂ ಕ್ಷೀಣೇಂದೌ ಬಹುಲೇ ತು ವೈ ।
ತಸ್ಮಾದ್ದಿವಾ ಹ್ಯಮಾವಾಸ್ಯಾಂ ಗೃಹ್ಯತೇಽಸೌ ದಿವಾಕರಃ ॥
ಗೃಹ್ಯತೇ ವೈ ದಿವಾ ಹ್ಯಸ್ಮಾದಮಾವಾಸ್ಯಾಂ ದಿವಿ ಕ್ಷಯೈಃ ॥ ೪೭ ॥

ಕಾಲಾನಾಮಪಿ ವೈ ತಾಸಾಂ ಬಹುಮಾನ್ಯಾ ಜಡಾತ್ಮಕೈಃ ।
ತಿಥೀನಾಂ ನಾಮಧೇಯಾನಿ ವಿದ್ವದ್ಭಿಃ ಸಂಜ್ಞಿತಾನಿ ವೈ ॥ ೪೮ ॥

---

೪೫-೪೬. ಶುಕ್ಲಪಕ್ಷದ ಪಾಡ್ಯಮಿಯಲ್ಲಿ ಚಂದ್ರನು ಸೂರ್ಯಮಂಡಲವನ್ನು ಬಿಟ್ಟು ಬೇರೆಯಾಗುವನು. ಹೀಗೆ ಸೂರ್ಯಮಂಡಲ, ಚಂದ್ರಮಂಡಲಗಳು ಪರಸ್ಪರ ಯಾವಾಗ ಬಿಟ್ಟುಹೋಗುತ್ತವೆಯೋ ಅಂತಹ ಕಾಲವೇ ಆಹುತಿಕೊಡುವುದಕ್ಕೆ ಮುಖ್ಯವಾದ ಕಾಲವಾಗಿದೆ. ಅದೇ ದರ್ಶದ ವಷಟ್ಕ್ರಿಯೆಗಳಿಗೂ ಯೋಗ್ಯವಾಗಿದೆ. ಇದೇ ಅಮಾವಾಸ್ಯಾಪರ್ವಕಾಲ, ಋತುಮುಖವೆಂಬ ಸಂಜ್ಞೆಯು ಪ್ರಾಪ್ತವಾಗಿದೆಯೆಂದು ತಿಳಿಯಬೇಕು.

೪೭. ಕೃಷ್ಣಪಕ್ಷದ ಪರ್ವಕಾಲರೂಪವಾದ ಅಮಾವಾಸ್ಯೆಯ ಹಗಲಲ್ಲಿಯೇ ಚಂದ್ರನು ಕ್ಷೀಣನಾಗುವನು. ಆದುದರಿಂದ ಹಗಲೇ ಅಮಾವಾಸ್ಯೆಯಾಗುವುದು. ಆಗಲೇ ಚಂದ್ರನು ಸೂರ್ಯನಿಂದ ಗ್ರಹಿಸಲ್ಪಡುವನು. ಹೀಗೆ ಹಗಲಲ್ಲಿಯೇ ಚಂದ್ರನು ಸೂರ್ಯನಿಂದ ಗ್ರಹಿಸಲ್ಪಟ್ಟು ಕ್ಷೀಣನಾಗುವುದರಿಂದ ಆ ಹಗಲಿಗೇ ಆ ನಾಮವು ಬರುತ್ತದೆ.

೪೮. ಆ ಕಲೆಗಳು ಜಡವಾಗಿದ್ದರೂ ದೇವತೆಗಳಿಗೆ ತೃಪ್ತಿಕರವಾಗಿರುವುದರಿಂದ ಮರ್ಯಾದಾಸ್ಪದಗಳಾಗಿರುತ್ತವೆ. ಆಯಾ ತಿಥಿಗಳ ನಾಮಗಳೇ ಆಯಾ ಕಲೆಗಳಿಗೆ ಉಂಟಾಗುತ್ತವೆ.

ದರ್ಶಯೇತಾಮುಥಾನ್ಯೋನ್ಯಂ ಸೂರ್ಯಾಚಂದ್ರಮಸಾವುಭೌ ।
ನಿಷ್ಕ್ರಾಮತ್ಯಥ ತೇನೈವ ಕ್ರಮಶಃ ಸೂರ್ಯಮಂಡಲಾತ್ ॥ ೪೯ ॥

ದ್ವಿಲವೇನ ಹ್ಯಹೋರಾತ್ರಂ ಭಾಸ್ಕರಂ ಸ್ಪೃಶತೇ ಶಶೀ ।
ಸ ತದಾ ಹ್ಯಾಹುತೀ ಕಾಲೋ ದರ್ಶಸ್ಯ ಚ ವಷಟ್ ಕ್ರಿಯಾ ॥ ೫೦ ॥

ಕುಹೇತಿ ಕೋಕಿಲೇನೋಕ್ತೋ ಯಃ ಕಾಲಃ ಪರಿಚಿಹ್ನಿತಃ ।
ತತ್ಕಾಲಸಂಜ್ಞಿತಾ ಯಸ್ಮಾದಮಾವಾಸ್ಯಾ ಕುಹುಃ ಸ್ಮೃತಾ ॥ ೫೧ ॥

ಸಿನೀವಾಲೀ ಪ್ರಮಾಣೇನ ಕ್ಷೀಣಶೇಷಾಂ ನಿಶಾಕರಃ ।
ಅಮಾವಾಸ್ಯಾಂ ವಿಶತ್ಯರ್ಕಂ ಸಿನೀವಾಲೀ ತತಃ ಸ್ಮೃತಾ ॥ ೫೨ ॥

---

೪೯. ಸೂರ್ಯಚಂದ್ರರಿಬ್ಬರೂ ಅನ್ಯೋನ್ಯವಾಗಿ ಆ ದಿವಸದಲ್ಲಿ ನೋಡುತ್ತಾರೆ. ಆದುದರಿಂದ ದರ್ಶವೆಂದು ಹೆಸರು ಬಂದಿದೆ. ಅದೇ ಸೂರ್ಯನಿಂದಲೇ ಚಂದ್ರನು ಕ್ರಮವಾಗಿ ವಿಯೋಗವನ್ನು ಹೊಂದುವನು.

೫೦. ಚಂದ್ರನು ಎರಡು ಕಲೆಗಳಿಂದ ಕೂಡಿ ಅಹೋರಾತ್ರಿಗಳಲ್ಲಿ ಸೂರ್ಯನ ಜೊತೆಯಲ್ಲಿಯೇ ಕೂಡಿಯಿರುವನು. ಅಂತಹ ಕಾಲವೇ ಆಹುತಿಗಳಿಗೂ, ವಷಟ್ಕ್ರಿಯಾದಿಗಳಿಗೂ, ಪಿತೃಕಾರ್ಯಗಳಿಗೂ, ಯೋಗ್ಯವಾದ ಕಾಲವಾಗಿದೆಯೆಂದು ತಿಳಿಯಬೇಕು.

೫೧. ಯಾವ ಕಾಲದಲ್ಲಿ ಕೋಗಿಲೆಯು ಕುಹುವೆಂಬುದಾಗಿ ಧ್ವನಿಮಾಡಿತೋ ಆ ಕುಹುವೆಂಬ ನಾಮವೇ ಆ ಅಮಾವಾಸ್ಯೆಗೂ ಪ್ರಾಪ್ತವಾಗಿದೆಯೆಂದು ತಿಳಿಯಬೇಕು.

೫೨. ಚಂದ್ರನು ಕಲಾಮಾತ್ರಾವಶಿಷ್ಟನಾಗಿ ಯಾವಾಗ ಸೂರ್ಯನ ಸಂಗಡ ಸೇರುವನೋ, ಆ ಅಮಾವಾಸ್ಯೆಗೆ ಸಿನೀವಾಲೀ ಎಂಬ ಸಂಜ್ಞೆಯು ಪ್ರಾಪ್ತವಾಗಿದೆ.

**ಪರ್ವಣಃ ಪರ್ವಕಾಲಸ್ತು ತುಲ್ಯೋ ವೈ ತು ವಷಟ್ ಕ್ರಿಯಾ |**
**ಚಂದ್ರಸೂರ್ಯವ್ಯತೀಪಾತೇ ಉಭೇ ತೇ ಪೂರ್ಣಮೇ ಸ್ಮೃತೇ || ೫೩ ||**

**ಪ್ರತಿಪತ್ಪಂಚದಶ್ಯೋಶ್ಚ ಪರ್ವಕಾಲೋ ದ್ವಿಮಾತ್ರಕಃ |**
**ಕಾಲಃ ಕುಹುಸಿನೀವಾಲ್ಯೋಃ ಸಮುದ್ರೋ ದ್ವಿಲವಃ ಸ್ಮೃತಃ || ೫೪ ||**

**ಅರ್ಕಾಗ್ನಿ ಮಂಡಲೇ ಸೋಮೇ ಪರ್ವಕಾಲಃ ಕಲಾಶ್ರಯಃ |**
**ಏವಂ ಸ ಶುಕ್ಲಪಕ್ಷೋ ವೈ ರಜನ್ಯಾಃ ಪರ್ವಸಂಧಿಷು || ೫೫ ||**

**ಸಂಪೂರ್ಣಮಂಡಲಃ ಶ್ರೀಮಾಂಶ್ಚಂದ್ರಮಾ ಉಪರಜ್ಯತೇ |**
**ಯಸ್ಮಾದಾಪ್ಯಾಯತೇ ಸೋಮಃ ಪಂಚದಶ್ಯಾಂ ತು ಪೂರ್ಣಿಮಾ || ೫೬ ||**

---

೫೩. ಸಿನೀವಾಲೀನಾಮಕಾಮಾವಾಸ್ಯೆಯೂ, ವ್ಯತೀಪಾತ, ಹುಣ್ಣಿಮೆಗಳು ಪರ್ವಕಾಲಗಳಾಗಿರುತ್ತವೆ. ಆಗ ಹೋಮ ವಷಟ್ಕ್ರಿಯಾದಿಗಳನ್ನು ಮಾಡಬೇಕು. ಚಂದ್ರ ಸೂರ್ಯರ ವ್ಯತೀಪಾತವೂ ಹುಣ್ಣಿಮೆಯೂ ಸಮವಾಗಿವೆ.

೫೪. ಅಮಾವಾಸ್ಯೆಯು ದ್ವಿಕಲಾವಶಿಷ್ಟವಾದರೆ ಸಿನೀವಾಲಿಯೆಂದೂ, ಅಂದರೆ ಅಮಾವಾಸ್ಯೆಯ ಪೂರ್ವಭಾಗಕ್ಕೆ ಸಿನೀವಾಲಿಯೆಂದೂ, ಉತ್ತರಭಾಗಕ್ಕೆ ಕುಹೂ ಎಂದೂ ಸಂಜ್ಞೆಯು ಇರುತ್ತದೆ. ಏವಂಚ ಚಂದ್ರನ ದ್ವಿಕಲಸಂಬಂಧ, ತದಭಾವ ಗಳಿಂದ ಸಿನೀವಾಲೀ, ಕುಹೂ ಎಂಬ ಸಂಜ್ಞೆಗಳು ಬಂದಿವೆ.

೫೫. ಚಂದ್ರನು ಸೂರ್ಯನ ಅಗ್ನಿಮಯವಾದ ಮಂಡಲವನ್ನು ಪೂರ್ವ ಭಾವಿಯಾಗಿ ಕಲಾಮಾತ್ರದಿಂದ ಸಂಬಂಧಿಸಿದರೆ ಸಿನೀವಾಲೀಯೆಂದೂ, ಶುಕ್ಲಪಕ್ಷದ ಪಾಡ್ಯವಿನಾ ಸಂಪರ್ಕವಾದರೆ ನಾಮಾಂತರವು ಪ್ರಾಪ್ತವಾಗಿದೆ.

೫೬. ಕಲೆಗಳಿಂದ ಸಂಪೂರ್ಣನೂ, ಕಾಂತಿಯುಕ್ತನೂ ಆದ ಚಂದ್ರನು ಬಹಳವಾಗಿ ಹೊಳೆಯುವನು. ಯಾವ ದಿವಸದಲ್ಲಿ ಚಂದ್ರನು ಹದಿನೈದು ಕಲೆಗಳಿಂದ ಸಂಪೂರ್ಣಮಂಡಲವಾಗಿ ಹೊಳೆಯುವನೋ, ಆ ದಿವಸಕ್ಕೆ ಪೂರ್ಣಿಮೆಯೆಂಬ ನಾಮವು ಸಂಭವಿಸಿರುತ್ತದೆ.

**ದಶಭಿಃ ಪಂಚಭಿಶ್ಚೈವ ಕಲಾಭಿರ್ದಿವಸಕ್ರಮಾತ್ ।**
**ತಸ್ಮಾತ್ಕಲಾ ಪಂಚದಶೀ ಸೋಮೇ ನಾಸ್ತಿ ತು ಷೋಡಶೀ ॥**
**ತಸ್ಮಾತ್ಸೋಮಸ್ಯ ಭವತಿ ಪಂಚದಶ್ಯಾಂ ಮಹಾಕ್ಷಯಃ ॥ ೫೭ ॥**

**ಇತ್ಯೇತೇ ಪಿತರೋ ದೇವಾಃ ಸೋಮಪಾಃ ಸೋಮವರ್ದ್ಧನಾಃ ।**
**ಆರ್ತವಾ ಋತವೋ ಯಸ್ಮಾತ್ತೇ ದೇವಾ ಭಾವಯಂತಿ ಚ ॥ ೫೮ ॥**

**ಅತಃ ಪಿತ್ರ್ಯಾನ್ ಪ್ರವಕ್ಷ್ಯಾಮಿ ಮಾಸಶ್ರಾದ್ಧಭುಜಿಸ್ತು ಯೇ ।**
**ತೇಷಾಂ ಗತಿಂಚ ತತ್ತ್ವಂಚ ಗತಿಂ ಶ್ರಾದ್ಧಸ್ಯ ಚೈವ ಹಿ ॥ ೫೯ ॥**

**ನ ಮೃತಾನಾಂಗತಿಃ ಶಕ್ಯಾ ವಿಜ್ಞಾತುಂ ಪುನರಾಗತಿಃ ।**
**ತಪಸಾಪಿ ಪ್ರಸಿದ್ಧೇನ ಕಿಂ ಪುನರ್ಮಾಂಸ ಚಕ್ಷುಷಾ ॥ ೬೦ ॥**

---

೫೭. ದಿವಸಗಳು ಹದಿನೈದು ಇರುವುದರಿಂದ ಚಂದ್ರನಲ್ಲಿ ಕಲೆಗಳೂ ಹದಿನೈದುಮಾತ್ರವಿರುವುದು. ಹದಿನಾರು ಕಲೆಗಳು ಇರುವುದಿಲ್ಲ. ಆದುದರಿಂದ ಚಂದ್ರನು ಹದಿನೈದನೆಯ ದಿವಸದಲ್ಲಿ ಸಂಪೂರ್ಣ ಕಲೆಗಳಿಂದ ಹೀನನಾಗಿರುವನು. ಕಲೆಗಳೆಲ್ಲವೂ ನಾಶವಾಗುವುವು.

೫೮. ಮೇಲೆ ಹೇಳಿದ ರೀತಿಯಲ್ಲಿ ದೇವತೆಗಳು, ಪಿತೃಗಳು, ಸೋಮಪಾಯಿಗಳೂ, ಸೋಮವರ್ಧಕರೂ ಆಗಿರುವರು. ಋತುಪುತ್ರರಾದ ಆರ್ತವರೂ ಕೂಡ ದೇವತೆಗಳನ್ನು ಪೂಜಿಸುವರು.

೫೯. ಯಾರು ತಿಂಗಳಿಗೆ ಒಂದುಸಲ ಭೋಜನವಮಾಡಿ ತೃಪ್ತರಾಗಿರುವರೋ ಅಂತಹ ಪಿತೃಗಳನ್ನು ವಿವರಿಸುವೆನು. ಅಂಥಾ ಪಿತೃಗಳ ಗತಿ, ಶಕ್ತಿ, ಶ್ರಾದ್ಧದ ಮಹಿಮೆ ಇವುಗಳನ್ನು ವಿವರಿಸುವೆನು.

೬೦. ಮೃತರಾದ ಪುರುಷರ ಪರಲೋಕಗಮನ, ಪರಲೋಕದಿಂದ ಪುನರ್ಜನನ. ಇವುಗಳನ್ನು ಪ್ರಸಿದ್ಧವಾದ ತಪಸ್ಸಿನಿಂದಲೂ ತಿಳಿಯಲು ಸಾಧ್ಯವಿಲ್ಲ. ಹೀಗಿರುವಲ್ಲಿ ಈ ಚರ್ಮಚಕ್ಷುಸ್ಸುಗಳಿಂದ ತಿಳಿಯಲು ಹೇಗೆ ತಾನೆ ಸಾಧ್ಯ, ಸುತರಾಂ ಸಾಧ್ಯವಿಲ್ಲ.

ಶ್ರಾದ್ಧದೇವಾನ್ ಪಿತ್ರ್ನೇತಾನ್ ಪಿತರೋ ಲೌಕಿಕಾಃ ಸ್ಮೃತಾಃ ।
ದೇವಾಃ ಸೌಮ್ಯಶ್ಚ ಯಜ್ವಾನಃ ಸರ್ವೇ ಚೈವ ಹ್ಯಯೋ ನಿಜಾಃ ॥ ೬೧ ॥

ದೇವಾಸ್ತೇ ಪಿತರಃ ಸರ್ವೇ ದೇವಾಸ್ತಾನ್ ಭಾವಯಂತ್ಯುತ ।
ಮನುಷ್ಯಾಃ ಪಿತರಶ್ಚೈವ ತೇಭ್ಯೋನ್ಯೇ ಲೌಕಿಕಾಃ ಸ್ಮೃತಾಃ ॥ ೬೨ ॥

ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಯಜ್ವಾನೋ ಯೇ ತು ಸೋಮೇನ ಸೋಮವಂತಸ್ತು ತೇ ಸ್ಮೃತಾಃ ॥೬೩॥

ಯೇ ಯಜ್ವಾನಃ ಸ್ಮೃತಾಸ್ತೇಷಾಂ ತೇ ವೈ ಬರ್ಹಿಷದಃ ಸ್ಮೃತಾಃ ।
ಕರ್ಮಸ್ವೇತೇಷು ಯುಕ್ತಾಸ್ತೇ ತೃಪ್ಯಂತಾದೇಹ ಸಂಭವಾತ್ ॥ ೬೪ ॥

---

೬೧. ಶ್ರಾದ್ಧದೇವನೇ ಮೊದಲಾದ ಪಿತೃಗಳನ್ನು ಲೌಕಿಕರಾದ ಪಿತೃಗಳೆಂದು ತಿಳಿಯಬೇಕು. ದೇವತೆಗಳೂ, ಸೌಮ್ಯರೂ, ಯಾಗಶೀಲರೂ ಇವರೇ ಮೊದಲಾದವರು ಅಯೋನಿಜರಾಗಿರುರು.

೬೨. ಮೇಲೆ ಹೇಳಿದವರೆಲ್ಲರೂ ಪಿತೃದೇವತೆಗಳಾಗಿರುವರು. ಅವರನ್ನು ದೇವತೆಗಳಂತೆಯೇ ಪೂಜಿಸಬೇಕು. ಅವರಿಗಿಂತ ಭಿನ್ನರಾದ ಮನುಷ್ಯ ಪಿತೃಗಳು ಲೌಕಿಕ ಪಿತೃಗಳಾಗಿರುವರು.

೬೩. ತಂದೆ, ತಾತ, ಮುತ್ತಾತ ಇವರು ಮತ್ತು ಸೋಮಯಾಗವನ್ನು ಮಾಡಿದರೂ ಕೂಡ ಸೋಮವಂತರೆಂದು ಪ್ರಖ್ಯಾತರಾಗಿರುವರು.

೬೪. ಆ ಪಿತೃಗಳಲ್ಲಿ ಯಾರು ಯಾಗಶೀಲರೆಂದು ಪ್ರಖ್ಯಾತರೋ, ಅವರು ಬರ್ಹಿಷದರೆಂದು ಪ್ರಸಿದ್ಧರಾಗಿರುವರು. ಯಾವ ಪಿತೃಗಳು ಇಂತಹ ಕರ್ಮಗಳಲ್ಲಿ ಆಸಕ್ತರಾಗಿರುವರೋ, ಅವರು ಪ್ರಲಯದವರೆಗೂ ತೃಪ್ತರಾಗುವರು.

ಅಗ್ನಿಷ್ವಾತ್ತಾಃ ಸ್ಮೃತಾಸ್ತೇಷಾಂ ಹೋಮಿನೋ ಯಾಜ್ಯಯಾಜಿನಃ ।
ಯೇ ವಾಪ್ಯಾಶ್ರಮಧರ್ಮೇಣ ಪ್ರಸ್ಥಾನೇಷು ವ್ಯವಸ್ಥಿತಾಃ ॥ ೬೫ ॥

ಅಂತೇ ಚ ನೈವಸೀದಂತಿ ಶ್ರದ್ಧಾಯುಕ್ತೇನ ಕರ್ಮಣಾ ।
ಬ್ರಹ್ಮಚರ್ಯೇಣ ತಪಸಾ ಯಜ್ಞೇನ ಪ್ರಜಯಾ ಚ ವೈ ॥ ೬೬ ॥

ಶ್ರದ್ಧಯಾ ವಿದ್ಯಯಾ ಚೈವ ಪ್ರದಾನೇನ ಚ ಸಪ್ತಧಾ ।
ಕರ್ಮಸ್ವೇತೇಷು ಯೇ ಯುಕ್ತಾ ಭವಂತ್ಯಾದೇಹ ಪಾತನಾತ್ ॥ ೬೭ ॥

ದೈವೈಸ್ತೈಃ ಪಿತೃಭಿಃ ಸಾರ್ದ್ಧಂ ಸೂಕ್ಷ್ಮಕೈಃ ಸೋಮಪಾಯಕೈಃ ।
ಸ್ವರ್ಗತಾ ದಿವಿ ಮೋದಂತೇ ಪಿತೃಮಂತಮುಪಾಸತೇ ॥ ೬೮ ॥

ಪ್ರಜಾವತಾಂ ಪ್ರಶಂಸೈವ ಸ್ಮೃತಾ ಸಿದ್ಧಾ ಕ್ರಿಯಾವತಾಂ ।
ತೇಷಾಂ ನಿವಾಪದತ್ತಾನ್ನಂ ತತ್ಕುಲೀನೈಶ್ಚ ಬಾಂಧವೈಃ ॥ ೬೯ ॥

---

೬೫. ಯಾರು ತಮ್ಮಾಶ್ರಮಧರ್ಮಗಳಲ್ಲಿಯೂ, ನಿತ್ಯಕರ್ಮಗಳಲ್ಲಿಯೂ ಆಸಕ್ತರಾಗಿರುವರೋ, ಮತ್ತು ತೀರ್ಥಯಾತ್ರೆಗಳಲ್ಲಿ ನಿರತರಾಗಿರುವರೋ, ಅಂತಹ ನಿತ್ಯಹೋಮಿಗಳೂ, ಯಾಗಶೀಲರೂ ಆದವರಿಗೆ ಅಗ್ನಿಷ್ವಾತ್ತರೆಂಬ ನಾಮವು ಪ್ರಾಪ್ತವಾಗಿದೆ.

೬೬-೬೭. ಅಂತಹ ಜ್ಞಾನಿಗಳು ಕೊನೆವರೆಗೂ ನಿರ್ವಿಘ್ನವಾಗಿ ಶ್ರದ್ಧಯುಕ್ತವಾದ ಕರ್ಮ, ಬ್ರಹ್ಮಚರ್ಯ, ತಪಸ್ಸು, ಯಜ್ಞ, ಸೃಷ್ಟಿ, ಭಕ್ತಿಯುಕ್ತವಾದ ವಿದ್ಯೆ, ಪ್ರದಾನ ಈ ಏಳುವಿಧವಾದ ಕರ್ಮಗಳಲ್ಲಿ ದೇಹನಾಶವಾಗುವವರೆಗೂ ನಿರತರಾಗಿರುವರು.

೬೮. ಮೇಲೆ ಹೇಳಿದ ಏಳುವಿಧ ಕರ್ಮಗಳಲ್ಲಿ ಆಸಕ್ತರಾದ ಮಹಾತ್ಮರು, ದೇವತೆಗಳು, ಪಿತೃಗಳು, ಸೂಕ್ಷ್ಮರೂಪಿಯಾದ ಸೋಮಪಾಯಿಗಳು ಇವರ ಸಂಗಡ ಸ್ವರ್ಗಲೋಕದಲ್ಲಿ ಸಂತೋಷಪಡುವರು. ಮತ್ತು ಯೋಗ್ಯರಾದ ಪಿತೃಗಳಿರುವ ಸತ್ಪುತ್ರನನ್ನು ಸೇವಿಸುವರು.

೬೯-೭೦. ಅಂತಹ ಮಹಾತ್ಮರು ಸತ್ಪುತ್ರರಿರುವ ಕ್ರಿಯಾವಂತರಾದ ಪಿತೃಗಳನ್ನು ವಿಶೇಷವಾಗಿ ಹೊಗಳುವರು. ಮತ್ತು ಅಂತಹ ಸತ್ಪ್ರಜೆಗಳು ಶ್ರಾದ್ಧಾದಿ ಕಾಲಗಳಲ್ಲಿ ಕೊಟ್ಟ ಅನ್ನೋದಕಗಳನ್ನು ಸತ್ಕುಲಪ್ರಸೂತರು ಮತ್ತು ಬಂಧುಗಳು

ಮಾಸಂ ಶ್ರಾದ್ಧಭುಜಸ್ತೃಪ್ತಿಂ ಲಭಂತೇ ಸೋಮಲೌಕಿಕಾಃ ।
ಏತೇ ಮನುಷ್ಯಾಃ ಪಿತರೋ ಮಾಸಿ ಶ್ರಾದ್ಧಭುಜಸ್ತು ತೇ ॥ ೭೦ ॥

ತೇಭ್ಯೋಽಪರೇ ತು ಯೇ ಚಾನ್ಯೇ ಸಂಕೀರ್ಣಾಃ ಕರ್ಮಯೋನಿಷು ।
ಭ್ರಷ್ಟಾಶ್ಚಾಶ್ರಮಧರ್ಮೇಭ್ಯಃ ಸ್ವಧಾಸ್ವಾಹಾವಿವರ್ಜಿತಾಃ ॥ ೭೧ ॥

ಭಿನ್ನದೇಹಾ ದುರಾತ್ಮಾನಃ ಪ್ರೇತಭೂತ ಯಮಕ್ಷಯೇ ।
ಸ್ವಕರ್ಮಾಣ್ಯೇವ ಶೋಚಂತಿ ಯಾತನಾಸ್ಥಾನಮಾಗತಃ ॥ ೭೨ ॥

ದೀರ್ಘಾಯುಷೋಽತಿಶುಷ್ಕಾಶ್ಚ ವಿವರ್ಣಾಶ್ಚ ವಿವಾಸಸಃ ।
ಕ್ಷುತ್ಪಿಪಾಸಾಪರೀತಾಶ್ಚ ವಿದ್ರವಂತಿ ಇತಸ್ತತಃ ॥ ೭೩ ॥

ಸರಿತ್ಸರತಡಾಗಾನಿ ವಾಪೀಶ್ಚೈವ ಜಲೇಪ್ಸವಃ ।
ಪರಾನ್ನಾನಿ ಚ ಲಿಪ್ಸಂತೇ ಕಂಪಮಾನಾಸ್ತತ ಸ್ತತಃ ॥ ೭೪ ॥

---

ಇವರ ಸಂಗಡ ಸುಖವಾಗಿ ಭುಂಜಿಸಿ ತೃಪ್ತಿಯನ್ನು ಹೊಂದುವರು. ಹೀಗೆ ಸೋಮಪಾಯಿಗಳೂ, ಲೌಕಿಕರೂ ಆದ ಮನುಷ್ಯರ ಪಿತೃಗಳು ಪ್ರತಿ ಮಾಸವಲ್ಲಿಯೂ ಶ್ರಾದ್ಧಭೋಜನದಿಂದ ತೃಪ್ತರಾಗಿರುವರು.

೭೧-೭೨. ಮೇಲೆ ಹೇಳಿದ ಮಹಾತ್ಮರಿಗಿಂತಲೂ ಭಿನ್ನರೂ, ಜಾತಿಸಾಂಕರ್ಯ ವುಳ್ಳವರೂ, ಸ್ವಕರ್ಮಾನುಗುಣವಾಗಿ ನಾನಾಯೋನಿಗಳಲ್ಲಿ ಉತ್ಪನ್ನರೂ, ಆಶ್ರಮ ಧರ್ಮಗಳಿಂದ ಭ್ರಷ್ಟರೂ, ಸ್ವಾಹಾ ಸ್ವಧಾಕಾರರಹಿತರೂ, ಭಿನ್ನದೇಹಿಗಳೂ, ದುರಾತ್ಮರೂ, ಪ್ರೇತರೂಪಿಗಳೂ ಆದ ಪುರುಷರು ಯಮಲೋಕವಲ್ಲಿ ಯಾತನಾಸ್ಥಾನ ವನ್ನು ಹೊಂದಿ ಸ್ವಕರ್ಮಗಳ ವಿಚಾರದಲ್ಲಿ ದುಃಖವನ್ನು ಹೊಂದುವರು.

೭೩. ಇಂತಹ ಪ್ರೇತರೂಪಿಗಳಾದ ಪಿತೃಗಳು ದೀರ್ಘಜೀವಿಗಳೂ, ಅತಿ ಶುಷ್ಕವಾದ ಮುಖವುಳ್ಳವರೂ, ಕಾಂತಿಹೀನರೂ, ವಸ್ತ್ರರಹಿತರೂ, ಕ್ಷುತ್ಪಿಪಾಸಾ ಪೀಡಿತರೂ ಆಗಿ ಅಲ್ಲಿಂದಿಲ್ಲಿಗೆ ಓಡಿಹೋಗುತ್ತಾ ಬಳಲಿ ಆಯಾಸಗೊಳ್ಳುವರು.

೭೪. ಅನಂತರ ಪ್ರೇತರೂಪಿಗಳಾದ ಪಿತೃಗಳು ಬಾಯಾರಿಕೆಯಿಂದ ನದಿ, ಸರೋವರ, ತಟಾಕ, ವಾಪೀಕೂಪ ಇವುಗಳಲ್ಲಿ ಜಲಾಕಾಂಕ್ಷೆಯಿಂದ ತಿರುಗಾಡುವರು. ಮತ್ತು ಹಸಿವಿನಿಂದ ಪೀಡಿತರಾಗಿ ಪರಾನ್ನಾಕಾಂಕ್ಷೆಯಿಂದ ಬಳಲಿ (ನಡುಗುವರು) ಕಂಪಿಸುವರು.

ಸ್ಥಾನೇಷು ಪಾಚ್ಯಮಾನಾಶ್ಚ ಯಾತಾಯಾತೇಷು ತೇಷು ವೈ ।
ಶಾಲ್ಮಲೌ ವೈತರಣ್ಯಾಂ ಚ ಕುಂಭೀಪಾಕೇಷು ತೇಷು ಚ ॥ ೭೫ ॥

ಕರಂಭವಾಲುಕಾಯಾಂ ಚ ಅಸಿಪತ್ರವನೇ ತಥಾ ।
ಶಿಲಾಸಂಪೇಷಣೇ ಚೈವ ಪಾತ್ಯಮಾನಾಃ ಸ್ವಕರ್ಮಭಿಃ ॥ ೭೬ ॥

ತತ್ರ ಸ್ಥಾನಾನಿ ತೇಷಾಂ ವೈ ದುಃಖಾನಾಮುಪ್ಯನಾಕವತ್ ।
ತೇಷಾಂ ಲೋಕಾಂತರಸ್ಥಾನಾಂ ವಿವಿಧೈರ್ನಾಮಗೋತ್ರತಃ ॥ ೭೭ ॥

ಭೂಮ್ಯಾಪಸವ್ಯದರ್ಭೇಷು ದತ್ವಾ ಪಿಂಡತ್ರಯಂ ತು ವೈ ।
ಪತಿತಾಂಸ್ತರ್ಪಯಂತೇ ಚ ಪ್ರೇತಸ್ಥಾನೇಷ್ವಧಿಷ್ಠಿತಾಃ ॥ ೭೮ ॥

ಅಪ್ರಾಪ್ತಾ ಯಾತನಾಸ್ಥಾನಂ ಸೃಷ್ಟಾ ಯೇ ಭುವಿ ಪಂಚಧಾ ।
ಪಶ್ವಾದಿಸ್ಥಾವರಾಂತೇಷು ಭೂತಾನಾಂ ತೇಷು ಕರ್ಮಸು ॥ ೭೯ ॥

---

೭೫–೭೬. ಯಾತನಾಸ್ಥಾನಗಳಲ್ಲಿರುವ ಜೀವಿಗಳು ದುಃಖವನ್ನನುಭವಿಸುವುದಕ್ಕಾಗಿ ಯಾತಾಯಾತದಿಂದ ಬಹಳವಾಗಿ ಖಿನ್ನರಾಗುವರು. ಮತ್ತು ಅವರು ಶಾಲ್ಮಲಿ, ವೈತರಣಿ, ಕುಂಭೀಪಾಕ, ಕರಂಭ, ವಾಲುಕ, ಅಸಿಪತ್ರವನ, ಶಿಲಾಸಂಪೇಷಣವೆಂಬ ನರಕಗಳಲ್ಲಿ ತಂತಮ್ಮ ಪಾಪಕರ್ಮಾನುಗುಣವಾಗಿ ದುಃಖವನ್ನು ಹೊಂದುವರು.

೭೭–೭೮. ದೇವತೆಗಳೂ, ಧರ್ಮಿಷ್ಠರೂ ಸ್ವರ್ಗದಲ್ಲಿ ಸುಖವನ್ನು ಪಡೆಯುವಂತೆ, ಅಯೋಗ್ಯರು ಕುಂಭೀಪಾಕಾದಿ ನರಕಗಳಲ್ಲಿ ಮಹಾದುಃಖಗಳನ್ನು ಅನುಭವಿಸುವರು. ಇಂತಹ ಲೋಕಾಂತರಗಳಲ್ಲಿರತಕ್ಕ ಪಿತೃಗಳಿಗೆ ಅವರವರ ನಾಮಗೋತ್ರಗಳನ್ನು ಉಚ್ಚರಿಸಿ, ಭೂಮಿಯಲ್ಲಿ ದರ್ಭೆಗಳನ್ನು ಹರಡಿ, ಪಿಂಡತ್ರಯಗಳನ್ನು ಭಕ್ತಿಯಿಂದ ಶ್ರದ್ಧಾಯುಕ್ತರಾಗಿ ಕೊಟ್ಟರೆ, ಪ್ರೇತರಿಗೂ ನರಕಸ್ಥಾನದಲ್ಲಿರತಕ್ಕವರಿಗೂ ತೃಪ್ತಿಯಾಗುವುದು. ಮತ್ತು ದುಃಖದಿಂದ ಮುಕ್ತರಾಗುವರು.

೭೯–೮೦. ಕೆಲವು ಜೀವಿಗಳು ಕುಂಭೀಪಾಕಾದಿ ಯಾತನಾಸ್ಥಾನವನ್ನು ಹೊಂದದೆ, ಸ್ವಕರ್ಮಾನುಸಾರವಾಗಿ ಪಶ್ವಾದಿ ನಾನಾಯೋನಿಗಳಲ್ಲಿ ಈ ಭೂಮಿಯಲ್ಲಿ ಉತ್ಪನ್ನರಾಗುವರು. ಈ ಭೂಮಿಯಲ್ಲಿಯೇ ಪಂಚಭೂತಮಯಗಳಾದ ವಿವಿಧ ಪ್ರಾಣಿಗಳಲ್ಲಿ ಸ್ವಕರ್ಮಾನುಸಾರವಾಗಿ ಜನಿಸಿದ ಪಿತೃಗಳಿಗೆ ತಂತಮ್ಮ ಮಕ್ಕಳು ಶ್ರಾದ್ಧದಲ್ಲಿ ಕೊಟ್ಟ ಅನ್ನಪಾನಾದಿಗಳು ಅವರವರಿಗೆ ಬೇಕಾಗುವ ಆಹಾರರೂಪವಾಗಿ ಪರಿಣಮಿಸಿ

ನಾನಾರೂಪಾಸು ಜಾತೀಷು ತಿರ್ಯಗ್ಯೋನಿಷು ಜಾತಿಷು ।
ಯದಾಹಾರಾ ಭವಂತ್ಯೇತೇ ತಾಸು ತಾಸ್ವಿಹ ಯೋನಿಷು ॥
ತಸ್ಮಿಂಸ್ತಸ್ಮಿಂಸ್ತದಾಹಾರಂ ಶ್ರಾದ್ಧದತ್ತೋಪತಿಷ್ಠತಿ ॥ ೮೦ ॥

ಕಾಲೇ ನ್ಯಾಯಾಗತಂ ಪಾತ್ರಂ ವಿಧಿನಾ ಪ್ರತಿಪಾದಿತಂ ।
ಪ್ರಾಪ್ನೋತ್ಯನ್ನಂ ಯಥಾದತ್ತಂ ಬಂಧುರ್ಯತ್ರಾವತಿಷ್ಠತೇ ॥ ೮೧ ॥

ಯಥಾ ಗೋಷು ಪ್ರನಷ್ಟಾಸು ವತ್ಸೋ ವಿದಂತಿ ಮಾತರಂ ।
ತಥಾ ಶ್ರಾದ್ಧೇ ತದಿಷ್ಟಾನಾಂ ಮಂತ್ರಃ ಪ್ರಾಪಯತೇ ಪಿತೄನ್ ॥ ೮೨ ॥

ಏವಂ ಹ್ಯವಿಕಲಂ ಶ್ರಾದ್ಧಂ ಶ್ರಾದ್ಧದತ್ತಂ ತು ಮಂತ್ರತಃ ।
ಸನತ್ಕುಮಾರಃ ಪ್ರೋವಾಚ ಪಶ್ಯನ್ ದಿವ್ಯೇನ ಚಕ್ಷುಷಾ ॥
ಗತಾಗತಿಜ್ಞಃ ಪ್ರೇತಾನಾಂ ಪ್ರಾಪ್ತಿಶ್ರಾದ್ಧಸ್ಯ ಚೈವ ಹಿ ॥ ೮೩ ॥

---

ತೃಪ್ತಿಯನ್ನುಂಟುಮಾಡುವುವು. ತಂದೆ ಮೊದಲಾದ ಪಿತೃಗಳು ಯಾವಪ್ರಾಣಿಯಾಗಿ ಹುಟ್ಟಿದ್ದರೂ ಕೂಡ ಪುತ್ರರು ಶ್ರದ್ಧೆಯಿಂದ ಕೊಟ್ಟ ಪಿಂಡಾದಿಗಳು ಆಯಾ ಪಿತೃಗಳಿಗೆ ಬೇಕಾಗುವ ಆಹಾರವಾಗುವುದು. ಹೀಗೆ ಸಹಾಯವನ್ನು ಪಿತೃದೇವತೆಗಳು ಮಾಡುವರು. ಪಿತೃದೇವತೆಗಳ ಸಹಾಯದಿಂದ ಪುತ್ರರು ಕೊಟ್ಟ ಅನ್ನೋದಕಗಳು ಅವರವರ ಪಿತೃಗಳಿಗೆ ಸೇರುವುವು.

೮೧. ಪುತ್ರರು ಶಾಸ್ತ್ರೋಕ್ತರೀತಿಯಲ್ಲಿ ಸಕಾಲದಲ್ಲಿ ಪಿತೃಗಳೋದ್ದೇಶ್ಯಕವಾಗಿ ಸತ್ಪಾತ್ರದಲ್ಲಿ ಕೊಟ್ಟ ಅನ್ನೋದಕಗಳು ಅವರ ಬಂಧುಗಳು ಯಾವ ದೇಶದಲ್ಲಿ ಯಾವ ಪ್ರಾಣಿಯಾಗಿದ್ದರೂ ಅವರಿಗೆ ಖಂಡಿತವಾಗಿಯೂ ಸೇರುವುವು.

೮೨. ಹಸುಗಳು ತಪ್ಪಿಸಿಕೊಂಡು ಹೋದರೆ ಕರುಗಳು ತಾಯಿಯನ್ನು ಹೇಗೆ ಹುಡಿಕಿ ಹೊಂದುತ್ತವೆಯೋ, ಹಾಗೆಯೇ ಪುತ್ರರು ಕೊಟ್ಟ ಅನ್ನೋದಕಗಳು ಮಂತ್ರಗಳ ಸಹಾಯದಿಂದ ಪಿತೃಗಳಿಗೆ ಹೋಗಿ ಸೇರುತ್ತವೆ.

೮೩. ಶ್ರಾದ್ಧವು ಸಕಾಲದಲ್ಲಿ ಶ್ರದ್ಧೆಯಿಂದ ಮಾಡಿ ಲೋಪರಹಿತವಾದರೆ, ಶ್ರಾದ್ಧದತ್ತವಾದ ದಾನವನ್ನು ಮಂತ್ರಗಳು ಪಿತೃಗಳಿಗೆ ಸೇರಿಸುತ್ತವೆ ಎಂದು ಜ್ಞಾನಿಗಳಾದ ಸನತ್ಕುಮಾರರು ತಮ್ಮ ದಿವ್ಯಜ್ಞಾನದಿಂದ ಇದನ್ನರಿತು ಹೇಳಿರುವರು. ಮತ್ತು ಅವರು ಪ್ರೇತಾದಿಗಳ ಯಾತಾಯಾತವನ್ನೂ, ಪುತ್ರರು ಕೊಟ್ಟ ಅನ್ನೋದಕಗಳು ಪಿತೃಗಳಿಗೆ ಹೋಗುವ ಕ್ರಮವನ್ನೂ ತಿಳಿದು ಹೇಳಿರುತ್ತಾರೆ. ಆದುದರಿಂದ ಪ್ರಾಜ್ಞರು ಸನತ್ಕುಮಾರರ ಮಾತನ್ನು ನಂಬಬೇಕು.

ಬರ್ಹಿಷೀಕಾಶ್ಚೋಷ್ಮಪಾಶ್ಚೈವ ದಿವಾಕೀರ್ತ್ಯಾಶ್ಚ ತೇ ಸ್ಮೃತಾಃ ।
ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ॥ ೮೪ ॥

ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಶ್ಚ ವೈ ।
ಋತಾರ್ತವಾ ಅನೇಕೇ ತು ಅನ್ಯೋನ್ಯಪಿತರಃ ಸ್ಮೃತಾಃ ॥ ೮೫ ॥

ಏತೇ ತು ಪಿತರೋ ದೇವಾ ಮಾನುಷಾಃ ಪಿತರಶ್ಚ ಯೇ ।
ಪ್ರೀತೇಷು ತೇಷು ಪ್ರೀಯಂತೇ ಶ್ರದ್ಧಾಯುಕ್ತೇನ ಕರ್ಮಣಾ ॥ ೮೬ ॥

ಇತ್ಯೇವಂ ಪಿತರಃ ಪ್ರೋಕ್ತಾಃ ಪಿತ್ರ್ಯಾಣಾಂ ಸೋಮಪಾಯಿನಾಂ ।
ಏತತ್ ಪಿತೃಮತತ್ವಂ ಹಿ ಪುರಾಣೇ ನಿಶ್ಚಯೋ ಮತಃ ॥ ೮೭ ॥

ಇತ್ಯರ್ಕಪಿತೃಸೋಮಾನಾಮೈಲಸ್ಯ ಚ ಸಮಾಗಮಃ ।
ಸುಧಾಮೃತಸ್ಯ ಚಾವಾಪ್ತಿಃ ಪಿತ್ರ್ಯಾಣಾಂ ಚೈವ ತರ್ಪಣಂ ॥ ೮೮ ॥

---

೮೪. ಬರ್ಹೀಕರು, ಊಷ್ಮಪರು, ದಿವಾಕೀರ್ತ್ಯರು ಇವರು ಆ ದೇವತೆಗಳಾಗಿರುವರು. ಇವರಿಗೆ ಕೃಷ್ಣಪಕ್ಷವು ಹಗಲಾಗಿಯೂ, ಶುಕ್ಲಪಕ್ಷವು ರಾತ್ರಿಯಾಗಿಯೂ ಇರುವುವು. ಅವರು ಹಗಲು ಭೋಜನವನ್ನೂ, ರಾತ್ರಿಯಲ್ಲಿ ನಿದ್ರೆಯನ್ನೂ ಮಾಡುವರು.

೮೫. ಈ ರೀತಿಯಾಗಿ ಪಿತೃದೇವತೆಗಳು, ದೇವತೆಗಳು, ಪಿತೃಗಳು, ಋತಾರ್ತವರು ಎಂಬುದಾಗಿ ಪಿತೃಗಳು ಅನೇಕವಿಧರಾಗಿ ಪರಸ್ಪರ ಸಂಬಂಧವುಳ್ಳವರಾಗಿರುವರು.

೮೬. ಇವರು ಪಿತೃಗಳೂ, ದೇವತೆಗಳೂ, ಮನುಷ್ಯಪಿತೃಗಳೂ ಆಗಿರುವರು. ಆ ಪಿತೃದೇವತೆಗಳು ಪ್ರೀತರಾದರೆ ಅವರವರ ಪಿತೃಗಳು ಶ್ರದ್ಧಾಯುಕ್ತವಾದ ಕರ್ಮಗಳಿಂದ ಪ್ರೀತರಾಗುವರು.

೮೭. ಈ ರೀತಿಯಾಗಿ ಸೋಮಪಾಯಿಗಳಾದ ಪಿತೃಗಳು ಮತ್ತು ಸಾಮಾನ್ಯ ಪಿತೃಗಳು ಇವರೇ ಮೊದಲಾದ ಪಿತೃಗಳ ವಿಚಾರಗಳು ಸತ್ಪುತ್ರವಂತರಾದ ಪಿತೃಗಳಿಗೆ ಉಂಟಾಗುವ ಆನಂದ ಇವುಗಳು ಪುರಾಣಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿವೆ.

೮೮. ಹೀಗೆ ಸೂರ್ಯ, ಚಂದ್ರ, ಪಿತೃ, ಏಲರಾಜ ಇವರ ಸಮಾಗಮವೂ, ಸುಧಾಮೃತವೂ, ಪಿತೃಗಳಿಗೆ ಸಂಭವಿಸುವ ಕ್ರಮವೂ, ಪಿತೃಗಳಿಗೆ ಆಗುವ ಆನಂದವೂ ಪೂರ್ಣಿಮಾ ಅಮಾವಾಸ್ಯೆಗಳ ಕಾಲವೂ, ಪಿತೃಗಳ ಸ್ಥಾನಮಾನಗಳೂ ಇವುಗಳನ್ನು ನಿಮಗಾಗಿ ಸಂಕ್ಷೇಪವಾಗಿ ನಿರೂಪಿಸಿರುತ್ತೇನೆ. ಇದು ಸನಾತನವಾದ ಮಾರ್ಗವಾಗಿದೆ.

ಪೂರ್ಣಿಮಾವಾಸ್ಯಯೋಃ ಕಾಲಃ ಪಿತೄಣಾಂ ಸ್ಥಾನಮೇವ ಚ ।
ಸಮಾಸಾತ್ಕೀರ್ತಿತಸ್ತುಭ್ಯಮೇಷ ಸರ್ಗಃ ಸನಾತನಃ ॥ ೮೯ ॥

ವೈಶ್ವರೂಪ್ಯಂ ತು ಸರ್ವಸ್ಯ ಕಥಿತಂ ಚೈಕ ದೇಶಿಕಂ ।
ನ ಶಕ್ಯಂ ಪರಿಸಂಖ್ಯಾತುಂ ಶ್ರದ್ಧೇಯಂ ಭೂತಿಮಿಚ್ಛತಾ ॥ ೯೦ ॥

ಸ್ವಾಯಂಭುವಸ್ಯ ಹೀತ್ಯೇಷ ಸರ್ಗಃ ಕ್ರಾಂತೋ ಮಯಾತ್ರ ವೈ ।
ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ವರ್ಣಯಾಮ್ಯಹಂ ॥ ೯೧ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಪಿತೃವರ್ಣನಂ "
ನಾಮ ಷಟ್ ಪಂಚಾಶೋಽಧ್ಯಾಯಃ

---

೯೦. ವಿಶ್ವರೂಪಿಯಾದ ಪರಮಾತ್ಮನ ಸೃಷ್ಟಿಕ್ರಮವು ಏಕದೇಶದಿಂದ ನಿರೂಪಿತವಾಗಿದೆ. ಆ ಪರಮಾತ್ಮನ ಸೃಷ್ಟಿಕ್ರಮವನ್ನು ಸಂಪೂರ್ಣವಾಗಿ ನಿರೂಪಿಸುವುದು ಅಸಾಧ್ಯವಾಗಿದೆ. ಶ್ರೇಯೋಪೇಕ್ಷಿಗಳಾದ ಸಜ್ಜನರು ಇದನ್ನು ನಂಬಬೇಕು.

೯೧. ಎಲೈ ಮುನಿವರ್ಯರೇ, ಈ ರೀತಿಯಾಗಿ ಸ್ವಾಯಂಭುವಮನುವಿನ ಸೃಷ್ಟಿಕ್ರಮವು ನಿಮಗಾಗಿ ನಿರೂಪಿಸಿರುವೆನು. ವಿಸ್ತಾರವಾಗಿಯೂ, ಕ್ರಮವಾಗಿಯೂ ಹೀಗೆ ತಿಳಿಯಬೇಕಾದ ವಿಷಯವು ಯಾವುದಿರುತ್ತದೆ ಎಂದನು. ನಿಮಗೆ ವಿಸ್ತಾರವಾಗಿ ಯಾವ ವಿಷಯಗಳನ್ನು ಹೇಳಲೆಂದು ಸೂತಮುನಿಯು ಋಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಪಿತೃಸ್ವರೂಪನಿರೂಪಣವೆಂಬ
ಐವತ್ತಾರನೆಯ ಅಧ್ಯಾಯವು ಸಮಾಪ್ತವಾದುದು.

# ಐವತ್ತಾರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಅಮಾವಾಸ್ಯೆ, ಸಿನೀವಾಲೀ ಕುಹೂ, ಲೌಕಿಕಾಲೌಕಿಕ ಪಿತೃಗಳು. ವ್ಯತೀಪಾತ, ಪರ್ವಕಾಲ, ಸೂರ್ಯಾದಿಗ್ರಹಗಳ ಸಂಚಾರ ಇವು ನಿರೂಪಿತವಾಗಿವೆ. ಪಾಪಿಗಳು ಸ್ವಕರ್ಮವಶದಿಂದ ಹೊಂದಿ ದುಃಖಿಸುವ ಕುಂಭೀಪಾಕಾದಿನರಕಗಳೂ ವರ್ಣಿತವಾಗಿವೆ. ಆ ನರಕಗಳಲ್ಲಿರುವ ಜೀವಿಗಳು ತಮ್ಮ ಸತ್ಪುತ್ರರು ಶ್ರದ್ಧೆಯಿಂದ ಕೊಟ್ಟ ಅನ್ನೋದಕಗಳನ್ನು ಪ್ರೀತಿಯಿಂದ ಪಡೆದು ಆಶೀರ್ವಾದಮಾಡುವರು. ಆ ನರಕಯಾತನೆಗಳಿಂದ ಮುಕ್ತರಾಗುವರು. ಹೀಗೆ ನರಕಾದಿಲೋಕಗಳಿಗೆ ಹೋಗದೇ ಸ್ವಕರ್ಮಾನುಗುಣವಾಗಿ ನಾನಾಯೋನಿಗಳಲ್ಲಿ ಉತ್ಪನ್ನರಾದ ಜೀವಿಗಳು ತಮ್ಮ ಉದ್ದೇಶ್ಯದಿಂದ ತಮ್ಮ ಮಕ್ಕಳು ಶ್ರದ್ಧೆಯಿಂದ ಕೊಟ್ಟ ಅನ್ನೋದಕಗಳನ್ನು ಪಡೆಯುವರು. ಪಶ್ವಾದಿದೇಹಗಳಲ್ಲಿದ್ದರೂ ಆಹಾರವು ತೃಣಾದಿರೂಪವಾಗಿ ಅವರಿಗೆ ತೃಪ್ತಿಕರವಾಗುವುದು. ಅದು ಅವರವರಿಗೆ ಯೋಗ್ಯವಾದ ಆಹಾರರೂಪವಾಗಿ ಪರಿಣಮಿಸುವುದು. ಎಂಬೀ ವಿಷಯವನ್ನು ಸನತ್ಕುಮಾರರು ತಮ್ಮ ದಿವ್ಯದೃಷ್ಟಿಯಿಂದ ತಿಳಿದು ಹೇಳಿರುವರು ಎಂಬ ವಿಷಯವು ನಿರೂಪಿತವಾಗಿದೆ.

—|| ಹರಿಃ ಓಂ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಸಪ್ತಪಂಚಾಶೋಽಧ್ಯಾಯಃ

|| ಋಷಯ ಊಚುಃ ||

**ಚತುರ್ಯುಗಾನಿ ಯಾನ್ಯಾಸರ್ನ್ ಪೂರ್ವಂ ಸ್ವಾಯಂಭುವೇಂತರೇ |**
**ತೇಷಾಂ ನಿಸರ್ಗಂ ತತ್ವಂ ಚ ಶ್ರೋತುಮಿಚ್ಛಾಮಿ ವಿಸ್ತರಾತ್ || ೧**

|| ಸೂತ ಉವಾಚ ||

**ಪೃಥಿವ್ಯಾದಿಪ್ರಸಂಗೇನ ಯನ್ಮಯಾ ಪ್ರಾಗುದಾಹೃತಂ |**
**ತೇಷಾಂ ಚತುರ್ಯುಗಂ ಹ್ಯೇತತ್ ಪ್ರವಕ್ಷ್ಯಾಮಿ ನಿಬೋಧತ || ೨ ||**

---

## ಐವತ್ತೇಳನೆಯ ಅಧ್ಯಾಯವು

೧. ಮುನಿಗಳು ಹೇಳಿದರು :—ಎಲೈ ಸೂತಮುನಿಯೇ, ಪೂರ್ವದ ಸ್ವಾಯಂಭುವಮನ್ವಂತರದಲ್ಲಿ ಯಾವ ಕೃತ, ತ್ರೇತಾದಿ ನಾಲ್ಕು ಯುಗಗಳಿದ್ದುವೋ ಆ ಯುಗಗಳ. ಸ್ವಾಭಾವಿಕವಾದ ಸ್ಥಿತಿಗತಿಗಳನ್ನು ಕೇಳಬೇಕೆಂದು ಇಚ್ಛಿಸುತ್ತೇವೆ ತಿಳಿಸಬೇಕೆಂದರು.

೨. ಸೂತಮುನಿಯು ಹೇಳಿದನು :—ಪೃಥಿವ್ಯಾದಿಗಳ ಪ್ರಸಂಗವಶದಿಂದ ಪೂರ್ವದಲ್ಲಿ ನಾನು ಯಾವ ಚತುರ್ಯುಗಗಳ ವಿಷಯಗಳನ್ನು ನಿಮಗಾಗಿ ತಿಳಿಸಿದ್ದೆನೋ ಅವುಗಳನ್ನು ಈಗ ವಿಸ್ತಾರವಾಗಿ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಹೇಳಿದನು.

ಸಂಖ್ಯಯೇಹ ಪ್ರಸಂಖ್ಯಾಯ ವಿಸ್ತಾರಾಚ್ಚೈವ ಸರ್ವಶಃ।
ಯುಗಂ ಚ ಯುಗಭೇದಂ ಚ ಯುಗಧರ್ಮಂ ತಥೈವ ಚ ॥ ೩ ॥

ಯುಗಸಂಧ್ಯಂಶಕಂ ಚೈವ ಯುಗಸಂಧಾನಮೇವ ಚ।
ಷಟ್ ಪ್ರಕಾರ ಯುಗಾಖ್ಯಾನಾಂ ಪ್ರವಕ್ಷ್ಯಾಮಿಹ ತತ್ವತಃ ॥ ೪ ॥

ಲೌಕಿಕೇನ ಪ್ರಮಾಣೇನ ವಿಬುದ್ಧೋಽಬ್ದಸ್ತು ಮಾನುಷಃ।
ತೇನಾಬ್ದೇನ ಪ್ರಸಂಖ್ಯಾಯ ವಕ್ಷ್ಯಾಮಿಹ ಚತುರ್ಯುಗಂ ॥ ೫ ॥

ನಿಮೇಷಕಾಲಃ ಕಾಷ್ಠಾ ಚ ಕಲಾಶ್ಚಾಪಿ ಮುಹೂರ್ತಕಾಃ।
ನಿಮೇಷಕಾಲತುಲ್ಯಂ ಹಿ ವಿದ್ಯಾಲ್ಲಘ್ವಕ್ಷರಂ ಚ ಯತ್ ॥ ೬ ॥

---

೩-೪. ಎಲೈ ಮುನಿವರ್ಯರೇ, ನಿಮಗಾಗಿ ಯುಗಗಳ ಸಂಖ್ಯೆ, ಯುಗ ಸ್ವರೂಪ, ಯುಗಭೇದ, ಯುಗಧರ್ಮ, ಯುಗಸಂಧಿ, ಯುಗಸಂಧಾನವೆಂಬ ಆರು ವಿಷಯಗಳನ್ನು ವಿಸ್ತಾರವಾಗಿಯೂ, ಯಥಾಸ್ಥಿತವಾಗಿಯೂ ನಿರೂಪಿಸುವೆನು ಕೇಳಿರೆಂದು ಸೂತನು ಹೇಳಿದನು.

೫. ಈಗ ಲೌಕಿಕವಾದ ಮಾನುಷಸಂವತ್ಸರವನ್ನು ಪ್ರಮಾಣದಿಂದ ವಿವರಿಸಿ ತರುವಾಯ ಆ ಮಾನುಷಾಬ್ದಗಳು ಇಷ್ಟು ಆದರೆ ಒಂದು ಕೃತಯುಗವೆಂದು ತಿಳಿಸಿ ಬಳಿಕ ಚತುರ್ಯುಗಗಳ ಸ್ವರೂಪವನ್ನು ನಿರೂಪಿಸುವೆನೆಂದು ಮುನಿಯು ಹೇಳಿದನು.

೬. ಲೌಕಿಕವಾದ ಯುಗವನ್ನು ತಿಳಿಯಬೇಕಾದರೆ ಮೊದಲು ನಿಮೇಷಕಾಲ, ಕಾಷ್ಠ,ಕಲಾ, ಮುಹೂರ್ತ ಇವುಗಳನ್ನು ತಿಳಿಯಬೇಕು. ನಿಮೇಷಕಾಲಕ್ಕೆ ಸಮವಾಗಿ ಲಘುವೆಂಬ ಅಕ್ಷರವಿದೆಯೆಂದು ತಿಳಿಯಬೇಕು. ನಿಮೇಷಕಾಲವೆಂದರೆ ಒಂದು ಸಲ ರೆಪ್ಪೆಯನ್ನು ಹಾಕುವ ಕಾಲಕ್ಕೆ ನಿಮೇಷಕಾಲವೆಂದು ನಾಮವು ಬಂದಿದೆ. ಆ ನಿಮೇಷಕಾಲದಲ್ಲಿಯೇ ಲಘ್ವಕ್ಷರಗಳನ್ನುಚ್ಚರಿಸುವುದು. ನಿಮೇಷಕಾಲವು, ಲಘು ಕಾಲವು ಒಂದೇ ಆಗಿರುವುದು.

ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶಚ್ಚ ಕಾಷ್ಠಾ ಗಣಯೇತ್ ಕಲಾಸ್ತಾಃ ।
ತ್ರಿಂಶತ್ ಕಲಾಶ್ಚೈವ ಭವೇನ್ಮುಹೂರ್ತಾ
ಸ್ತಾಸ್ತ್ರಿಂಶತಾ ರಾತ್ರ್ಯಹನೀ ಸಮೇತೇ ॥ ೭ ॥

ಅಹೋರಾತ್ರೇ ವಿಭಜಿತೇ ಸೂರ್ಯೇ ಮಾನುಷದೈವಿಕೇ ।
ತತ್ರಾಹಃ ಕರ್ಮಚೇಷ್ಟಾಯಾಂ ರಾತ್ರಿಃ ಸ್ವಪ್ನಾಯ ಕಲ್ಪ್ಯತೇ ॥ ೮ ॥

ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತಯೋಃ ಪುನಃ ।
ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ॥ ೯ ॥

ತ್ರಿಂಶಚ್ಚ ಮಾನುಷಾ ಮಾಸಾಃ ಪಿತ್ರ್ಯೋ ಮಾಸಶ್ಚ ಸ ಸ್ಮೃತಃ ।
ಶತಾನಿ ತ್ರೀಣಿ ಮಾಸಾನಾಂ ಷಟ್ ಚಾಪ್ಯಧಿಕಾನಿ ವೈ ॥
ಪಿತ್ರ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ವಿಭಾವ್ಯತೆ ॥ ೧೦ ॥

---

೭. ಅಂತಹ ಹದಿನೈದು ನಿಮೇಷಗಳಾದರೆ ಒಂದು ಕಾಷ್ಠವಾಗುವುದು. ಅಂತಹ ಮೂವತ್ತು ಕಾಷ್ಠಗಳಿಗೆ ಒಂದು ಕಲೆಯೆಂದೂ. ಇಂತಹ ಮೂವತ್ತು ಕಲೆಗಳಿಗೆ ಒಂದು ಮುಹೂರ್ತವೆಂದೂ, ಅಂತಹ ಮೂವತ್ತು ಮುಹೂರ್ತಗಳಿಗೆ ರಾತ್ರಿ ಮತ್ತು ಹಗಲೆಂದೂ ಸಂಜ್ಞೆಗಳು ಪ್ರಾಪ್ತವಾಗಿವೆ. ಹಗಲಿಗೆ ಮೂವತ್ತು ಮುಹೂರ್ತಗಳು ರಾತ್ರಿಗೆ ಮೂವತ್ತು ಮುಹೂರ್ತಗಳು. ಹೀಗೆ ಅರವತ್ತು ಘಳಿಗೆಗಳು ಒಂದು ದಿವಸ ವಾಗುವುದು.

೮. ಸೂರ್ಯದೇವನು, ಮನುಷ್ಯರು ಮತ್ತು ದೇವತೆಗಳು ಇವರ ಅಹೋರಾತ್ರಿಗಳನ್ನು ವಿಭಾಗಿಸುತ್ತಾನೆ. ಅವುಗಳಲ್ಲಿ ಹಗಲು ಸ್ವಧರ್ಮಾದಿಕರ್ಮಗಳು, ಗಮನಾಗಮನಾದಿವ್ಯಾಪಾರಗಳು ಇವುಗಳನ್ನು ಮಾಡುವುದಕ್ಕೂ, ರಾತ್ರಿಯು ನಿದ್ರಿಸುವುದಕ್ಕೂ ಏರ್ಪಟ್ಟಿವೆ.

೯. ಮನುಷ್ಯರ ಒಂದು ಮಾಸವು ಪಿತೃಗಳಿಗೆ ಅಹೋರಾತ್ರಿಗಳಾದ ಒಂದು ದಿವಸವು. ಆ ಅಹೋರಾತ್ರಿಗಳಲ್ಲಿ ಪಿತೃಗಳಿಗೆ ಕೃಷ್ಣಪಕ್ಷವು ಹಗಲಾಗಿಯೂ, ಶುಕ್ಲ ಪಕ್ಷವು ರಾತ್ರಿಯಾಗಿಯೂ ಇರುವುವು.

೧೦. ಮನುಷ್ಯರ ಮೂವತ್ತು ತಿಂಗಳು ಪಿತೃಗಳಿಗೆ ಒಂದು ತಿಂಗಳಾಗಿರುವುದು. ಮನುಷ್ಯರ ಮುನ್ನೂರರವತ್ತು ತಿಂಗಳುಗಳು ಪಿತೃಗಳಿಗೆ ಒಂದು ವರ್ಷವಾಗಿರುತ್ತದೆ. ಅಂದರೆ ಮನುಷ್ಯರಿಗೆ ಮೂವತ್ತು ವರ್ಷವಾದರೆ ಪಿತೃಗಳಿಗೆ ಒಂದುವರ್ಷವು. ಹೀಗೆ ಮಾನುಷಪ್ರಮಾಣದಿಂದ ಪಿತೃಗಳ ವರ್ಷಗಳನ್ನು ತಿಳಿಯಬೇಕು.

ಮಾನುಷೇಣೈವ ಮಾನೇನ ವರ್ಷಾಣಾಂ ಯಚ್ಛತಂ ಭವೇತ್ ।
ಪಿತೄಣಾಂ ತ್ರೀಣಿ ವರ್ಷಾಣಿ ಸಂಖ್ಯಾತಾನೀಹ ತಾನಿ ವೈ ॥
ಚತ್ವಾರಶ್ಚಾಧಿಕಾ ಮಾಸಾಃ ಪಿತ್ರ್ಯೇ ಚೈವೇಹ ಕೀರ್ತಿತಾಃ ॥ ೧೧ ॥

ಲೌಕಿಕೇನೈವ ಮಾನೇನ ಅಬ್ದೋ ಯೋ ಮಾನುಷಃ ಸ್ಮೃತಃ ।
ಏತದ್ದಿವ್ಯಮಹೋರಾತ್ರಂ ಶಾಸ್ತ್ರೇಸ್ಮಿನ್ ನಿಶ್ಚಯೋ ಮತಃ ॥ ೧೨ ॥

ದಿವ್ಯೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ।
ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಂ ॥ ೧೩ ॥

ಯೇ ತೇ ರಾತ್ರ್ಯಹನೀ ದಿವ್ಯೇ ಪ್ರಸಂಖ್ಯಾತೇ ತಯೋಃ ಪುನಃ ।
ತ್ರಿಂಶಚ್ಚ ತಾನಿ ವರ್ಷಾಣಿ ದಿವ್ಯೋ ಮಾಸಸ್ತು ಸ ಸ್ಮೃತಃ ॥ ೧೪ ॥

---

೧೧. ಮನುಷ್ಯಮಾನದಲ್ಲಿ ನೂರುವರ್ಷಗಳಾದರೆ ಪಿತೃಗಳಿಗೆ ಮೂರು ವರ್ಷಗಳಾಗುವುವು. ಮನುಷ್ಯರ ನೂರುವರ್ಷಕ್ಕಿಂತಲೂ ಪಿತೃಗಳ ಮೂರುವರ್ಷಗಳಲ್ಲಿ ಪಿತೃಮಾನರೀತ್ಯಾ ನಾಲ್ಕುತಿಂಗಳು ಅಧಿಕವಾಗಿರುತ್ತದೆ.

೧೨. ಲೌಕಿಕ ಪ್ರಮಾಣಾನುಸಾರವಾಗಿ ಮನುಷ್ಯರಿಗೆ ಒಂದುವರ್ಷವೆಂದು ಯಾವ ಕಾಲವು ಪರಿಗಣಿತವಾಗಿದೆಯೋ, ಆ ಒಂದು ವರ್ಷವು ದೇವಮಾನರೀತ್ಯಾ ದೇವತೆಗಳಿಗೆ ಒಂದುದಿವಸವೆಂದು ಶಾಸ್ತ್ರಕಾರರು ನಿಶ್ಚಯಿಸಿರುವರು.

೧೩. ದೇವತೆಗಳ ಅಹೋರಾತ್ರಿಗಳೆರಡು ಕೂಡಿದರೆ ಮನುಷ್ಯರಿಗೆ ಒಂದು ವರ್ಷವಾಗುವುದು. ದೇವತೆಗಳ ಅಹಸ್ಸಿನಲ್ಲಿ ಅಂದರೆ ಮನುಷ್ಯರ ಆರು ತಿಂಗಳುಗಳಲ್ಲಿ ಉತ್ತರಾಯಣವೂ, ರಾತ್ರಿಯಲ್ಲಿ ದಕ್ಷಿಣಾಯನವೂ ಆಗುವುವು.

೧೪. ದೇವತೆಗಳ ಯಾವ ಹಗಲು ರಾತ್ರಿಗಳನ್ನು ದೇವಮಾನರೀತ್ಯಾ ತಿಳಿಸಿದೆವೋ, ಅವುಗಳಲ್ಲಿ ಮನುಷ್ಯರಿಗೆ ಮೂವತ್ತು ವರ್ಷಗಳಾದರೆ ದೇವತೆಗಳಿಗೆ ಒಂದು ತಿಂಗಳಾಗುವುದು.

ಮಾನುಷಂ ಚ ಶತಂ ವಿದ್ಧಿ ದಿವ್ಯಮಾಸಾಸ್ತ್ರಯಸ್ತು ತೇ ।
ದಶ ಚೈವ ತಥಾಹಾನಿ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ॥ ೧೫ ॥

ತ್ರೀಣಿ ವರ್ಷಶತಾನ್ಯೇವ ಷಷ್ಟಿರ್ವರ್ಷಾಣಿ ಯಾನಿ ಚ ।
ದಿವ್ಯಃ ಸಂವತ್ಸರೋ ಹ್ಯೇಷ ಮಾನುಷೇಣ ಪ್ರಕೀರ್ತಿತಃ ॥ ೧೬ ॥

ತ್ರೀಣಿ ವರ್ಷಸಹಸ್ರಾಣಿ ಮಾನುಷೇಣ ಪ್ರಮಾಣತಃ ।
ತ್ರಿಂಶದ್ಯಾನಿ ತು ವರ್ಷಾಣಿ ಮತಃ ಸಪ್ತರ್ಷಿವತ್ಸರಃ ॥ ೧೭ ॥

ನವ ಯಾನಿ ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು ।
ಅನ್ಯಾನಿ ನವತಿಶ್ಚೈವ ಕ್ರೌಂಚಃ ಸಂವತ್ಸರಃ ಸ್ಮೃತಃ ॥ ೧೮ ॥

---

೧೫. ಮನುಷ್ಯರಿಗೆ ನೂರು ವರ್ಷಗಳಾದರೆ ದೇವತೆಗಳಿಗೆ ಮೂರುತಿಂಗಳು ಹತ್ತು ದಿವಸಗಳೂ ಆಗುವುವೆಂದು ದೇವಮಾನಪ್ರಕಾರವಾಗಿ ಶಾಸ್ತ್ರಕಾರರು ಶಾಸ್ತ್ರಗಳಲ್ಲಿ ಹೇಳಿರುತ್ತಾರೆ.

೧೬. ಮನುಷ್ಯರಿಗೆ ಮುನ್ನೂರ ಅರವತ್ತು ವರ್ಷಗಳಾದರೆ ದೇವಮಾನರೀತ್ಯಾ ದೇವತೆಗಳಿಗೆ ಒಂದು ವರ್ಷವೆಂದು ಮನುಷ್ಯಮಾನರೀತಿಯಲ್ಲಿ ವಿದಿತವಾಗಿದೆ. ಇದಕ್ಕೆ ದಿವ್ಯಸಂವತ್ಸರವೆಂಬ ನಾಮವು ಸಂಭವಿಸಿದೆ.

೧೭. ಮಾನುಷಪ್ರಮಾಣ ರೀತಿಯಲ್ಲಿ ಮನುಷ್ಯರಿಗೆ ಮೂರುಸಾವಿರದ ಮೂವತ್ತು ವರ್ಷಗಳಾದರೆ ಸಪ್ತರ್ಷಿಗಳಿಗೆ ಒಂದು ವರ್ಷವಾಗುವುದು. ಮೂರು ಸಾವಿರದ ಮೂವತ್ತು ವರ್ಷಗಳಿಗೆ ಸಪ್ತರ್ಷಿವತ್ಸರವೆಂಬ ನಾಮವು ಬಂದಿದೆ.

೧೮. ಮನುಷ್ಯಪ್ರಮಾಣಾನುಸಾರವಾಗಿ ಒಂಭತ್ತುಸಾವಿರದ ತೊಂಭತ್ತು ವರ್ಷಗಳಾದರೆ ಅದಕ್ಕೆ ಕ್ರೌಂಚಸಂವತ್ಸರವೆಂಬ ಸಂಜ್ಞೆಯು ಪ್ರಾಪ್ತವಾಗಿದೆ.

ಷಟ್‌ತ್ರಿಂಶಸ್ತು ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು ।
ವರ್ಷಾಣಾಂ ತು ಶತಂ ಜ್ಞೇಯಂ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ॥ ೧೯ ॥

ತ್ರೀಣ್ಯೇವ ನಿಯುತಾನ್ಯೇವ ವರ್ಷಾಣಾಂ ಮಾನುಷಾಣಿ ಚ ।
ಷಷ್ಟಿಶ್ಚೈವ ಸಹಸ್ರಾಣಿ ಸಂಖ್ಯಾತಾನಿ ತು ಸಂಖ್ಯಯಾ ॥
ದಿವ್ಯವರ್ಷಸಹಸ್ರಂ ತು ಪ್ರಾಹುಃ ಸಂಖ್ಯಾವಿದೋ ಜನಾಃ ॥ ೨೦ ॥

ಇತ್ಯೇವಮೃಷಿಭಿರ್ಗೀತಂ ದಿವ್ಯಯಾ ಸಂಖ್ಯಯಾನ್ವಿತಂ ।
ದಿವ್ಯೇನೈವ ಪ್ರಮಾಣೇನ ಯುಗಸಂಖ್ಯಾಪ್ರಕಲ್ಪನಂ ॥ ೨೧ ॥

ಚತ್ವಾರಿ ಭಾರತೇ ವರ್ಷೇ ಯುಗಾನಿ ಕವಯೋ ವಿದುಃ ।
ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾ ವಿಧೀಯತೇ ॥
ದ್ವಾಪರಶ್ಚ ಕಲಿಶ್ಚೈವ ಯುಗಾನ್ಯೇತಾನಿ ಕಲ್ಪಯೇತ್ ॥ ೨೨ ॥

---

೧೯. ಮನುಷ್ಯಪ್ರಮಾಣದಲ್ಲಿ ಮನುಷ್ಯರಿಗೆ ಮೂವತ್ತಾರುಸಾವಿರದ ನೂರು ವರ್ಷಗಳಾದರೆ ಒಂದು ದಿವ್ಯ ವರ್ಷವಾಗುವುದೆಂದು ಶಾಸ್ತ್ರದಲ್ಲಿ ನಿರೂಪಿತವಾಗಿದೆ. ಒಂದು ದಿವ್ಯ ವರ್ಷಕ್ಕೆ ಮಾನುಷಪ್ರಮಾಣದಲ್ಲಿ ಮೂವತ್ತಾರುಸಾವಿರದ ನೂರು ವರ್ಷಗಳಾಗುವುವು.

೨೦. ಮನುಷ್ಯಪ್ರಮಾಣಾನುಸಾರ ಮೂರುಲಕ್ಷದ ಅರವತ್ತು ಸಹಸ್ರ ವರ್ಷಗಳಾದರೆ ದೇವಮಾನ್ಯರೀತ್ಯಾ ಒಂದು ದಿವ್ಯ ಸಹಸ್ರವರ್ಷಗಳು ಆಗುವುವೆಂದು ಕಾಲಜ್ಞರಾದ ಮಹಾತ್ಮರು ಸಂಖ್ಯೆಗಳಿಂದ ಗುಣಿಸಿ ಹೇಳಿರುವರು. ಇದೇ ದೇವತೆಗಳ ಜೀವಮಾನಕಾಲವೆಂದು ಕಾಲಜ್ಞರು ಹೇಳುವರು.

೨೧. ಈ ರೀತಿಯಾಗಿ ಜ್ಞಾನಿಗಳಾದ ಮಹರ್ಷಿಗಳು ಮನುಷ್ಯಮಾನ ದೇವಮಾನ ರೀತಿಯಿಂದ ಮನುಷ್ಯಸಂಖ್ಯೆಯನ್ನೂ, ದಿವ್ಯಸಂಖ್ಯೆಯನ್ನೂ ವ್ಯಕ್ತಪಡಿಸಿರುವರು. ಯುಗಗಳ ಪ್ರಮಾಣವನ್ನು ಹೇಳುವಾಗ ದಿವ್ಯಸಂಖ್ಯೆಯನ್ನೇ ಉಪಯೋಗಿಸಬೇಕೆಂದು ಮಹಾತ್ಮರು ಹೇಳುವರು.

೨೨. ಈ ಭಾರತವರ್ಷದಲ್ಲಿ ನಾಲ್ಕು ಯುಗಗಳಿವೆಯೆಂದು ಜ್ಞಾನಿಗಳು ಹೇಳುವರು, ಅವುಗಳಲ್ಲಿ ಮೊದಲನೆಯದು ಕೃತಯುಗವು. ಎರಡನೆಯದು ತ್ರೇತಾಯುಗವು. ಮೂರನೆಯದು ದ್ವಾಪರಯುಗವು. ನಾಲ್ಕನೆಯದು ಕಲಿಯುಗವು. ಹೀಗೆ ನಾಲ್ಕು ಯುಗಗಳು ಕ್ರಮವಾಗಿವೆಯೆಂದು ತಿಳಿಯಬೇಕು.

ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತು ಕೃತಂ ಯುಗಂ ।
ತತ್ರ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೨೩ ॥

ಇತರಾಸು ಚ ಸಂಧ್ಯಾಸು ಸಂಧ್ಯಾಂಶೇಷು ಚ ವೈ ತ್ರಿಷು ।
ಏಕಾಪಾಯೇನ ವರ್ತಂತೇ ಸಹಸ್ರಾಣಿ ಶತಾನಿ ಚ ॥ ೨೪ ॥

ತ್ರೇತಾ ತ್ರೀಣಿ ಸಹಸ್ರಾಣಿ ಸಂಖ್ಯೈವ ಪರಿಕೀರ್ತ್ಯತೇ ।
ತಸ್ಯಾಸ್ತು ತ್ರಿಶತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೨೫ ॥

ದ್ವಾಪರಂ ದ್ವೇ ಸಹಸ್ರೇ ತು ಯುಗಮಾಹುರ್ಮನೀಷಿಣಃ ।
ತಸ್ಯಾಪಿ ದ್ವಿಶತೀ ಸಂಧ್ಯಾ ಸಂಧ್ಯಾಶಃ ಸಂಧ್ಯಯಾ ಸಮಃ ॥ ೨೬ ॥

---

೨೩. ದಿವ್ಯಮಾನದಲ್ಲಿ ಕೃತಯುಗಕ್ಕೆ ನಾಲ್ಕುಸಾವಿರ ವರ್ಷಗಳೆಂದು ವ್ಯಕ್ತವಾಗಿದೆ. ಕೃತಯುಗದ ಸಂಧಿಕಾಲವು ನಾನೂರು ವರ್ಷಗಳಾಗಿವೆ. ಸಂಧ್ಯಾಂಶ ಕಾಲವೂ ಸಹ ನಾನೂರೇ ವರ್ಷಗಳು. ಒಟ್ಟು ಕೃತಯುಗದ ಕಾಲವು ನಾಲ್ಕು ಸಾವಿರದ ಎಂಟುನೂರು ವರ್ಷಗಳಾಗಿವೆ.

೨೪. ಇದೇ ರೀತಿಯಲ್ಲಿಯೇ ಇತರ ಯುಗಗಳಲ್ಲಿಯೂ ಸಂಧ್ಯಂಶ ಸಂಧ್ಯಾಂಶ ಗಳಲ್ಲಿ ಒಂದೊಂದು ಸಹಸ್ರಗಳೂ ಒಂದೊಂದು ನೂರು ಕಡಿಮೆಯಾಗಿರುತ್ತವೆ.

೨೫. ಈ ಕ್ರಮದಲ್ಲಿ ತ್ರೇತಾಯುಗದ ಕಾಲವು ದೇವಮಾನರೀತ್ಯಾ ಮೂರು ಸಹಸ್ರ ವರ್ಷಗಳಾಗಿವೆ. ಇದರಂತೆಯೇ ಸಂಧ್ಯಾಕಾಲವೂ ಸಂಧ್ಯಾಂಶಕಾಲವೂ ಕೂಡ ಮುನ್ನೂರು ಮುನ್ನೂರು ವರ್ಷಗಳಾಗಿವೆ.

೨೬. ಇದರಂತೆಯೇ ದ್ವಾಪರಯುಗವು ಎರಡುಸಾವಿರ ವರ್ಷವುಳ್ಳದ್ದಾಗಿದೆ. ಅದರ ಸಂಧ್ಯಾಕಾಲವು ಇನ್ನೂರು ವರ್ಷಗಳಾಗಿಯೂ ಸಂಧ್ಯಾಂಶಕಾಲವು ಇನ್ನೂರು ವರ್ಷಗಳಾಗಿಯೂ ಇರುತ್ತವೆ.

ಕಲಿಂ ವರ್ಷಸಹಸ್ರಂ ತು ಯುಗಮಾಹುರ್ಮನೀಷಿಣಃ ।
ತಸ್ಯಾಪ್ಯೇಕಶತೀ ಸಂಧ್ಯಾ ಸಂಧ್ಯಾಂಶಃ ಸಂಧ್ಯಯಾ ಸಮಃ ॥ ೨೭ ॥

ಏಷಾ ದ್ವಾದಶಸಾಹಸ್ರೀ ಯುಗಾಖ್ಯಾ ಪರಿಕೀರ್ತಿತಾ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುಷ್ಟಯಂ ॥ ೨೮ ॥

ಅತ್ರ ಸಂವತ್ಸರಾಃ ಸೃಷ್ಟಾ ಮಾನುಷೇಣ ಪ್ರಮಾಣತಃ ।
ಕೃತಸ್ಯ ತಾವದ್ವಕ್ಷ್ಯಾಮಿ ವರ್ಷಾಣಾಂ ತತ್ಪ್ರಮಾಣತಃ ॥ ೨೯ ॥

ಸಹಸ್ರಾಣಾಂ ಶತಾನ್ಯತ್ರ ಚತುರ್ದಶ ತು ಸಂಖ್ಯಯಾ ।
ಚತ್ವಾರಿಂಶತ್ ಸಹಸ್ರಾಣಿ ಕಲಿಕಾಲಯುಗಸ್ಯ ತು ॥ ೩೦ ॥

---

೨೭. ಹಾಗೆಯೇ ಕಲಿಯುಗದ ಪ್ರಮಾಣವು ಒಂದುಸಹಸ್ರ ವರ್ಷಗಳು. ಮನುಷ್ಯಮಾನದಲ್ಲಿ ಮೂರುಲಕ್ಷದ ಅರವತ್ತು ಸಹಸ್ರವರ್ಷಗಳಾಗುವುವು. ಕಲಿ ಯುಗದ ಸಂಧಿಕಾಲ ಸಂಧ್ಯಾಂಶಕಾಲಗಳು ನೂರು ನೂರು ವರ್ಷಗಳಾಗಿವೆ.

೨೮. ಹೀಗೆ ನಾಲ್ಕು ಯುಗಗಳ ವರ್ಷಗಳನ್ನೂ ಒಟ್ಟುಕೂಡಿದರೆ ದೇವಮಾನ ರೀತ್ಯಾ ಹನ್ನೆರಡುಸಾವಿರ ವರ್ಷಗಳಾಗುವುವು. ಕೃತ, ತ್ರೇತಾ, ದ್ವಾಪರ, ಕಲಿ ಎಂಬುದಾಗಿ ಯುಗಗಳು ನಾಲ್ಕು ಲೋಕವಿಖ್ಯಾತವಾಗಿವೆ.

೨೯. ಈ ವಿಷಯದಲ್ಲಿ ಮಾನುಷಪ್ರಮಾಣಾನುಸಾರವಾಗಿ ವರ್ಷಗಳ ಸಂಖ್ಯೆಯು ವ್ಯಕ್ತವಾಗಿ ಎಲ್ಲರಿಗೂ ವಿದಿತವಾಗಿದೆ. ಈ ಪ್ರಮಾಣಾನುಸಾರವಾಗಿ ಕೃತಯುಗದ ವಿಷಯುವನ್ನು ಈಗ ಹೇಳುವೆನು ಕೇಳಿರೆಂದನು.

೩೦. ಮನುಷ್ಯಮಾನದ ರೀತಿಯಲ್ಲಿ ಕಲಿಯುಗದ ಪ್ರಮಾಣವು. ಹದಿನಾಲ್ಕು ಲಕ್ಷದ ನಲವತ್ತುಸಹಸ್ರ ವರ್ಷಗಳಾಗುತ್ತವೆ. ಹದಿನಾಲ್ಕುಲಕ್ಷದ ನಲವತ್ತುಸಹಸ್ರ ವರ್ಷಗಳ ಕಾಲದವರೆಗೂ ಕಲಿಯುಗವು ಇರುವುದು.

ಏವಂ ಸಂಖ್ಯಾತಕಾಲಶ್ಚ ಕಾಲೇಷ್ವಿಹ ವಿಶೇಷತಃ ।
ಏವಂ ಚತುರ್ಯುಗಃ ಕಾಲೋ ವಿನಾ ಸಂಧ್ಯಾಂಶಕೈಃ ಸ್ಮೃತಃ ॥ ೩೧ ॥

ಚತ್ವಾರಿಂಶತ್ತ್ರೀಣಿ ಚೈವ ನಿಯುತಾನಿ ಚ ಸಂಖ್ಯಯಾ ।
ವಿಂಶತಿಶ್ಚ ಸಹಸ್ರಾಣಿ ಸಸಂಧ್ಯಾಂಶಶ್ಚತುರ್ಯುಗಃ ॥ ೩೨ ॥

ಏವಂ ಚತುರ್ಯುಗಾಖ್ಯಾ ತು ಸಾಧಿಕಾ ಹ್ಯೇಕಸಪ್ತತಿಃ ।
ಕೃತತ್ರೇತಾದಿಯುಕ್ತಾ ಸಾ ಮನೋರಂತರಮುಚ್ಯತೇ ॥ ೩೩ ॥

ಮನ್ವಂತರಸ್ಯ ಸಂಖ್ಯಾ ತು ವರ್ಷಾಗ್ರೇಣ ನಿಬೋಧತ ।
ತ್ರಿಂಶತ್ಕೋಟ್ಯಸ್ತು ವರ್ಷಾಣಾಂ ಮಾನುಷೇಣ ಪ್ರಕೀರ್ತಿತಾಃ ॥ ೩೪ ॥

---

೩೧. ಮೇಲೆ ಹೇಳಿದ ಕ್ರಮವಲ್ಲಿ ಕಲಿಯುಗಕ್ಕೆ ಹೇಳಿದಂತೆಯೇ ಮನುಷ್ಯ ಮಾನದಲ್ಲಿ ಇತರ ಯುಗಗಳ ಕಾಲಪ್ರಮಾಣವನ್ನು ಊಹಿಸಬೇಕು. ಹೀಗೆ ನಾಲ್ಕು ಯುಗಗಳನ್ನೂ, ಸಂಧ್ಯಾಂಶಗಳನ್ನೂ ಒಟ್ಟು ತಿಳಿಯಬೇಕು.

೩೨-೩೩. ಈ ನಾಲ್ಕು ಯುಗಗಳ ಸಂಧ್ಯಾಂಶಕಾಲವು ಮನುಷ್ಯಮಾನದಲ್ಲಿ ನಲವತ್ತಮೂರುಲಕ್ಷದ ಇಪ್ಪತ್ತುಸಹಸ್ರ ವರ್ಷಗಳಾಗಿರುತ್ತವೆ. ಹೀಗೆಯೇ ನಾಲ್ಕು ಯುಗಗಳ ಒಟ್ಟು ಸಂಖ್ಯೆಯು ಮನುಷ್ಯಮಾನದಲ್ಲಿ ಎಪ್ಪತ್ತೊಂದುಲಕ್ಷವರ್ಷಗಳಾಗಿರುತ್ತವೆಯೆಂದು ತಿಳಿಯಬೇಕು. ಈ ಎಪ್ಪತ್ತೊಂದುಲಕ್ಷ ವರ್ಷಗಳು ಕಳೆವರೆ ಚತುರ್ಯುಗವು ಮುಗಿಯುವುದು. ಈ ಚತುರ್ಯುಗಗಳೇ ಒಬ್ಬ ಮನುವಿನ ಜೀವಮಾನಕಾಲವಾಗಿರುತ್ತದೆ. ಇಷ್ಟು ಕಾಲವು ಕಳೆದರೆ ಒಬ್ಬ ಮನುವಿನ ಕಾಲವು ಮುಗಿಯುವುದು.

೩೪. ಹದಿನಾಲ್ಕುಜನ ಮನುಗಳ ಒಟ್ಟುಕಾಲವು ಮಾನುಷಪ್ರಮಾಣದಲ್ಲಿ ಮೂವತ್ತುಕೋಟಿ ಅರವತ್ತೇಳುಲಕ್ಷದ ಇಪ್ಪತ್ತು ಸಹಸ್ರವರ್ಷಗಳಾಗುತ್ತವೆಯೆಂದು ಕಾಲಜ್ಞರಾದ ಮುನಿಗಳು ಹೇಳುವರು.

ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನ್ಯಧಿಕಾನಿ ತು ।
ವಿಂಶತಿಶ್ಚ ಸಹಸ್ರಾಣಿ ಕಾಲೋಽಯಂ ಸಾಧಿಕಾಂ ವಿನಾ ॥ ೩೫ ॥

ಮನ್ವಂತರಸ್ಯ ಸಂಖ್ಯೈಷಾ ಸಂಖ್ಯಾವಿದ್ಭಿರ್ದ್ವಿಜೈಃ ಸ್ಮೃತಾ ।
ಮನ್ವಂತರಸ್ಯ ಕಾಲೋಽಯಂ ಯುಗೈಃ ಸಾರ್ಧಂ ಪ್ರಕೀರ್ತಿತಃ ॥ ೩೬ ॥

ಚತುಃಸಹಸ್ರಯುಕ್ತಂ ವೈ ಪ್ರಥಮಂತತ್ ಕೃತಂ ಯುಗಂ ।
ತ್ರೇತಾವಶಿಷ್ಟಂ ವಕ್ಷ್ಯಾಮಿ ದ್ವಾಪರಂ ಕಲಿಮೇವ ಚ ॥ ೩೭ ॥

ಯುಗಪತ್ಸಮವೇತಾರ್ಥೋ ದ್ವಿಧಾ ವಕ್ತುಂ ನ ಶಕ್ಯತೇ ।
ಕ್ರಮಾಗತಂ ಮಯಾ ಹ್ಯೇತತ್ತುಭ್ಯಂ ಪ್ರೋಕ್ತಂ ಯುಗದ್ವಯಂ ॥
ಋಷಿವಂಶಪ್ರಸಂಗೇನ ವ್ಯಾಕುಲತ್ವಾತ್ತಥೈವ ಚ ॥ ೩೮ ॥

---

೩೫. ಹದಿನಾಲ್ಕುಜನ ಮನುಗಳ ಕಾಲವನ್ನು ಕೂಡಿಸಿದರೆ ಮೂವತ್ತು ಕೋಟಿ ಅರವತ್ತೇಳುಲಕ್ಷದ ಇಪ್ಪತ್ತು ಸಹಸ್ರವರ್ಷಗಳಾಗುವುವು.

೩೬. ಸಂಖ್ಯೆಯ ಸ್ವರೂಪವನ್ನರಿತ ಜ್ಞಾನಿಗಳು ಮನ್ವಂತರಗಳ ಸಂಖ್ಯೆಯನ್ನು ಗುಣಿಸಿ ಹೀಗೆ ಹೇಳಿರುವರು. ಎಲೈ ಮುನಿಗಳೇ ನಿಮಗಾಗಿ ನಾಲ್ಕು ಯುಗಗಳನ್ನೂ ಮನ್ವಂತರಗಳ ಕಾಲವನ್ನೂ ನಿರೂಪಿಸಿರುತ್ತೇನೆಂದನು.

೩೭. ಕೃತಯುಗಕ್ಕೆ ನಾಲ್ಕು ಸಹಸ್ರವರ್ಷಗಳೆಂದು ಮೊದಲೇ ತಿಳಿಸಿರುತ್ತದೆ. ಇದರಂತೆ ತ್ರೇತಾಯುಗ, ದ್ವಾಪರಯುಗ, ಕಲಿಯುಗಗಳ ವಿಷಯಗಳನ್ನು ತಿಳಿಸಿರುವೆನೆಂದು ಮುನಿಯು ಹೇಳಿದನು.

೩೮. ಒಂದುಸಲ ನಿರೂಪಿತವಾದ ವಿಷಯಗಳನ್ನು ಮತ್ತೊಂದುಸಲ ಹೇಳಲು ಸಾಧ್ಯವಿಲ್ಲ. ಕ್ರಮಪ್ರಾಪ್ತವಾದ ಕಾರಣ ಈ ಯುಗದ್ವಯ ವಿಷಯಗಳನ್ನು ನಾನು ನಿಮಗೆ ತಿಳಿಸಿರುತ್ತೇನೆ. ಮುನಿಗಳ ವಂಶಪ್ರಸಕ್ತಿಯಿಂದ ವ್ಯಾಕುಲವಾದ ಮನಸ್ಸಿಗೆ ಆಯಾಸಪರಿಹಾರಕ್ಕಾಗಿ ಯುಗಗಳ ಸ್ವರೂಪವನ್ನು ತಿಳಿಸಿರುವೆನೆಂದನು.

ತತ್ರ ತ್ರೇತಾಯುಗಸ್ಯಾದೌ ಮನುಃ ಸಪ್ತರ್ಷಯಶ್ಚ ತೇ ।
ಶ್ರೌತಂ ಸ್ಮಾರ್ತಂಚ ಧರ್ಮಂಚ ಬ್ರಹ್ಮಣಾ ಚ ಪ್ರಚೋದಿತಂ ॥ ೩೯ ॥

ದಾರಾಗ್ನಿಹೋತ್ರಸಂಯೋಗ ಮೃಗ್ಯಜುಃ ಸಾಮಸಂಜ್ಞಿತಂ ।
ಇತ್ಯಾದಿಲಕ್ಷಣಂ ಶ್ರೌತಂ ಧರ್ಮಂ ಸಪ್ತರ್ಷಯೋಽಬ್ರುವನ್ ॥ ೪೦ ॥

ಪರಸ್ಪರಾಗತಂ ಧರ್ಮಂ ಸ್ಮಾರ್ತಂಚಾಚಾರಲಕ್ಷಣಂ ।
ವರ್ಣಾಶ್ರಮಾಚಾರಯುತಂ ಮನುಃ ಸ್ವಾಯಂಭುವೋಽಬ್ರವೀತ್ ॥ ೪೧ ॥

ಸತ್ಯೇನ ಬ್ರಹ್ಮಚರ್ಯೇಣ ಶ್ರುತೇನ ತಪಸಾ ಚ ವೈ ।
ತೇಷಾಂ ಸುತಪ್ತತಪಸಾಮಾರ್ಷೇಯೇಣ ಕ್ರಮೇಣ ತು । ॥ ೪೨ ॥

ಸಪ್ತರ್ಷೀಣಾಂ ಮನೋಶ್ಚೈವ ಆದ್ಯೇ ತ್ರೇತಾಯುಗಸ್ಯ ತು ।
ಅಬುದ್ಧಿಪೂರ್ವಕಂ ತೇಷಾಮಕ್ರಿಯಾಪೂರ್ವಮೇವ ಚ ॥ ೪೩ ॥

---

೩೯-೪೦. ಅದರಲ್ಲಿ ತ್ರೇತಾಯುಗದ ಆದಿಯಲ್ಲಿ ನಡೆಯುವ ಬ್ರಹ್ಮದೇವನಿಂದ ಪ್ರೇರಿತವಾದ ಶ್ರೌತ ಸ್ಮಾರ್ತ ಧರ್ಮಗಳು, ಮನುಗಳು, ಸಪ್ತರ್ಷಿಗಳು ಇವರನ್ನು ನಿರೂಪಿಸುವೆನು. ಸಪ್ತರ್ಷಿಗಳು ದಾರಾಗ್ನಿಹೋತ್ರಸಂಯೋಗ ಋಗ್ಯಜುಸ್ಸಾಮ ಸಂಬಂಧಿಯಾದ ವಿಷಯಗಳು ಇವುಗಳು ಶ್ರೌತಸ್ಮಾರ್ತಧರ್ಮಗಳೆಂದು ಹೇಳುವರು.

೪೧. ತ್ರೇತಾಯುಗದ ಆದಿಯಲ್ಲಿ ಸ್ವಾಯಂಭುವ ಮನುವು ಪರಂಪರಾ ಪ್ರಾಪ್ತವೂ, ವರ್ಣಾಶ್ರಮಾಚಾರಯುಕ್ತವೂ ಆದ ಧರ್ಮವನ್ನೇ ಸ್ಮಾರ್ತಧರ್ಮವೆಂದು ಹೇಳಿರುವನು.

೪೨-೪೩. ಮೊದಲನೆಯ ತ್ರೇತಾಯುಗದಲ್ಲಿ ಮಹಾತಪಸ್ವಿಗಳಾದ ಆ ಸಪ್ತರ್ಷಿಗಳು ಮತ್ತು ವೈವಸ್ವತಮನು ಇವರ ಸತ್ಯ, ಬ್ರಹ್ಮಚರ್ಯ, ಶಾಸ್ತ್ರಶ್ರವಣ, ತಪಸ್ಸು ಇವುಗಳ ಮಹಾಮಹಿಮೆಗಳಿಂದ ಪ್ರಜೆಗಳು ಬುದ್ಧಿಪೂರ್ವಕವಾಗಿ ಕ್ರಿಯೆಗಳನ್ನು ಮಾಡದಿದ್ದರೂ ಸಂಪೂರ್ಣ ಫಲಗಳು ದೊರೆತು ಸಂಪತ್ಸಮೃದ್ಧಿಯಿಂದ ಸುಖವಾಗಿದ್ದರು.

ಅಭಿವ್ಯಕ್ತಾಸ್ತು ತೇ ಮಂತ್ರಾಸ್ತಾರಕಾದ್ಯೈರ್ನಿದರ್ಶನೈಃ ।
ಆದಿಕಲ್ಪೇ ತು ದೇವಾನಾಂ ಪ್ರಾದುರ್ಭೂತಾಸ್ತು ತೇ ಸ್ವಯಂ ॥ ೪೪ ॥

ಪ್ರಣಾಶೇ ತ್ವಥ ಸಿದ್ಧೀನಾಮನ್ಯಾಸಾಂ ಚ ಪ್ರವರ್ತನಂ ।
ಆರ್ಸ ಮಂತ್ರಾ ವ್ಯತೀತೇಷು ಯೇ ಕಲ್ಪೇಷು ಸಹಸ್ರಶಃ ॥
ತ್ರೇ ಮಂತ್ರಾ ವೈ ಪುನಸ್ತೇಷಾಂ ಪ್ರತಿಭಾಸಸಮುತ್ಥಿತಾಃ ॥ ೪೫ ॥

ಋಚೋ ಯಜೂಂಷಿ ಸಾಮಾನಿ ಮಂತ್ರಾಶ್ಚಾಥರ್ವಣಾನಿ ಚ ।
ಸಪ್ತರ್ಷಿಭಿಸ್ತು ತೇ ಪ್ರೋಕ್ತಾಃ ಸ್ಮಾರ್ತಂ ಧರ್ಮಂ ಮನುರ್ಜಗೌ ॥ ೪೬ ॥

ತ್ರೇತಾದೌ ಸಂಹಿತಾ ವೇದಾಃ ಕೇವಲಾ ಧರ್ಮಶೇಷತಃ ।
ಸಂರೋಧಾದಾಯುಷಶ್ಚೈವ ವ್ಯಸ್ಯಂತೇ ದ್ವಾಪರೇಷು ತೇ ॥ ೪೭ ॥

---

೪೪. ಮೊದಲನೆಯ ಕೃತಯುಗದಲ್ಲಿ ದೇವತೆಗಳಿಗೆ ಯಾವ ಫಲಗಳು ಸ್ವತಃ ಸಿದ್ಧವಾಗಿದ್ದುವೋ, ಅಂತಹ ಮಹಾಫಲಗಳು ನಕ್ಷತ್ರಾದಿಗಳ ದೃಷ್ಟಾಂತಗಳಿಂದ ಅತಿ ಸುಲಭವಾಗಿ ಅಭಿವ್ಯಕ್ತಗಳಾಗಿದ್ದುವು.

೪೫. ಕೃತಯುಗದ ಮಹಾಸಿದ್ಧಿಗಳು ತಿರೋಭೂತವಾಗಿದ್ದರೂ ಪುನಃ ಅವುಗಳೆಲ್ಲವೂ ವ್ಯಕ್ತವಾದುವು. ಇದರಂತೆಯೇ ಪೂರ್ವಕಲ್ಪಗಳಲ್ಲಿದ್ದು ತಿರೋಧಾನ ವಾದ ಸಾವಿರಾರು ಮಹಾಮಂತ್ರಗಳೂ ಕೂಡ ಪುನಃ ಅವರಿಗೆ ಸ್ಮರಣೆಗೆ ಬಂದು ಫಲಕಾರಿಯಾದುವು.

೪೬. ತ್ರೇತಾಯುಗದ ಆದಿಯಲ್ಲಿ ಸಪ್ತರ್ಷಿಗಳಿಂದ ಪ್ರೋಕ್ತವಾದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಶ್ರೌತಸ್ಮಾರ್ತಧರ್ಮಗಳು, ಯಜ್ಞ ಯಾಗಾದಿ ಕರ್ಮಗಳು ಪುನಃ ಪ್ರವೃತ್ತವಾಗಿ ಮಹಾಸಿದ್ಧಿಗಳನ್ನೂ ಸುಖಸಂಪತ್ತು ಗಳನ್ನೂ ಕೊಡುತ್ತಿದ್ದುವು.

೪೭. ತ್ರೇತಾಯುಗದ ಆದಿಯಲ್ಲಿ ಯಾವ ವೇದಗಳೂ, ಸಂಹಿತೆಗಳೂ, ಧರ್ಮಗಳೂ, ಆಯುಸ್ಸೂ ಇದ್ದುವೋ, ಇವು ದ್ವಾಪರಯುಗದಲ್ಲಿ ಸ್ಪಷ್ಟವಾಗಿ ಹ್ರಾಸಹೊಂದಿದವು.

**ಋಷಯಸ್ತಪಸಾ ದೇವಾಃ ಕಲೌ ಚ ದ್ವಾಪರೇಷು ವೈ ।**
**ಅನಾದಿನಿಧನಾ ದಿವ್ಯಾಃ ಪೂರ್ವಂ ಸೃಷ್ಟಾಃ ಸ್ವಯಂಭುವಾ ॥ ೪೮ ॥**

**ಸ ಧರ್ಮಾಃ ಸಪ್ರಜಾಃ ಸಾಂಗಾ ಯಥಾಧರ್ಮಂ ಯುಗೇ ಯುಗೇ ।**
**ವಿಕ್ರೀಡಂತೇ ಸಮಾನಾರ್ಥಾ ವೇದವಾದಾ ಯಥಾಯುಗಂ ॥ ೪೯ ॥**

**ಆರಭ್ಯಯಜ್ಞಾ ಕ್ಷತ್ರಸ್ಯ ಹವಿರ್ಯಜ್ಞಾ ವಿಶಾಂಪತೇಃ ।**
**ಪರಿಚಾರಯಜ್ಞಾಃ ಶೂದ್ರಾಸ್ತು ಜಪಯಜ್ಞಾ ದ್ವಿಜೋತ್ತಮಾಃ ॥ ೫೦ ॥**

**ತಥಾ ಪ್ರಮುದಿತಾ ವರ್ಣಾಸ್ತ್ರೇತಾಯಾಂ ಧರ್ಮಪಾಲಿತಾಃ ।**
**ಕ್ರಿಯಾವಂತಃ ಪ್ರಜಾವಂತಃ ಸಮೃದ್ಧಾಃ ಸುಖಿನಸ್ತಥಾ ॥ ೫೧ ॥**

---

೪೮. ಬ್ರಹ್ಮದೇವನು ಪೂರ್ವಕಲ್ಪಗಳಲ್ಲಿ ಯಾವ ವೇದಗಳು, ಋಷಿಗಳು, ತಪಸ್ಸು, ದೇವತೆಗಳು ಇವರನ್ನು ಸೃಷ್ಟಿಸಿದನೋ, ಅನಾದಿಯೂ, ನಿತ್ಯವೂ ಆದ ಅವು ದ್ವಾಪರಯುಗ ಕಲಿಗಳಲ್ಲಿಯೂ ಅನುಸ್ಯೂತವಾಗಿರುತ್ತವೆ.

೪೯. ಬ್ರಹ್ಮದೇವನು ಆಯಾ ಯುಗಾನುಸಾರವಾಗಿ ಧರ್ಮ, ಯಜ್ಞಾದಿಕರ್ಮ, ಪ್ರಜೆ ಮತ್ತು ವೇದ ಇವುಗಳನ್ನು ಸೃಷ್ಟಿಮಾಡಿ, ಅವುಗಳಿಗೆ ಯೋಗ್ಯವಾದ ಫಲಗಳನ್ನು ಕೊಡುತ್ತಾನೆ. ಧರ್ಮಾದಿಗಳು ಯುಗಾನುಸಾರವಾಗಿ ಬದಲಾಯಿಸುತ್ತವೆ.

೫೦. ಕ್ಷತ್ರಿಯರು ಪ್ರಜಾಪಾಲನೆಯ ಪ್ರಾರಂಭರೂಪವಾದ ಯಜ್ಞವನ್ನೂ, ವೈಶ್ಯರು ಹವಿರ್ದಾನರೂಪವಾದ ಯಾಗವನ್ನೂ, ಶೂದ್ರರು ಸೇವಾರೂಪವಾದ ಯಾಗವನ್ನೂ, ಬ್ರಾಹ್ಮಣರು ಧ್ಯಾನರೂಪವಾದ ಯಾಗವನ್ನೂ ಮಾಡಬೇಕು.

೫೧. ಕೃತಯುಗದಂತೆ ತ್ರೇತಾಯುಗದಲ್ಲಿಯೂ ಪ್ರಜೆಗಳು ಧರ್ಮಪಾಲಕರೂ, ಕ್ರಿಯಾವಂತರೂ ಆಗಿರುವುದರಿಂದ ಸಂತೋಷಯುಕ್ತರೂ, ಪ್ರಜಾವಂತರೂ, ಐಶ್ವರ್ಯವಂತರೂ, ನಿತ್ಯಸುಖಿಗಳೂ, ಆಯುಷ್ಮಂತರೂ ಆಗಿದ್ದರು.

ಬ್ರಾಹ್ಮಣಾನನುವರ್ತಂತೇ ಕ್ಷತ್ರಿಯಾಃ ಕ್ಷತ್ರಿಯಾನ್ ವಿಶಃ ।
ವೈಶ್ಯಾನುವರ್ತಿನಃ ಶೂದ್ರಾಃ ಪರಸ್ಪರಮನುವ್ರತಾಃ ॥ ೫೨ ॥

ಶುಭ್ರಾಃ ಪ್ರವೃತ್ತಯಸ್ತೇಷಾಂ ಧರ್ಮಾ ವರ್ಣಾಶ್ರಮಾಸ್ತಥಾ ।
ಸಂಕಲ್ಪಿತೇನ ಮನಸಾ ವಾಚೋಕ್ತೇನ ಸ್ವಕರ್ಮಣಾ ॥
ತ್ರೇತಾಯುಗೇ ತ್ವವಿಕಲಃ ಕರ್ಮಾರಂಭಃ ಪ್ರಸಿದ್ಧ್ಯತಿ ॥ ೫೩ ॥

ಆಯುರ್ಮೇಧಾ ಬಲಂ ರೂಪಮಾರೋಗ್ಯಂ ಧರ್ಮಶೀಲತಾ ।
ಸರ್ವಸಾಧಾರಣಾ ಹ್ಯೇತೇ ತ್ರೇತಾಯಾಂ ವೈ ಭವಂತ್ಯುತ ॥ ೫೪ ॥

ವರ್ಣಾಶ್ರಮವ್ಯವಸ್ಥಾನಂ ತೇಷಾಂ ಬ್ರಹ್ಮಾ ತಥಾಕರೋತ್ ।
ಪುನಃ ಪ್ರಜಾಸ್ತು ತಾ ಮೋಹಾತ್ತಾನ್ ಧರ್ಮಾನ್ನ ಹ್ಯಪಾಲಯನ್ ॥ ೫೫ ॥

---

೫೨. ತ್ರೇತಾಯುಗದಲ್ಲಿ ಕ್ಷತ್ರಿಯರು ಬ್ರಾಹ್ಮಣರನ್ನೂ, ವೈಶ್ಯರು ಕ್ಷತ್ರಿಯರನ್ನೂ, ಶೂದ್ರರು ವೈಶ್ಯರನ್ನೂ, ಎಲ್ಲರೂ ಸೇರಿ ದೇವತೆಗಳನ್ನೂ ಅನುವರ್ತಿಸಿಕೊಂಡು ಶುಭಕರವಾದ ಪ್ರವೃತ್ತಿಯಿಂದ ನಿತ್ಯಸುಖಿಯಾಗಿದ್ದರು.

೫೩. ಪ್ರಜೆಗಳು ಶುಭಾಚಾರಿಗಳಾಗಿದ್ದುದರಿಂದ ಧರ್ಮಗಳೂ, ವರ್ಣಾಶ್ರಮಗಳೂ ಸಂಪೂರ್ಣವಾಗಿದ್ದುವು. ಪ್ರಜೆಗಳ ಸಂಕಲ್ಪಾನುಸಾರವಾಗಿ ಮನಸ್ಸೂ ಮನಸ್ಸಿಗನುಗುಣವಾಗಿ ಮಾತು, ವಾಕ್ಕಿಗನುಗುಣವಾಗಿ ಕರ್ಮಗಳೂ ಇದ್ದುದರಿಂದ ಕಾರ್ಯಗಳು, ಸಿದ್ಧಿಗಳು ನಿರ್ವಿಘ್ನವಾಗಿ ನೆರವೇರುತ್ತಿದ್ದುವು.

೫೪. ತ್ರೇತಾಯುಗದಲ್ಲಿ ಆಯುಸ್ಸು, ಬುದ್ಧಿ, ಶಕ್ತಿ, ಸಾಮರ್ಥ್ಯ, ಸೌಂದರ್ಯ, ಆರೋಗ್ಯ, ಧರ್ಮ, ಸದಾಚಾರ ಇವುಗಳು ಸರ್ವ ಪ್ರಜೆಗಳಿಗೆ ಒಂದೇ ಸಮಾನವಾಗಿದ್ದುವು. ಯಾರಲ್ಲಿಯೂ ನ್ಯೂನಾಧಿಕಗಳಾಗಿರಲಿಲ್ಲ.

೫೫. ಬ್ರಹ್ಮದೇವನು ವರ್ಣಾಶ್ರಮಾಚಾರಧರ್ಮಗಳನ್ನು ಹೇಗೆ ಸೃಷ್ಟಿ ಮಾಡಿದನೋ ಪ್ರಜೆಗಳು ಹಾಗೆಯೇ ಅವುಗಳನ್ನು ಪಾಲಿಸುತ್ತಿದ್ದರು. ಅಜ್ಞಾನದಿಂದ ಅವುಗಳನ್ನು ಮೀರಿ ನಡೆಯುತ್ತಿರಲಿಲ್ಲ.

ಪರಸ್ಪರವಿರೋಧೇನ ಮನುಂ ತಾಃ ಪುನರನ್ವಯುಃ ।
ಮನುಃ ಸ್ವಾಯಂಭುವೋ ದೃಷ್ಟ್ವಾ ಯಾಥಾತಥ್ಯಂ ಪ್ರಜಾಪತಿಃ ॥ ೫೬ ॥

ಧಾತಾ ತು ಶತರೂಪಾಯಾಃ ಪುರ್ತ್ರೌ ಸ ಉದಪಾದಯತ್ ।
ಪ್ರಿಯವ್ರತೋತ್ತಾನಪಾದೌ ಪ್ರಥಮಂ ತೌ ಮಹೀಪತೀ ॥ ೫೭ ॥

ತತಃ ಪ್ರಭೃತಿ ರಾಜಾನ ಉತ್ಪನ್ನಾ ದಂಡಧಾರಿಣಃ ।
ಪ್ರಜಾನಾಂ ರಂಜನಾಚ್ಚೈವ ರಾಜಾನಸ್ತ್ವಭವನ್ನೃಪಾಃ ॥ ೫೮ ॥

ಪ್ರಚ್ಛನ್ನಪಾಪಾ ಯೇ ಜೇತುಮಶಕ್ಯಾ ಮನುಜಾ ಭುವಿ ।
ಧರ್ಮಸಂಸ್ಥಾಪನಾರ್ಥಾಯ ತೇಷಾಂ ಶಾಸ್ತ್ರೇ ತಪೋ ಮಯಾ ॥ ೫೯ ॥

ವರ್ಣಾನಾಂ ಪ್ರವಿಭಾಗಾಶ್ಚ ತ್ರೇತಾಯಾಂ ಸಂಪ್ರಕೀರ್ತಿತಾಃ ।
ಸಂಹಿತಾಶ್ಚ ತತೋ ಮಂತ್ರಾ ಋಷಿಭಿರ್ಬ್ರಾಹ್ಮಣೈಸ್ತು ತೇ ॥ ೬೦ ॥

---

೫೬. ಆಗ ಪ್ರಜೆಗಳು ಪರಸ್ಪರವಾಗಿ ವಿರೋಧವಿಲ್ಲದೆ ಮನುಚಕ್ರವರ್ತಿಯನ್ನ ಅನುಸರಿಸುತ್ತಿದ್ದರು. ಆ ಸ್ವಾಯಂಭುವಮನುವು ಬ್ರಹ್ಮದೇವನ ಸಂಕಲ್ಪಾನುಸಾರ ಪ್ರಜಾಪಾಲನೆಮಾಡುತ್ತಿದ್ದನು.

೫೭. ತ್ರೇತಾಯುಗದ ಆದಿಯಲ್ಲಿ ಬ್ರಹ್ಮದೇವನು ಶತರೂಪೆಯಲ್ಲಿ ಪ್ರಿಯವ್ರತೋತ್ತಾನಪಾದರೆಂಬ ಇಬ್ಬರು ರಾಜಕುಮಾರರನ್ನು ಸೃಷ್ಟಿಸಿದನು.

೫೮. ಪ್ರಿಯವ್ರತ, ಉತ್ತಾನಪಾದರಾಜರು ಹುಟ್ಟಿದ ದಿವಸದಿಂದಲೂ ರಾಜರು ದುಷ್ಟಶಿಕ್ಷಣ, ಪ್ರಜಾಪಾಲನೆಗಳು ನಡೆಯುತ್ತಾ ಬಂದುವು. ಪ್ರಜೆಗಳ ರಂಜನೆಯಿಂದ ಅವರಿಗೆ ರಾಜರೆಂಬ ಸಂಜ್ಞೆಯು ಬಂದಿದೆ.

೫೯-೬೦. ಯಾವ ಪುರುಷರು ಪ್ರಚ್ಛನ್ನವಾದ ಪಾಪವುಳ್ಳವರಾಗಿಯೂ ಜಯಿಸಲಶಕ್ಯರಾಗಿಯೂ, ಬಲಿಷ್ಠರಾಗಿಯೂ ಇರುತ್ತಾರೋ ಅಂತಹವರನ್ನು ಶಾಸನ ಮಾಡುವುದಕ್ಕಾಗಿಯೂ, ಧರ್ಮಸ್ಥಾಪನೆಯನ್ನು ಮಾಡುವುದಕ್ಕಾಗಿಯೂ ರಾಜರು ತಪಸ್ಸು ಮೊದಲಾದುವುಗಳನ್ನು ಶಾಸ್ತ್ರಕಾರರು ಶಾಸ್ತ್ರಗಳಲ್ಲಿ ನಿರೂಪಿಸಿರುತ್ತಾರೆ. ಮತ್ತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಗಳ ವಿಭಾಗಗಳೂ ಏರ್ಪಟ್ಟವೆ. ಋಷಿಗಳು ಬ್ರಾಹ್ಮಣರೇ ಮೊದಲಾದವರು ಸಂಹಿತಾ ಮಂತ್ರ ಮೊದಲಾದುದನ್ನು ಏರ್ಪಡಿಸಿದರು.

ಯಜ್ಞಾಃ ಪ್ರವರ್ತಿತಶ್ಚೈವ ತದಾ ಹ್ಯೇವಂ ತು ದೈವತೈಃ ।
ಯಾಮೈಃ ಶುಕ್ಲೈರ್ಜಪೈಶ್ಚೈವ ಸರ್ವಸಂಭಾರಸಂವೃತೈಃ ॥ ೬೧ ॥

ಸಾರ್ಧಂ ವಿಶ್ವಭುಜಾ ಚೈವ ದೇವೇಂದ್ರೇಣ ಮಹೌಜಸಾ ।
ಸ್ವಾಯಂಭುವೇಂಽತರೇ ದೇವೈರ್ಯಜ್ಞಾಸ್ತೇ ಪ್ರಾಕ್ ಪ್ರವರ್ತಿತಾಃ ॥ ೬೨ ॥

ಸತ್ಯಂ ಜಪಸ್ತಪೋ ದಾನಂ ತ್ರೇತಾಯಾಂ ಧರ್ಮ ಉಚ್ಯತೇ ।
ಕ್ರಿಯಾ ಧರ್ಮಶ್ಚ ಹ್ರಸತೇ ಸತ್ಯಧರ್ಮಃ ಪ್ರವರ್ತತೇ ॥ ೬೩ ॥

ಪ್ರಜಾಯಂತೇ ತತಃ ಶೂರಾ ಆಯುಷ್ಮಂತೋ ಮಹಾಬಲಾಃ ।
ನ್ಯಸ್ತದಂಡಮಹಾಭಾಗಾ ಯಜ್ವಾನೋ ಬ್ರಹ್ಮವಾದಿನಃ ॥ ೬೪ ॥

ಪದ್ಮಪತ್ರಾಯತಾಕ್ಷಾಶ್ಚ ಪೃಥೂರಸ್ಕಾಃ ಸುಸಂಹಿತಾಃ ।
ಸಿಂಹಾಂತಿಕಾ ಮಹಾಸತ್ವಾ ಮತ್ತಮಾತಂಗಗಾಮಿನಃ ॥ ೬೫ ॥

---

೬೧. ತ್ರೇತಾಯುಗದಲ್ಲಿ ದೇವತೆಗಳು ಯಜ್ಞಗಳನ್ನು ಮಾಡುತ್ತಿದ್ದರು. ಬಹಳ ಪರಿಶುದ್ಧವಾದ ಸಮಸ್ತಸಂಭಾರಗಳಿಂದಲೂ, ಜಪತಪಹೋಮಾದಿಗಳಿಂದಲೂ ಕೂಡ ಶುಕ್ಲಪಕ್ಷದ ಯಾಮಗಳಲ್ಲಿ ಯಾಗವನ್ನು ಮಾಡುವರು.

೬೨. ಸ್ವಾಯಂಭುವಮನ್ವಂತರದಲ್ಲಿ ಮೊದಲು ದೇವತೆಗಳು, ಮಹಾತೇಜಸ್ವಿಯಾದ ಯಜ್ಞಪುರುಷ ಮತ್ತು ದೇವೇಂದ್ರ ಇವರಿಂದಕೂಡಿ ಸಕಲಸಾಮಗ್ರಿಗಳ ಸಮೇತವಾಗಿ ಯಾಗವನ್ನು ಮಾಡಿದರು.

೬೩. ತ್ರೇತಾಯುಗದಲ್ಲಿ ಸತ್ಯ, ಜಪ, ತಪಸ್ಸು, ದಾನ ಇವು ಮುಖ್ಯವಾದ ಧರ್ಮವಾಗಿವೆ. ಕ್ರಿಯಾರೂಪಧರ್ಮವು ಹ್ರಾಸವಾಗುವುದು. ಸತ್ಯರೂಪವಾದ ಧರ್ಮವು ವೃದ್ಧಿಯಾಗುವುದು.

೬೪–೬೭. ಅನಂತರ ತ್ರೇತಾಯುಗದಲ್ಲಿ ಚಕ್ರವರ್ತಿಗಳೂ, ಶೂರರೂ, ಆಯುಷ್ಮಂತರೂ, ಮಹಾಬಲಿಷ್ಠರೂ, ಶಿಕ್ಷಾರಹಿತರೂ, ಮಹಾಭಾಗ್ಯಶಾಲಿಗಳೂ, ಯಾಗಶೀಲರೂ, ಬ್ರಹ್ಮವಾದಿಗಳೂ, ಪದ್ಮದಲದಂತೆ ವಿಶಾಲವಾದ ನೇತ್ರವಂತರೂ,

ಮಹಾಧನುರ್ಧರಾಶ್ಚೈವ ತ್ರೇತಾಯಾಂ ಚಕ್ರವರ್ತಿನಃ ।
ಸರ್ವಲಕ್ಷಣಸಂಪನ್ನಾ ನ್ಯಗ್ರೋಧಪರಿಮಂಡಲಾಃ ॥ ೬೬ ॥

ನ್ಯಗ್ರೋಧೌ ತೌ ಸ್ಮೃತೌ ಬಾಹೂ ವ್ಯಾಮೋ ನ್ಯಗ್ರೋಧ ಉಚ್ಯತೇ ।
ವ್ಯಾಮೇನೈವೋಚ್ಛ್ರಯಾದ್ಯಸ್ಯ ಸಮ ಊರ್ದ್ಧ್ವಂ ತು ದೇಹಿನಃ ॥
ಸಮುಚ್ಛ್ರಯ ಪರೀಣಾಹೋ ಜ್ಞೇಯೋ ನ್ಯಗ್ರೋಧಮಂಡಲಃ ॥ ೬೭ ॥

ಚಕ್ರಂ ರಥೋ ಮಣಿರ್ಭಾರ್ಯಾ ನಿಧಿರಶ್ವಾ ಗಜಾಸ್ತಥಾ ।
ಸಪ್ತಾತಿಶಯರತ್ನಾನಿ ಸರ್ವೇಷಾಂ ಚಕ್ರವರ್ತಿನಾಂ ॥ ೬೮ ॥

ಚಕ್ರಂ ರಥೋ ಮಣಿಃ ಖಡ್ಗಂ ಧನೂರತ್ನಂ ಚ ಪಂಚಮಂ ।
ಕೇತುರ್ನಿಧಿಶ್ಚ ಸಪ್ತೈತೇ ಪ್ರಾಣಹೀನಾಃ ಪ್ರಕೀರ್ತಿತಾಃ ॥ ೬೯ ॥

ಭಾರ್ಯಾ ಪುರೋಹಿತಶ್ಚೈವ ಸೇನಾನಾ ರಥಕೃಚ್ಚ ಯಃ ।
ಮಂತ್ರ್ಯಶ್ವಃ ಕಲಭಶ್ಚೈವ ಪ್ರಾಣಿನಃ ಸಂಪ್ರಕೀರ್ತಿತಾಃ ॥ ೭೦ ॥

---

ವಿಶಾಲಹೃದಯರೂ, ಸಂಘದಲ್ಲಿ ಪ್ರೀತಿಯುಳ್ಳವರೂ, ಸಿಂಹವಿಕ್ರಮಿಗಳೂ, ಮಹಾಬಲವಂತರೂ, ಮದ್ದಾನೆಗಳಂತೆ ಮಂದಗಾಮಿಗಳೂ, ಮಹಾಧನುರ್ಧಾರಿಗಳೂ. ಸರ್ವಲಕ್ಷಣಸಂಪನ್ನರೂ, ಆಲದಮರದಂತೆ ವಿಶಾಲಬುದ್ಧಿಗಳೂ ಆಗಿ ರಾಜ್ಯವನ್ನು ಧರ್ಮದಿಂದ ಪಾಲಿಸುತ್ತಿದ್ದರು.

೬೮. ಸಮಸ್ತರಾದ ಚಕ್ರವರ್ತಿಗಳಿಗೂ ಚಕ್ರಾಯುಧ, ರಥ, ರತ್ನಗಳು. ಮಹಾರಾಣಿ, ನವನಿಧಿಗಳು, ಅಶ್ವಗಳು ಮತ್ತು ಗಜಗಳು ಎಂಬ ಸಪ್ತರತ್ನಗಳೂ ಇರಬೇಕು. ಈ ಸಪ್ತಪದಾರ್ಥಗಳುಳ್ಳವರೇ ಚಕ್ರವರ್ತಿಗಳಾಗಿರುವರು.

೬೯. ಚಕ್ರ, ರಥ, ರತ್ನ, ಖಡ್ಗ, ಧನುಸ್ಸು, ಧ್ವಜ, ನಿಧಿ ಎಂಬ ಸಪ್ತ ವಸ್ತುಗಳು ಪ್ರಾಣರಹಿತಗಳಾಗಿವೆ. ಇವು ಪ್ರಾಣವಿಲ್ಲದ ಸಪ್ತರತ್ನಗಳಾಗಿವೆ.

೭೦. ರಾಜರಿಗೆ ಭಾರ್ಯಾ, ಪುರೋಹಿತ, ಸೇನಾಪತಿ, ರಥಕಾರ, ಮಂತ್ರಿ ಅಶ್ವ ಮತ್ತು ಗಜ ಇವು ಏಳೂ ಪ್ರಾಣವಿರುವ ಸಪ್ತರತ್ನಗಳಾಗಿವೆ.

ರತ್ನಾನ್ಯೇತಾನಿ ದಿವ್ಯಾನಿ ಸಂಸಿದ್ಧಾನಿ ಮಹಾತ್ಮನಾಂ ।
ಚತುರ್ದಶ ವಿಧೇಯಾನಿ ಸರ್ವೇಷಾಂ ಚಕ್ರವರ್ತಿನಾಂ ॥ ೭೧ ॥

ವಿಷ್ಣೋರಂಶೇನ ಜಾಯಂತೇ ಪೃಥಿವ್ಯಾಂ ಚಕ್ರವರ್ತಿನಃ ।
ಮನ್ವಂತರೇಷು ಸರ್ವೇಷು ಅತೀತಾನಾಗತೇಷು ವೈ ॥ ೭೨ ॥

ಭೂತಭವ್ಯಾನಿ ಯಾನೀಹ ವರ್ತಮಾನಾನಿ ಯಾನಿ ಚ ।
ತ್ರೇತಾಯುಗಾಧಿಕೇಷ್ವತ್ರ ಜಾಯಂತೇ ಚಕ್ರವರ್ತಿನಃ ॥ ೭೩ ॥

ಭದ್ರಾಣೀಮಾನಿ ತೇಷಾಂ ವೈ ಭವಂತೀಹ ಮಹೀಕ್ಷಿತಾಂ ।
ಅದ್ಭುತಾನಿ ಚ ಚತ್ವಾರಿ ಬಲಂ ಧರ್ಮಂ ಸುಖಂ ಧನಂ ॥ ೭೪ ॥

ಅನ್ಯೋನ್ಯಸ್ಯಾವಿರೋಧೇನ ಪ್ರಾಪ್ಯಂತೇ ವೈ ನೃಪೈಃ ಸಮಂ ।
ಅರ್ಥೋ ಧರ್ಮಶ್ಚ ಕಾಮಶ್ಚ ಯಶೋ ವಿಜಯ ಏವ ಚ ॥ ೭೫ ॥

---

೭೧. ಮಹಾತ್ಮರಾದ ಚಕ್ರವರ್ತಿಗಳಿಗೆ ಈ ಹದಿನಾಲ್ಕು ವಸ್ತುಗಳೂ ಚತುರ್ದಶರತ್ನಗಳಾಗಿ ಸಹಜಸಿದ್ಧವಾದುವೆಂದು ಮಹಾತ್ಮರು ಹೇಳುವರು. ಮಹಾತ್ಮರಾದ ಚಕ್ರವರ್ತಿಗಳಿಗೆ ಈ ಚತುರ್ದಶರತ್ನಗಳೂ ಸಹಜಸಿದ್ಧವಾಗಿಯೇ ಇರುತ್ತವೆ.

೭೨. ವರ್ತಮಾನ ಮನ್ವಂತರದಂತೆ . ಭೂತಭವಿಷ್ಯದ್ಮನ್ವಂತರದಲ್ಲಿಯೂ ಕೂಡ ಚಕ್ರವರ್ತಿಗಳು ಈ ಭೂಮಂಡಲದಲ್ಲಿ ವಿಷ್ಣುವಿನ ಅಂಶಗಳಿಂದ ಕೂಡಿ ಉದ್ಭವಿಸುವರು.

೭೩. ಭೂತಭವಿಷ್ಯದ್ವರ್ತಮಾನ ಮನ್ವಂತರಗಳಂತೆ ತ್ರೇತಾಯುಗದ ಆದಿ ಭಾಗದಲ್ಲಿ ಮೇಲೆ ನಿರೂಪಿಸಿದ ಚಕ್ರವರ್ತಿಲಕ್ಷಣೋಪೇತರಾದ ರಾಜರು ಉತ್ಪನ್ನರಾಗುವರು.

೭೪. ಚಕ್ರವರ್ತಿಗಳಾದ ಆ ರಾಜರುಗಳಿಗೆ ಅದ್ಭುತಗಳೂ ಮಂಗಳಕರಗಳೂ ಆದ ಬಲ, ಧರ್ಮ, ಸುಖ, ಧನವೆಂಬ ಈ ನಾಲ್ಕು ರತ್ನಗಳೂ ಸಹಜಸಿದ್ಧಗಳಾಗಿವೆ.

೭೫. ಅಂತಹ ಧಾರ್ಮಿಕರಾದ ರಾಜರಿಗೆ ಧರ್ಮ, ಅರ್ಥ, ಕಾಮ, ಕೀರ್ತಿ, ವಿಜಯವೆಂಬ ಈ ಐದು ವಸ್ತುಗಳೂ ಪರಸ್ಪರಾವಿರೋಧಿಗಳಾಗಿ ಭ್ರಾತೃಗಳಂತೆ ಸಹಜಪ್ರೇಮಿಗಳಾಗಿರುತ್ತವೆ.

ಐಶ್ವರ್ಯೈರ್ಣಿಮಾದ್ಯೇನ ಪ್ರಭುಶಕ್ತ್ಯಾ ತಥೈವ ಚ ।
ಅನ್ಯೇನ ತಪಸಾ ಚೈವ ಋಷೀನಭಿಭವಂತಿ ಚ ॥
ಬಲೇನ ತಪಸಾ ಚೈವ ದೇವದಾನವಮಾನುಷಾನ್ ॥ ೭೬ ॥

ಲಕ್ಷಣೈಶ್ಚಾಪಿ ಜಾಯಂತೇ ಶರೀರಸ್ಥೈರಮಾನುಷೈಃ ।
ಕೇಶಸ್ಥಿತಾ ಲಲಾಟೋರ್ಣಾ ಜಿಹ್ವಾ ಚಾಸ್ಯ ಪ್ರಮಾರ್ಜನೀ ॥
ತಾಮ್ರಪ್ರಭೋಷ್ಟದಂತೋಷ್ಠಾಃ ಶ್ರೀವತ್ಸಾಶ್ಚೋರ್ಧ್ವರೋಮಶಾಃ॥ ೭೭ ॥

ಆಜಾನುಬಾಹವಶ್ಚೈವ ಜಾಲಹಸ್ತಾ ವೃಷಾಂಕಿತಾಃ ।
ನ್ಯಗ್ರೋಧಪರಿಣಾಹಾಶ್ಚ ಸಿಂಹಸ್ಕಂಧಾಃ ಸುಮೇಹನಾಃ ॥
ಗಜೇಂದ್ರಗತಯಶ್ಚೈವ ಮಹಾಹನವ ಏವ ಚ । ॥ ೭೮ ॥

ಪಾದಯೋಶ್ಚಕ್ರಮತ್ಸ್ಯೌ ತು ಶಂಖಪದ್ಮೌ ತು ಹಸ್ತಯೋಃ ।
ಪಂಚಾಶೀತಿಸಹಸ್ರಾಣಿ ತೇ ಭವಂತ್ಯಜರಾ ನೃಪಾಃ ॥ ೭೯ ॥

---

೭೬. ಅಂತಹ ಚಕ್ರವರ್ತಿಗಳು ಅಣಿಮಾದ್ಯಷ್ಟೈಶ್ವರ್ಯಗಳಿಂದಲೂ, ಪ್ರಭು ಶಕ್ತಿಯಿಂದಲೂ, ಮಹಾತಪಸ್ಸಿನಿಂದಲೂ ಸಹ ಮಹರ್ಷಿಗಳನ್ನು ತಿರಸ್ಕರಿಸುತ್ತಿದ್ದರು. ಮತ್ತು ಬಲತಪಸ್ಸುಗಳಿಂದ ದೇವದಾನವಮನುಷ್ಯರನ್ನೂ ಕೂಡ ಮೀರುತ್ತಿದ್ದರು

೭೭-೭೮. ತ್ರೇತಾಯುಗದ ಚಕ್ರವರ್ತಿಗಳು ಅಮಾನುಷವೂ, ದಿವ್ಯವೂ ಆದ ತಮ್ಮ ಶರೀರರಕ್ಷಣಗಳಿಂದ ದೇವದಾನವಾದಿಗಳನ್ನು ಮೀರಿರುವರು. ಅವರ ಕೇಶ ದಲ್ಲಿಯೂ, ಹಣೆಯಲ್ಲಿಯೂ ದಿವ್ಯಸುಳಿಯಿರುವುದು. ಜಿಹ್ವೆಯು ಸಂಮಾರ್ಜನಿಯಂತೆ ದೀರ್ಘವಾಗಿರುವುದು. ಉಭಯೋಷ್ಠಗಳೂ ತಾಮ್ರವರ್ಣಗಳಾಗಿರುವುವು. ಶ್ರೀ ವತ್ಸವೂ, ಉದ್ದವಾದ ರೋಮಗಳೂ ಇರುವುವು. ಅವರ ಭುಜಗಳು ಉದ್ದವಾಗಿಯೂ ಕೈಗಳು ವಿಶಾಲವಾಗಿಯೂ, ಎತ್ತರವಾದ ಸ್ಕಂಧವು ವೃಷಭದಂತೆಯೂ ಇರುವುವು. ಅವರು ಆಲದಮರದಂತೆ ವಿಶಾಲರೂ, ಸಿಂಹದಂತೆ ಹೆಗಲುಳ್ಳವರೂ, ಉತ್ತಮ ಲಿಂಗ ಧಾರಿಯೂ, ಗಜೇಂದ್ರಗಮನವುಳ್ಳವರೂ, ವಿಶಾಲಕಪೋಲವುಳ್ಳರೂ ಆಗಿರುವರು.

೭೯. ಅವರ ಪಾದಗಳಲ್ಲಿ ಚಕ್ರ, ಮತ್ಸ್ಯಲಕ್ಷಣಗಳೂ, ಹಸ್ತಗಳಲ್ಲಿ ಶಂಖ ಪದ್ಮಗಳೂ ಇರುತ್ತವೆ. ಮತ್ತೆ ಅವರು ಎಂಭತ್ತೈದುಸಾವಿರವರ್ಷಗಳು ಅಜರಾ ಮರಣರಾಗಿಯೂ, ಸುಖವಾಗಿಯೂ ಜೀವಿಸುವರು.

ಅಸಂಗಾ ಗತಯಸ್ತೇಷಾಂ ಚತಸ್ರಶ್ಚಕ್ರವರ್ತಿನಾಂ ।
ಅಂತರಿಕ್ಷೇ ಸಮುದ್ರೇ ಚ ಪಾತಾಲೇ ಪರ್ವತೇಷು ಚ || ೮೦ ||

ಇಜ್ಯಾ ದಾನಂ ತಪಃ ಸತ್ಯಂ ತ್ರೇತಾಯಾಂ ಧರ್ಮ ಉಚ್ಯತೇ ।
ತದಾ ಪ್ರವರ್ತತೇ ಧರ್ಮೋ ವರ್ಣಾಶ್ರಮವಿಭಾಗಶಃ || ೮೧ ||

ಮರ್ಯಾದಾಸ್ಥಾಪನಾರ್ಥಂ ಚ ದಂಡನೀತಿಃ ಪ್ರವರ್ತತೇ ।
ಹೃಷ್ಟಪುಷ್ಟಾಃ ಪ್ರಜಾಃ ಸರ್ವಾ ಹ್ಯರೋಗಾಃ ಪೂರ್ಣಮಾನಸಾಃ || ೮೨ ||

ಏಕೋ ವೇದಶ್ಚತುಷ್ಪಾದಸ್ತ್ರೇತಾಯುಗವಿಧೌ ಸ್ಮೃತಃ ।
ತ್ರೀಣಿ ವರ್ಷಸಹಸ್ರಾಣಿ ತದಾ ಜೀವಂತಿ ಮಾನವಃ || ೮೩ ||

ಪುತ್ರಪೌತ್ರಸಮಾಕೀರ್ಣಾ ಮ್ರಿಯಂತೇ ಚ ಕ್ರಮೇಣ ತು ।
ಏಷ ತ್ರೇತಾಯುಗೇ ಧರ್ಮಸ್ತ್ರೇತಾಸಂಧೌ ನಿಬೋಧತ || ೮೪ ||

---

೮೦. ಅಂತಹ ಚಕ್ರವರ್ತಿಗಳು ಅಂತರಿಕ್ಷ, ಸಮುದ್ರ, ಪಾತಾಳ ಮತ್ತು ಪರ್ವತಗಳೆಂಬ ನಾಲ್ಕು ಪ್ರದೇಶಗಳಲ್ಲಿಯೂ ಅವ್ಯಾಹತವಾದ ಸಂಚಾರವುಳ್ಳವರಾಗಿರುವರು.

೮೧. ತ್ರೇತಾಯುಗದಲ್ಲಿ ಯಜ್ಞ, ದಾನ, ತಪಸ್ಸು, ಸತ್ಯ ಇವುಗಳು ಮುಖ್ಯವಾದ ಧರ್ಮವಾಗಿದೆ. ತ್ರೇತಾಯುಗದಲ್ಲಿ ವರ್ಣಾಶ್ರಮವಿಭಾಗಪೂರ್ವಕ ಧರ್ಮಗಳು ಪ್ರಾರಂಭವಾಗುವುವು.

೮೨. ಪ್ರಜೆಗಳ ಸ್ಥಿತಿಗತಿಗಳನ್ನು ಕ್ರಮಪಡಿಸುವುದಕ್ಕಾಗಿ ದಂಡನೀತಿಯು ಪ್ರಾರಂಭವಾಯಿತು. ಸಮಸ್ತಪ್ರಜೆಗಳೂ ಹೃಷ್ಟಪುಷ್ಟಾಂಗರಾಗಿಯೂ, ನೀರೋಗಿಗಳಾಗಿಯೂ, ಪೂರ್ಣಮನೋರಥರಾಗಿಯೂ ಇರುವರು.

೮೩. ತ್ರೇತಾಯುಗದಲ್ಲಿ ಒಂದೇ ವೇದವಿತ್ತು. ಅದಕ್ಕೆ ನಾಲ್ಕುಪಾದಗಳಿದ್ದುವು. ಆಗ ಪುರುಷರು ಮೂರುಸಾವಿರ ವರ್ಷಗಳು ಸುಖವಾಗಿ ಜೀವಿಸುತ್ತಿದ್ದರು.

೮೪. ತ್ರೇತಾಯುಗದಲ್ಲಿ ಪ್ರಜೆಗಳು ಪುತ್ರಪೌತ್ರಸಮೇತರಾಗಿ ಬಹುಕಾಲ ಸುಖವಾಗಿ ಜೀವಿಸಿ ಅನಂತರ ಮೃತರಾಗುವರು. ಇದೇ ತ್ರೇತಾಯುಗದ ಧರ್ಮವು. ಈಗ ತ್ರೇತಾಯುಗದ ಸಂಧಿಧರ್ಮವನ್ನು ಹೇಳುವೆನು ಕೇಳಿರೆಂದನು.

ತ್ರೇತಾಯುಗಸ್ವಭಾವಸ್ತು ಸಂಧ್ಯಾ ಪಾದೇನ ವರ್ತತೇ ।
ಸಂಧ್ಯಾಯಾಂ ವೈ ಸ್ವಭಾವಸ್ತು ಯುಗಪಾದೇನ ತಿಷ್ಠತಿ ॥ ೮೫ ॥

॥ ಶಾಂಶಪಾಯನ ಉವಾಚ ॥

ಕಥಂ ತ್ರೇತಾಯುಗ ಮುಖೇ ಯಜ್ಞಸ್ಯಾಸೀತ್ಪ್ರವರ್ತನಂ ।
ಪೂರ್ವಂ ಸ್ವಾಯಂಭುವೇ ಸರ್ಗೇ ಯಥಾವತ್ತದ್ಬ್ರವೀಹಿ ಮೇ ॥ ೮೬ ॥

ಅಂತರ್ಹಿತಾಯಾಂ ಸಂಧ್ಯಾಯಾಂ ಸಾರ್ಧ್ದಂ ಕೃತಯುಗೇನ ವೈ ।
ಕಲಾಖ್ಯಾಯಾಂ ಪ್ರವೃತ್ತಾಯಾಂ ಪ್ರಾಪ್ತೇ ತ್ರೇತಾಯುಗೇ ತದಾ ॥
ವರ್ಣಾಶ್ರಮವ್ಯವಸ್ಥಾನಂ ಕೃತವಂತಶ್ಚ ವೈ ಪುನಃ ॥ ೮೭ ॥

ಸಂಭಾರಾಂಸ್ತಾಶ್ಚ ಸಂಭೃತ್ಯ ಕಥಂ ಯಜ್ಞಃ ಪ್ರವರ್ತಿತಃ ।
ಏತಚ್ಛ್ರುತ್ವಾಽಬ್ರವೀತ್ಸೂತಃ ಶ್ರೂಯತಾಂ ಶಾಂಶಪಾಯನ ॥ ೮೮ ॥

---

೮೫. ತ್ರೇತಾಯುಗದ ಸ್ವಭಾವವು ಸಂಧಿಕಾಲದಲ್ಲಿ ಒಂದುಭಾಗ ಮಾತ್ರ ವಿರುವುವು. ತ್ರೇತಾಯುಗದ ಧರ್ಮಗಳು ಸಂಧ್ಯಾಂಶಕಾಲದಲ್ಲಿ ಒಂದುಪಾದದಷ್ಟು ಮಾತ್ರ ಉಳಿಯುವುದು.

೮೬. ಶಾಂಶಪಾಯನಮುನಿಯು ಹೇಳಿದನು:—ಸ್ವಾಯಂಭುವಮನ್ವಂತರದ ತ್ರೇತಾಯುಗದ ಆದಿಯಲ್ಲಿ ಯಜ್ಞಪ್ರವರ್ತನೆಯು ಹೇಗೆ ಪ್ರಾರಂಭವಾಯಿತು. ಈ ವಿಷಯವನ್ನು ಯಥಾಸ್ಥಿತವಾಗಿ ನನಗೋಸ್ಕರ ತಿಳಿಸಬೇಕೆಂದು ವಾಯುದೇವ ನನ್ನು ಕೇಳಿದನು.

೮೭. ಕೃತಯುಗದ ಸಂಧಿಕಾಲವು ಕೃತಯುಗದೊಡನೆಯೇ ಕಳೆದುಹೋಗಲು ಕಲಾರೂಪಕಾಲವು ಪ್ರಾಪ್ತವಾಗಲು ಆಗ ತ್ರೇತಾಯುಗವು ಪ್ರಾರಂಭವಾಗುವುದು. ಆಗ ಜ್ಞಾನಿಗಳು ವರ್ಣಾಶ್ರಮವಿಭಾಗಗಳನ್ನು ಪುನಃ ಉಜ್ಜೀವನಮಾಡಿದರು.

೮೮. ಯಾಗೋಪಯುಕ್ತವಾದ ಸಾಮಗ್ರಿಗಳನ್ನು ಸೇರಿಸಿ ಯಾಗವು ಯಾವ ಕ್ರಮದಲ್ಲಿ ಆರಂಭವಾಯಿತು ತಿಳಿಸಬೇಕೆಂದು ಕೇಳಲು, ಆಗ ಶಾಂಶಪಾಯನರೇ ಕೇಳಿ ಎಂದು ಸೂತಪುರಾಣಿಕನು ಹೇಳಿದನು.

ಯಥಾ ತ್ರೇತಾಯುಗಮುಖೇ ಯಜ್ಞಸ್ಯಾಸೀತ್ಪ್ರವರ್ತನಂ ।
ಓಷಧೀಷು ಚ ಜಾತಾಸು ಪ್ರವೃತ್ತೇ ವೃಷ್ಟಿಸರ್ಜನೇ ।
ಪ್ರತಿಷ್ಠಿತಾಯಾಂ ವಾರ್ತಾಯಾಂ ಗೃಹಾಶ್ರಮಪುರೇಷು ಚ ॥ ೮೯ ॥

ವರ್ಣಾಶ್ರಮವ್ಯವಸ್ಥಾನಂ ಕೃತ್ವಾ ಮಂತ್ರಾಶ್ಚ ಸಂಹಿತಾಂ ।
ಮಂತ್ರಾನ್ ಸಂಯೋಜಯಿತ್ವಾಥ ಇಹಾಮಾತ್ರೇಷು ಕರ್ಮಸು ॥ ೯೦ ॥

ತಥಾ ವಿಶ್ವಭುಗಿಂದ್ರಸ್ತು ಯಜ್ಞಂ ಪ್ರಾವರ್ತಯತ್ತದಾ ।
ದೈವತೈಃ ಸಹಿತಃ ಸರ್ವೈಃ ಸರ್ವಸಂಭಾರಸಂಭೃತಂ ॥ ೯೧ ॥

ಅಥಾಶ್ವಮೇಧೇ ವಿತತೇ ಸಮಾಜಗ್ಮುರ್ಮಹರ್ಷಯಃ ।
ಯಜಂತೇ ಪಶುಭಿರ್ಮೇಧ್ಯೈಃ ಹುತ್ವಾ ಸರ್ವೇ ಸಮಾಗತಾಃ ॥ ೯೨ ॥

---

೮೯. ತ್ರೇತಾಯುಗದ ಪ್ರಾರಂಭದಲ್ಲಿ ಯಜ್ಞವು ಹೇಗೆ ಆಯಿತೆಂದರೆ ವೃಷ್ಟಿಯು ಪ್ರಾರಂಭವಾಗಲು ಭೂಮಿಯಲ್ಲಿ ಯಾಗೋಪಯುಕ್ತಗಳಾದ ಅನೇಕ ಓಷಧಿಗಳು ಜನ್ಯವಾದುವು.

೯೦. ಆಗ ಅನೇಕ ನಗರ, ಗ್ರಾಮ, ಗೃಹಾಶ್ರಮಾದಿಗಳಲ್ಲಿ ವ್ಯಾಪಾರಕ್ಕೆ ಪ್ರಾರಂಭವಾಗಿ ವರ್ಣಾಶ್ರಮವ್ಯವಸ್ಥೆಯನ್ನೂ, ಮಂತ್ರಸಂಹಿತಾದಿಭಾಗಗಳನ್ನೂ, ಅಂತಹ ಮಂತ್ರಗಳನ್ನು ಇಹಪರಕರ್ಮಗಳಿಗೆ ಉಪಯೋಗವಾಗುವಂತೆಯೂ ಏರ್ಪಡಿಸಿದರು.

೯೧-೯೨. ಆಗ ದೇವೋತ್ತಮನಾದ ಇಂದ್ರನು ಸಮಸ್ತ ದೇವತೆಗಳಿಂದ ಕೂಡಿ, ಸರ್ವಸಾಮಗ್ರಿಗಳನ್ನು ಏರ್ಪಡಿಸಿಕೊಂಡು, ಅಶ್ವಮೇಧಯಾಗವನ್ನು ಮಾಡಲು ಆರಂಭಿಸಿದನು.. ಆ ಅಶ್ವಮೇಧಯಾಗವು ಲೋಕವಿಖ್ಯಾತವಾಗಲು ಸರ್ವ ಮಹರ್ಷಿಗಳೂ ಬಂದರು. ದೇವೇಂದ್ರನು ಪವಿತ್ರವಾದ ಯಾಗವನ್ನು ಮಾಡುತ್ತಾನೆಂದು ತಿಳಿದು ಸಮಸ್ತ ಜನರೂ ಅಲ್ಲಿಗೆ ಬಂದು ಸೇರಿದರು.

ಕರ್ಮಣ್ಯಗ್ರೇಷು ಋತ್ವಿಕ್ಷು ಸತತೇ ಯಜ್ಞಕರ್ಮಣಿ ।
ಸಂಪ್ರಗೀತೇಷು ತೇಷ್ವೇವಮಾಗಮೇಷ್ವಥ ಸತ್ವರಂ ॥ ೯೩ ॥

ಪರಿಕ್ರಾಂತೇಷು ಲಘುಷು ಅಧ್ವರ್ಯುರ್ವೃಷಭೇಷು ಚ ।
ಆಲಬ್ಧೇಷು ಚ ಮಧ್ಯೇಷು ತಥಾ ಪಶುಗಣೇಷು ವೈ ॥ ೯೪ ॥

ಹವಿಷ್ಯಗ್ನೌ ಹೂಯಮಾನೇ ದೇವಾನಾಂ ದೇವಹೋತೃಭಿಃ ।
ಆಹೂತೇಷು ಚ ದೇವೇಷು ಯಜ್ಞಭಾಕ್ಷು ಯಹಾತ್ಮಸು ॥ ೯೫ ॥

ಯ ಇಂದ್ರಿಯಾತ್ಮಕಾ ದೇವಾ ಯಜ್ಞಭಾಜಸ್ತಥಾ ತು ಯೇ ।
ತಾನ್ ಯಜಂತೇ ತದಾ ದೇವಾಃ ಕಲ್ಪಾದಿಷು ಭವಂತಿ ಯೇ ॥ ೯೬ ॥

ಅಧ್ವರ್ಯವಃ ಪ್ರೈಷಕಾಲೇ ವ್ಯುತ್ಥಿತಾ ಯೇ ಮಹರ್ಷಯಃ ।
ಮಹರ್ಷಯಸ್ತು ತಾನ್ ದೃಷ್ಟ್ವಾ ದೀನಾನ್ ಪಶುಗಣಾನ್ ಸ್ಥಿತಾನ್ ॥
ಪಪ್ರಚ್ಛುರಿಂದ್ರಂ ಸಂಭೂಯ ಕೋಽಯಂ ಯಜ್ಞವಿಧಿಸ್ತವ ॥ ೯೭ ॥

---

೯೩–೯೫. ಆಗ ಋತ್ವಿಕ್ಕುಗಳು ವಿಸ್ತಾರವಾದ ಯಾಗಕರ್ಮದಲ್ಲಿ ಆಸಕ್ತರಾದರು. ಬೇಗನೇ ಸಾಮಗಾನಾದಿಗಳು ಪ್ರಾರಂಭವಾದುವು. ಅಧ್ವರ್ಯುವೇ ಮೊದಲಾದ ಋತ್ವಿಗ್ವರ್ಯರು ಅತಿ ಪವಿತ್ರವಾದ ಪಶ್ವಾಲಂಬನಾದಿಗಳನ್ನು ಮಾಡಲಾಗಿ ದೇವಹೋತರು ಅಗ್ನಿಯಲ್ಲಿ ಹೋಮಮಾಡಿ ದೇವತೆಗಳನ್ನು ಕರೆದರು. ಹೀಗೆ ಆಹೂತರಾದ ದೇವತೆಗಳು ಯಜ್ಞದಲ್ಲಿ ಭಾಗವನ್ನು ವಹಿಸಿಕೊಳ್ಳಲು ಆಸಕ್ತರಾದರು.

೯೬. ತ್ರೇತಾಯುಗದ ಆದಿಯಲ್ಲಿ ಯಾವ ದೇವತೆಗಳು ಇಂದ್ರಿಯಾಭಿಮಾನಿಗಳಾಗಿಯೂ, ಹಿಂದಿನ ಕಲ್ಪಗಳಲ್ಲಿ ಪ್ರಖ್ಯಾತರಾಗಿಯೂ, ಯಜ್ಞಭೋಕ್ತೃಗಳಾಗಿಯೂ ಇದ್ದರೋ ಅವರನ್ನೇ ಪೂಜಿಸುತ್ತಿದ್ದರು.

೯೭-೯೮. ಆ ಯಾಗದಲ್ಲಿ ಅಧ್ವರ್ಯುಗಳು ಪ್ರೈಷ್ಯಕಾಲದಲ್ಲಿ ಪಶ್ವಾಲಂಬನವನ್ನು ಮಾಡಲುಪಕ್ರಮಿಸಿದರು. ಆಗ ಖಿನ್ನವಾಗಿ ನಿಂತಿದ್ದ ಪಶುಗಣಗಳನ್ನು ನೋಡಿದ ಮಹರ್ಷಿಗಳು ಮನಸ್ಸುಕರಗಿ ಒಟ್ಟುಗೂಡಿ ಇಂದ್ರನನ್ನು ಕುರಿತು ಇದೇನು

ಅಧರ್ಮೋ ಬಲವಾನೇಷ ಹಿಂಸಾಧರ್ಮೇಪ್ಸಯಾ ತವ ।
ನೇಷ್ಟಃ ಪಶುವಧಸ್ತ್ವೇಷ ತವ ಯಾಜ್ಞೇ ಸುರೋತ್ತಮ ॥ ೯೮ ॥

ಅಧರ್ಮೋ ಧರ್ಮಘಾತಾಯ ಪ್ರಾರಬ್ಧಃ ಪಶುಭಿಸ್ತ್ವಯಾ ।
ನಾಯಂ ಧರ್ಮೋ ಹ್ಯಧರ್ಮೋಯಂ ನ ಹಿಂಸಾಧರ್ಮ ಉಚ್ಯತೇ ॥ ೯೯ ॥

ಆಗಮೇನ ಭರ್ವಾ ಯಜ್ಞಂ ಕರೋತು ಯದಿಹೇಚ್ಛಸಿ ।
ವಿಧಿದೃಷ್ಟೇನ ಯಜ್ಞೇನ ಧರ್ಮೇನಾವ್ಯಯಹೇತುನಾ ॥
ಯಜ್ಞಬೀಜೈಃ ಸುರಶ್ರೇಷ್ಠ ಯೇಷು ಹಿಂಸಾ ನ ವಿದ್ಯತೇ ॥ ೧೦೦ ॥

ತ್ರಿವರ್ಷ ಪರಮಂ ಕಾಲಮುಷಿತೈರಪ್ರರೋಹಿಭಿಃ ।
ಏಷ ಧರ್ಮೋ ಮಹಾನಿಂದ್ರ ಸ್ವಯಂಭುವಿಹಿತಃ ಪುರಾ ॥ ೧೦೧ ॥

---

ಕಾರ್ಯ! ಪ್ರಾಣಿಹಿಂಸೆಯಾದ ಇದು ಎಂತಹ ಯಜ್ಞವು! ಮಹಾ ಬಲಿಷ್ಠವಾದ ಹಿಂಸಾರೂಪವಾದ ಧರ್ಮವು ಧರ್ಮವಲ್ಲ; ಅಧರ್ಮವೇ ಆಗಿರುತ್ತದೆ. ಎಲೈ ದೇವೇಂದ್ರನೇ, ಈ ನಿನ್ನ ಯಾಗದಲ್ಲಿ ಪಶುವಧವು ಯುಕ್ತವೂ ಜ್ಞಾನಿಗಳಿಗೆ ಸಮ್ಮತವೂ ಅಲ್ಲ.

೯೯. ಈ ನಿನ್ನ ಅಧರ್ಮರೂಪವಾದ ಪಶುಹಿಂಸೆಯಿಂದ ಧರ್ಮನಾಶವೂ ಆಗುವುದಲ್ಲದೇ ಕರ್ಮವಿಘ್ನವೂ ಆಗುವುದು. ಈ ನಿನ್ನ ಕಾರ್ಯವು ಎಂದಿಗೂ ಧರ್ಮವಲ್ಲ. ಅಧರ್ಮವೇ ಆಗಿರುತ್ತದೆ. ಪ್ರಾಣಿಹಿಂಸೆಯು ಎಂದಿಗಾದರೂ ಧರ್ಮವಾಗುವುದೇ ಎಂದರು.

೧೦೦. ಎಲೈ ದೇವೇಂದ್ರನೇ, ನಿನಗೆ ಯಾಗಮಾಡಲು ಇಚ್ಛೆಯಿದ್ದರೆ ಶಾಸ್ತ್ರೋಕ್ತವಾದ ಯಾಗವನ್ನು ಮಾಡು. ಶಾಸ್ತ್ರೋಕ್ತವಾದ ಯಾಗದಿಂದ ನಾಶರಹಿತವಾದ ಧರ್ಮವೇ ಸಂಭವಿಸುವುದು. ಏತರಿಂದ ಪ್ರಾಣಿಹಿಂಸೆಯಿಲ್ಲವೋ ಅಂತಹ ಬೀಜಗಳಿಂದ ಹೋಮವನ್ನು ಮಾಡು. ಇದರಿಂದ ಧರ್ಮವು ಉಂಟಾಗುವುದು ಎಂದರು.

೧೦೧. ಎಲೈ ಇಂದ್ರನೇ, ಬೀಜಗಳು ಹುಟ್ಟಿ ಮೂರುವರ್ಷಗಳಾಗಿರಬೇಕು. ಅವು ಕಷ್ಟದ್ದಾಗಿರಬಾರದು. ಮೊಳಕೆಯನ್ನೂ ಹೊಂದಬಾರದು. ಅಂತಹ ಬೀಜಗಳಿಂದ ಹೋಮ ಹಾಡಿದರೆ ಯಾವವಿಧವಾದ ಅಧರ್ಮವೂ ಉಂಟಾಗದೆ ಧರ್ಮವೇ ಉಂಟಾಗುವುದು. ಇದೇ ಪುರಾತನವೂ ಉತ್ತಮವೂ ಆದ ಧರ್ಮವೆಂದು ಹೇಳಿದರು.

ಏವಂ ವಿಶ್ವಭುಗಿಂದ್ರಸ್ತು ಮುನಿಭಿಸ್ತತ್ವದರ್ಶಿಭಿಃ ।
ಜಂಗಮೈಃ ಸ್ಥಾವರೈರ್ವೇತಿ ಕೈರ್ಯಷ್ಟವ್ಯಮಿಹೋಚ್ಯತೇ ॥ ೧೦೨ ॥

ತೇ ತು ಖಿನ್ನಾ ವಿವಾದೇನ ತತ್ವಯುಕ್ತಾ ಮಹರ್ಷಯಃ ।
ಸಂಧಾಯವಾಕ್ಯಮಿಂದ್ರೇಣ ಪಪ್ರಚ್ಛುಶ್ಚೇಶ್ವರಂ ವಸುಂ ॥ ೧೦೩ ॥

॥ ಋಷಯ ಊಚುಃ ॥

ಮಹಾಪ್ರಾಜ್ಞ ಕಥಂ ದೃಷ್ಟಸ್ತ್ವಯಾ ಯಜ್ಞವಿಧಿರ್ನೃಪ ।
ಉತ್ತಾನಪಾದೇ ಪ್ರಬ್ರೂಹಿ ಸಂಶಯಂ ಛಿಂಧಿ ನಃ ಪ್ರಭೋ ॥ ೧೦೪ ॥

ಶ್ರುತ್ವಾ ವಾಕ್ಯಂ ತತಸ್ತೇಷಾಮವಿಚಾರ್ಯ ಬಲಾಬಲಂ ।
ವೇದಶಾಸ್ತ್ರಮನುಸ್ಮೃತ್ಯ ಯಜ್ಞತತ್ವಮುವಾಚ ಹ ॥
ಯಥೋಪದಿಷ್ಟೈರ್ಯಷ್ಟವ್ಯಮಿತಿಹೋವಾಚ ಪಾರ್ಥಿವಃ ॥ ೧೦೫ ॥

---

೧೦೨. ತತ್ವಜ್ಞಾನಿಗಳಾದ ಮುನಿಗಳು ಹೀಗೆ ಹೇಳಲಾಗಿ ವಿಶ್ವಪಾಲಕನಾದ ದೇವೇಂದ್ರನು ಎಲೈ ಮುನಿವರ್ಯರೇ, ಹಾಗಾದರೆ ಚರಾಚರಾತ್ಮಕವಾದ ಈ ಜಗತ್ತಿನಲ್ಲಿರುವ ಯಾವ ವಸ್ತುಗಳಿಂದ ಯಾಗವನ್ನು ಮಾಡಬೇಕು. ಯಾವದು ಧರ್ಮವೆಂದು ಕೇಳಿದನು.

೧೦೩. ಆಗ ತತ್ವಜ್ಞಾನಿಗಳಾದ ಮಹರ್ಷಿಗಳು ಈ ವಿವಾದದಿಂದ ಖಿನ್ನರಾಗಿ ದೇವೇಂದ್ರನೊಡನೆ ವಸುಚಕ್ರವರ್ತಿಯ ಬಳಿಗೆ ಬಂದು ಇಂತೆಂದರು.

೧೦೪. ಋಷಿಗಳು ಹೇಳಿದರು:— ಮಹಾಪ್ರಾಜ್ಞನೂ, ಉತ್ತಾನಪಾದನ ಪುತ್ರನೂ ಆದ ಎಲೈ ಪ್ರಭುವೇ, ಯಜ್ಞವೆಂದರೇನು ? ಅಲ್ಲಿಯ ಕ್ರಮ ಯಾವುದು? ಪ್ರಾಣಿಹಿಂಸೆಯು ಉಂಟೇ ಅಥವಾ ಇಲ್ಲವೇ ? ಪೂರ್ವದಲ್ಲಿ ಯಾವರೀತಿಯಾಗಿ ನಡೆದಿದೆ ? ನಿನಗೇನು ತಿಳಿದಿದೆಯೆಂದು ಕೇಳಿದರು.

೧೦೫. ಅನಂತರ ಆ ವಸುಮಹಾರಾಜನು ಮಹರ್ಷಿಗಳ ಆ ಮಾತುಗಳನ್ನು ಕೇಳಿ, ಯುಕ್ತಾಯುಕ್ತವನ್ನು ಆಲೋಚಿಸಿ, ವೇದಶಾಸ್ತ್ರಗಳಿಗನುಗುಣವಾಗಿ ಯಜ್ಞದ ತತ್ವವನ್ನು ಮಹರ್ಷಿಗಳಿಗೆ ತಿಳಿಸಿದನು. ವೇದಶಾಸ್ತ್ರೋಕ್ತರೀತಿಯಲ್ಲಿ ಯಜ್ಞವನ್ನು ಮಾಡಬೇಕೆಂದು ಸಾಮಾನ್ಯವಾಗಿ ಮೊದಲು ತಿಳಿಸಿದನು.

ಯಷ್ಟವ್ಯಂ ಪಶುಭಿರ್ಮೇಧ್ಯೈರಥ ಬೀಜೈಃ ಫಲೈಸ್ತಥಾ ।
ಹಿಂಸಾಸ್ವಭಾವೋ ಯಜ್ಞಸ್ಯ ಇತಿ ಮೇ ದರ್ಶಯತ್ಯಸೌ ॥ ೧೦೬ ॥

ಯಥೇಹಂ ಸಂಹಿತಾಮಂತ್ರಾ ಹಿಂಸಾಲಿಂಸಾ ಮಹರ್ಷಿಭಿಃ ।
ದೀರ್ಘೇಣ ತಪಸಾ ಯುಕ್ತೈರ್ದರ್ಶನೈಸ್ತಾರಕಾದಿಭಿಃ ॥
ತತ್ಪ್ರಮಾಣ್ಯಾನ್ಮಯಾ ಚೋಕ್ತಂ ತಸ್ಮಾತ್ಸ್ಮಾ ಮಂತುಮರ್ಹಥ ॥ ೧೦೭ ॥

ಯದಿ ಪ್ರಮಾಣಂ ತಾನ್ಯೇವ ಮಂತ್ರವಾಕ್ಯಾನಿ ವೈ ದ್ವಿಜಾಃ ।
ತದಾ ಪ್ರವರ್ತತಾಂ ಯಜ್ಞೋ ಹ್ಯನ್ಯಥಾನೋಽನೃತಂ ವಚಃ ॥
ಏವಂ ಹ್ಯತೋತ್ತರಾಸ್ತೇ ವೈ ಯುಕ್ತಾತ್ಮಾನಸ್ತಪೋಧನಾಃ ॥ ೧೦೮ ॥

ಅಧಶ್ಚ ಭವನಂ ದೃಷ್ಟ್ವಾ ತಮೂರ್ಧ್ವಂ ವಾಗ್ಯತೋ ಭವ ।
ಮಿಥ್ಯಾವಾದೀ ನೃಪೋ ಯಸ್ಮಾತ್ ಪ್ರವಿವೇಶ ರಸಾತಲಂ ॥ ೧೦೯ ॥

---

೧೦೬. ಪರಿಶುದ್ಧವಾದ ಪಶುಗಳಿಂದಲೂ, ದವಸಧಾನ್ಯಗಳಿಂದಲೂ, ಫಲಗಳಿಂದಲೂ ಹೋಮವನ್ನು ಮಾಡಬೇಕು. ಒಟ್ಟಿನಲ್ಲಿ ಯಾಗವು ಹಿಂಸಾಸ್ವಭಾವವೆಂದು ನನಗೆ ತೋರುತ್ತಿದೆ ಎಂದು ಹೇಳಿದನು.

೧೦೭. ವೇದಸಂಹಿತಾಮಂತ್ರಗಳು ಹಿಂಸಾಲಿಂಗಕಗಳಾಗಿ ಕಾಣುತ್ತಿವೆ. ತಾರಕಾದಿ ಮಹರ್ಷಿಗಳು ದೀರ್ಘತಪಸ್ಸಿನಿಂದಲೂ, ಶಾಸ್ತ್ರಗಳ ಯುಕ್ತಿಗಳಿಂದಲೂ ಆಲೋಚಿಸಿ ಯಾವ ತತ್ತ್ವವನ್ನು ಹೇಳಿದರೋ, ಅದರ ಆಧಾರದ ಮೇಲೆ ನಾನು ಹೀಗೆ ಹೇಳಿರುತ್ತೇನೆ. ಇದರಲ್ಲೇನಾದರೂ ಅಪರಾಧವಿದ್ದರೆ ಕ್ಷಮಿಸಬೇಕೆಂದು ಹೇಳಿದನು.

೧೦೮. ಎಲೈ ಮುನಿವರ್ಯರೇ, ಆ ವೇದವಾಕ್ಯಗಳು, ಮಂತ್ರಗಳು ಪ್ರಮಾಣವಾಗಿದ್ದರೆ ಆಗ ಯಜ್ಞವನ್ನು ಮಾಡಿ. ಹಾಗಿಲ್ಲದಿದ್ದರೆ ನಮ್ಮ ಮಾತು ಸುಳ್ಳಾಗುವುದು ಎಂದು ಆ ರಾಜನು ಆ ಋಷಿಗಳಿಗೆ ಹೇಳಿದನು. ಆ ರಾಜನು ಹೀಗೆ ಹೇಳಲು, ದತ್ತೋತ್ತರರಾದ ತಪೋಧನರು ಯುಕ್ತಾಯುಕ್ತವಿಚಾರವನ್ನು ಮಾಡಿದರು.

೧೦೯-೧೧೦. ಅನಂತರ ಮಹರ್ಷಿಗಳು ಆಲೋಚಿಸಿ ಅಧೋಲೋಕವನ್ನು ನೋಡಿ ಎಲೈ ರಾಜನೇ, ನೀನು ಹೇಳಿದ ಮಾತಿಗೆ ತಕ್ಕ ಫಲವನ್ನು ಅನುಭವಿಸು.

ಇತ್ಯುಕ್ತಮಾತ್ರೇ ನೃಪತಿಃ ಪ್ರವಿವೇಶ ರಸಾತಲಂ ।
ಊರ್ಧ್ವಚಾರೀ ವಸುರ್ಭೂತ್ವಾ ರಸಾತಲಚರೋಽಭವತ್ ॥ ೧೧೦ ॥

ವಸುಧಾತಲವಾಸೀ ತು ತೇನ ವಾಕ್ಯೇನ ಸೋಽಭವತ್ ।
ಧರ್ಮಾಣಾಂ ಸಂಶಯಚ್ಛೇತ್ತಾ ರಾಜಾ ವಸುರಥಾಗತಃ ॥ ೧೧೧ ॥

ತಸ್ಮಾನ್ನ ವಾಚ್ಯಮೇಕೇನ ಬಹುಜ್ಞೇನಾಪಿ ಸಂಶಯಃ ।
ಬಹೂದ್ಧಾರಸ್ಯ ಧರ್ಮಸ್ಯ ಸೂಕ್ಷ್ಮಾ ದುರ್ಗತಿಃ ರಮುಪಾಗತಿಃ ॥ ೧೧೨ ॥

ತಸ್ಮಾನ್ನ ನಿಶ್ಚಯಾದ್ವಕ್ತುಂ ಧರ್ಮಃ ಶಕ್ಯಸ್ತು ಕೇನಚಿತ್ ।
ದೇವಾನೃಷೀನುಪಾದಾಯ ಸ್ವಾಯಂಭುವಮೃತೇ ಮನುಂ ॥ ೧೧೩ ॥

---

ನೀನೀ ಸುಳ್ಳನ್ನು ಹೇಳಿದ್ದರಿಂದ ಪಾತಾಳಲೋಕಕ್ಕೆ ಹೋಗು. ಇಲ್ಲಿರಲು ಅರ್ಹನಲ್ಲ ವೆಂದು ಹೇಳಿದ ಮಾತ್ರಕ್ಕೆ ರಾಜನು ಪಾತಾಳವನ್ನು ಪ್ರವೇಶಿಸಿದನು. ಅನಂತರ ಊರ್ಧ್ವಚಾರಿಯಾದ ವಸುವಾಗಿ ಪಾತಾಳವನ್ನು ಪ್ರವೇಶಿಸಿದನು.

೧೧೧. ಆ ಮಹರ್ಷಿಗಳ ಶಾಪದಿಂದ ಭೂತಲವಾಸಿಯಾದ ವಸುಮಹಾ ರಾಜನು ಧರ್ಮದ ಸಂಶಯವನ್ನು ಪರಿಹರಿಸಿದ್ದರಿಂದ ಪಾತಾಳಲೋಕಕ್ಕೆ ಒಂದನೆಂಬ ಜನಪ್ರವಾದವುಂಟಾಯಿತು.

೧೧೨. ಆದುದರಿಂದ ಯಾವ ಪುರುಷನೂ ಅನೇಕ ಯಜ್ಞಗಳನ್ನು ಮಾಡಿದ್ದರೂ ಕೂಡ ಅನೇಕರಿಗೆ ಬಂದ ಸಂಶಯವನ್ನು ಪರಿಹರಿಸಬಾರದು. ಅನೇಕರಿಂದ ಆಚರಿಸಿದ ಧರ್ಮವು ಬಹುಸೂಕ್ಷ್ಮವಾಗಿರುವುದರಿಂದ ಅಂತಹ ವಿಷಯಗಳಲ್ಲಿ ಮೌನವೇ ಉತ್ತಮವಾಗಿರುವುದು.

೧೧೩. ಆದುದರಿಂದ ಧರ್ಮದ ವಿಷಯದಲ್ಲಿ ಯಾವನೊಬ್ಬನೂ ಹೀಗೆ ಸರಿಯೆಂದು ಹೇಳಲು ಶಕ್ತನಲ್ಲ. ಆದರೆ ಸ್ವಾಯಂಭುವಮನುವನ್ನು ಬಿಟ್ಟರೆ ದೇವತೆಗಳು, ಋಷಿಗಳು ಇವರ ವಿಷಯದಲ್ಲಿ ಹೀಗೆಯೇ ಸರಿಯೆಂದು ಧರ್ಮದ ವಿಷಯದಲ್ಲಿ ಹೇಳಲು ಶಕ್ತಿಯು ಇರುವುದಿಲ್ಲ.

ತಸ್ಮಾನ್ನ ಹಿಂಸಾ ಧರ್ಮಸ್ಯ ದ್ವಾರಮುಕ್ತಂ ಮಹರ್ಷಿಭಿಃ ।
ಋಷಿಕೋಟಿಸಹಸ್ರಾಣಿ ಕರ್ಮಭಿಃ ಸ್ವೈರ್ದಿವಂ ಯಯುಃ ॥ ೧೧೪ ॥

ತಸ್ಮಾನ್ನ ದಾನಂ ಯಜ್ಞಂ ವಾ ಪ್ರಶಂಸಂತಿ ಮಹರ್ಷಯಃ ।
ತುಚ್ಛಂ ಮೂಲಂ ಫಲಂ ಶಾಕಮುದಪಾತ್ರಂ ತಪೋಧನಾಃ ॥
ಏವಂ ದತ್ವಾ ವಿಭವತಃ ಸ್ವರ್ಗಲೋಕೇ ಪ್ರತಿಷ್ಠಿತಾಃ ॥ ೧೧೫ ॥

ಅದ್ರೋಹಶ್ಚಾಪ್ಯಲೋಭಶ್ಚ ದಮೋ ಭೂತದಯಾ ತಪಃ ।
ಬ್ರಹ್ಮಚರ್ಯಂ ತಥಾ ಸತ್ಯಮನುಕ್ರೋಶಃ ಕ್ಷಮಾ ಧೃತಿಃ ॥
ಸನಾತನಸ್ಯ ಧರ್ಮಸ್ಯ ಮೂಲಮೇತದ್ದುರಾಸದಂ ॥ ೧೧೬ ॥

ಧರ್ಮಮಂತ್ರಾತ್ಮಕೋ ಯಜ್ಞಸ್ತಪಶ್ಚಾನಶನಾತ್ಮಕಂ ।
ಯಜ್ಞೇನ ದೇವಾನಾಪ್ನೋತಿ ವೈರಾಗ್ಯಂ ತಪಸಾ ಪುನಃ ॥ ೧೧೭ ॥

---

೧೧೪. ಆದುದರಿಂದ ಧರ್ಮಕ್ಕೆ ಹಿಂಸೆಯೇ ಕಾರಣವೆಂದು ಹೇಳಲು ಸಾಧ್ಯವಿಲ್ಲ. ಹಿಂಸಾಮೂಲಕವೇ ಧರ್ಮವನ್ನು ಸಂಪಾದಿಸಬೇಕೆಂಬ ನಿಯಮವಿಲ್ಲ. ಕೋಟ್ಯಂತರ ಮಹರ್ಷಿಗಳು ತಪಸ್ಸೇ ಮೊದಲಾದ ಹಿಂಸಾರಹಿತವಾದ ಕರ್ಮಗಳಿಂದ ಸ್ವರ್ಗಲೋಕವನ್ನು ಹೊಂದಿರುತ್ತಾರೆ.

೧೧೫. ಆದುದರಿಂದ ಮಹರ್ಷಿಗಳು ಹಿಂಸಾಸಹಿತವಾದ ದಾನ ಮತ್ತು ಯಜ್ಞ ಇವುಗಳನ್ನು ಶ್ಲಾಘಿಸುವುದಿಲ್ಲ. ತಪೋಧನರಾದ ಮುನಿಗಳು ಫಲ, ಮೂಲ, ಶಾಕ, ಉದಕಪಾತ್ರೆ ಇವನ್ನು ತುಚ್ಛವೆನ್ನುತ್ತಾರೆ. ಹೀಗೆ ಅಹಿಂಸಾರೂಪವಾದ ದಾನ ತಪಸ್ಸೇ ಮೊದಲಾದುವುಗಳಿಂದ ಸ್ವರ್ಗಸುಖವನ್ನು ಹೊಂದಿರುವರು.

೧೧೬. ಸನಾತನವಾದ ಧರ್ಮಕ್ಕೆ ಅದ್ರೋಹ, ಅಲೋಭ, ದಮ, ಭೂತದಯಾ, ತಪಸ್ಸು, ಬ್ರಹ್ಮಚರ್ಯ, ಸತ್ಯ, ದಯಾ, ಕ್ಷಮ, ಧೈರ್ಯ ಇವುಗಳು ಮುಖ್ಯಕಾರಣವಾಗಿವೆ.

೧೧೭-೧೧೮. ಯಾಗವು ಧರ್ಮಮಂತ್ರರೂಪವಾಗಿರುತ್ತದೆ. ತಪಸ್ಸು ಅನಶನರೂಪವಾಗಿದೆ. ಯಜ್ಞದಿಂದ ಸ್ವರ್ಗವನ್ನೂ, ತಪಸ್ಸಿನಿಂದ ವೈರಾಗ್ಯವನ್ನೂ,

**ಬ್ರಾಹ್ಮಣ್ಯಂ ಕರ್ಮ ಸಂನ್ಯಾಸಾದ್ವೈರಾಗ್ಯಾತ್ ಪ್ರೇಕ್ಷತೇ ಲಯಂ ।**
**ಜ್ಞಾನಾತ್ ಪ್ರಾಪ್ನೋತಿ ಕೈವಲ್ಯಂ ಪಂಚೈತಾ ಗತಯಃ ಸ್ಮೃತಾಃ ॥ ೧೧೮ ॥**

**ಏವಂ ವಿವಾದಃ ಸುಮಹಾನ್ ಯಜ್ಞಸ್ಯಾಸೀತ್ ಪ್ರವರ್ತನೇ ।**
**ಋಷೀಣಾಂ ದೇವತಾನಾಂ ಚ ಪೂರ್ವಂ ಸ್ವಾಯಂಭುವೇಽಂತರೇ ॥ ೧೧೯ ॥**

**ತತಸ್ತೇ ಋಷಯೋ ದೃಷ್ಟ್ವಾಽದ್ಭುತಂ ವರ್ತ್ಮ ಬಲೇನ ತು ।**
**ವಸೋರ್ವಾಕ್ಯಮನಾದೃತ್ಯ ಜಗ್ಮುಸ್ತೇ ವೈ ಯಥಾಗತಾಃ ॥ ೧೨೦ ॥**

**ಗತೇಷು ದೇವಸಂಗೇಷು ದೇವಾ ಯಜ್ಞಮವಾಪ್ನುಯುಃ ।**
**ಶ್ರೂಯಂತೇ ಹಿ ತಪಃಸಿದ್ಧಾ ಬ್ರಹ್ಮಕ್ಷತ್ರಮಯಾ ನೃಪಾಃ ॥ ೧೨೧ ॥**

---

ಕರ್ಮಸನ್ಯಾಸದಿಂದ ಬ್ರಾಹ್ಮಣ್ಯವನ್ನೂ, ವೈರಾಗ್ಯದಿಂದ ಲಯವನ್ನೂ, ಜ್ಞಾನದಿಂದ ಮೋಕ್ಷವನ್ನೂ ಪಡೆಯಬೇಕು. ಮೇಲೆ ನಿರೂಪಿಸಿದ ಯಜ್ಞಾದಿಪಂಚಗಳೂ ಸ್ವರ್ಗಾದಿಗಳಿಗೆ ಮಾರ್ಗಗಳಾಗಿವೆಯೆಂದು ಜ್ಞಾನಿಗಳು ಹೇಳುವರು.

೧೧೯. ಪೂರ್ವದ ಸ್ವಾಯಂಭುವಮನ್ವಂತರದಲ್ಲಿ ದೇವತೆಗಳಿಗೂ, ಮಹರ್ಷಿಗಳಿಗೂ ಯಾಗವನ್ನು ನಡೆಸುವ ವಿಷಯದಲ್ಲಿ ಅತಿಮಹತ್ತಾದ ವಿವಾದವು ಉಂಟಾಯಿತು.

೧೨೦. ಅನಂತರ ಮಹರ್ಷಿಗಳು ತಮ್ಮ ಶಕ್ತಿಯಿಂದ ನಿಃಶ್ರೇಯಸ್ಸಿಗೆ ಉತ್ತಮವಾದಮಾರ್ಗವನ್ನು ತಿಳಿದುಕೊಂಡು ಆ ವಸುಮಹಾರಾಜನ ಮಾತನ್ನು ಅನಾದರಿಸಿ ತಾವು ಬಂದ ಮಾರ್ಗವನ್ನು ಹಿಡಿದು ಹೊರಟುಹೋದರು.

೧೨೧. ದೇವತೆಗಳು ಸಂಘಗಳು ಹೋದಮೇಲೆ ದೇವತೆಗಳು ಯಾಗವನ್ನು ಮಾಡಿದರು. ಬ್ರಾಹ್ಮಣ, ಕ್ಷತ್ರಿಯರೇ, ಮೊದಲಾದ ಅನೇಕ ರಾಜರು ತಪಸ್ಸಿನಿಂದಲೇ ಮಹಾಸಿದ್ಧಿಯನ್ನು ಹೊಂದಿದರು ಎಂದು ಪ್ರಖ್ಯಾತವಾಗಿದೆ.

ಪ್ರಿಯವ್ರತೋತ್ತಾನಪಾದೌ ಧ್ರುವೋ ಮೇಧಾತಿಥಿರ್ವಸುಃ ।
ಸುಮೇಧಾ ವಿರಜಾಶ್ಚೈವ ಶಂಖಪಾದ್ರಜ ಏವ ಚ ।
ಪ್ರಾಚೀನಬರ್ಹಿಃ ಪರ್ಜನ್ಯೋ ಹವಿರ್ಧಾನಾದಯೋ ನೃಪಾಃ ॥ ೧೨೨ ॥

ಏತೇ ಚಾನ್ಯೇ ಚ ಬಹವೋ ನೃಪಾಃ ಸಿದ್ಧಾ ದಿವಂಗತಾಃ ।
ರಾಜರ್ಷಯೋ ಮಹಾಸತ್ವಾ ಯೇಷಾಂ ಕೀರ್ತಿಃ ಪ್ರತಿಷ್ಠಿತಾ ॥ ೧೨೩ ॥

ತಸ್ಮಾದ್ವಿಶಿಷ್ಯತೇ ಯಜ್ಞಾತ್ತಪಃ ಸರ್ವೇಷು ಕಾರಣೈಃ ।
ಬ್ರಹ್ಮಣಾ ತಪಸಾ ಸೃಷ್ಟಂ ಜಗದ್ವಿಶ್ವಮಿದಂ ಪುರಾ ॥ ೧೨೪ ॥

---

೧೨೨. ಪ್ರಿಯವ್ರತೋತ್ತಾನಪಾದರು ಧ್ರುವ, ಮೇಧಾತಿಥಿ, ವಸು, ಸುಮೇಧಸ, ವಿರಜ, ಶಂಖಪಾದ್ರಜ, ಪ್ರಾಚೀನಬರ್ಹಿ, ಪರ್ಜನ್ಯ. ಹವಿರ್ದಾನ ಇವರು ಇನ್ನೂ ಅನೇಕ ಮಹಾರಾಜರೂ ಸಹ ತಪಸ್ಸಿದ್ಧಿಯಿಂದ ಸ್ವರ್ಗಾದಿಮಹಾ ಲೋಕಗಳಿಗೆ ಹೋಗಿರುತ್ತಾರೆಂದು ಪ್ರಖ್ಯಾತವಾಗಿಯೇ ಇದೆ.

೧೨೩. ಮಹಾಸತ್ವವಂತರೂ, ಪ್ರಖ್ಯಾತರೂ ಆದ ಅನೇಕ ರಾಜರು ತಮ್ಮ ತಪೋಮಹಿಮೆಯಿಂದ ಸ್ವರ್ಗಾದಿ ಲೋಕಗಳನ್ನು ಪಡೆದಿರುತ್ತಾರೆ. ಅವರ ಕೀರ್ತಿಯೂ ಸಹ ಲೋಕಗಳಲ್ಲಿ ವ್ಯಾಪ್ತವಾಗಿದೆ.

೧೨೪. ಮುನಿವರ್ಯರೇ, ಆದುದರಿಂದ ಯಾಗಕ್ಕಿಂತಲೂ ತಪಸ್ಸು ಅನೇಕ ಕಾರಣಗಳಿಂದ ಕೋಟಿಪಾಲು ಉತ್ತಮವಾಗಿದೆ. ಪೂರ್ವದಲ್ಲಿ ಬ್ರಹ್ಮದೇವನು ತಪಸ್ಸನ್ನು ಮಾಡಿ ಆ ತಪಶ್ಶಕ್ತಿಯಿಂದ ಈ ಚರಾಚರಾತ್ಮಕವಾದ ಸಮಸ್ತ ಜಗತ್ತನ್ನೂ ಸೃಷ್ಟಿಸಿರುವನು.

**ತಸ್ಮಾನ್ನಾತ್ಯೇತಿ ತದ್ಯಜ್ಞಂ ತಪೋ ಮೂಲಮಿದಂ ಸ್ಮೃತಂ ।**
**ಯಜ್ಞಪ್ರವರ್ತನಂ ಹ್ಯೇವಮವತಃ ಸ್ವಾಯಂಭುವೇಂತರೇ ॥**
**ತತಃ ಪ್ರಭೃತಿ ಯಜ್ಞೋಽಯಂ ಯುಗೈಃ ಸಹ ವ್ಯವರ್ತತ ॥ ೧೨೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಯಜ್ಞಪ್ರವರ್ತನಂ ನಾಮ ಸಪ್ತಪಂಚಾಶೋಽಧ್ಯಾಯಃ**

---

೧೨೫. ಆದುದರಿಂದ ಅಂತಹ ಯಜ್ಞವು ಅನೇಕ ಕಾರಣಗಳಿಂದ ತಪಸ್ಸಿಗೆ ಸಮಾನವಲ್ಲ. ಆದುದರಿಂದ ಸ್ವಾಯಂಭುವ ಮನ್ವಂತರದಲ್ಲಿ ಯಜ್ಞವು ಅಂದಿನಿಂದ ಪ್ರವೃತ್ತವಾಯಿತು. ಅಂದಿನಿಂದಲೂ ಯುಗಾನುಸಾರವಾಗಿ ಲೋಕದಲ್ಲಿ ಯಾಗವು ಪ್ರವೃತ್ತವಾಯಿತೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಯಜ್ಞಪ್ರವರ್ತನವೆಂಬ ಐವತ್ತೇಳನೆಯ ಅಧ್ಯಾಯವು ಸಮಾಪ್ತವಾದುದು.

# ಐವತ್ತೇಳನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ನಾಲ್ಕು ಯುಗಗಳು, ತಪಸ್ಸು, ಯಜ್ಞ ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ. ಆದಿಯಲ್ಲಿ ಕಾಷ್ಟ, ಕಲಾ, ಮುಹೂರ್ತ, ಅಹೋರಾತ್ರ, ಪಕ್ಷ, ಮಾಸ, ಋತು, ಅಯನ, ವರ್ಷ ಇವು ವರ್ಣಿತವಾಗಿವೆ. ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳಿವೆ. ಕೃತಯುಗಕ್ಕೆ ದೇವಮಾನದಲ್ಲಿ ನಾಲ್ಕುಸಾವಿರ ವರ್ಷಗಳು ಇರುತ್ತವೆ. ಸಂಧ್ಯಾಂಶಗಳು ಎಂಟುನೂರ ವರ್ಷಗಳು. ತ್ರೇತೆಗೆ ಮೂರುಸಾವಿರ ವರ್ಷವೂ, ಸಂಧ್ಯಾದಿಕಾಲವು ಆರನೂರುವರ್ಷಗಳೂ, ದ್ವಾಪರಕ್ಕೆ ಎರಡುಸಹಸ್ರ ವರ್ಷಗಳೂ, ನಾನ್ನೂರುವರ್ಷಗಳು ಸಂಧಿಕಾಲವು. ಕಲಿಯುಗಕ್ಕೆ ಒಂದುಸಹಸ್ರ ವರ್ಷವೂ, ಸಂಧ್ಯಂಶವು ಇನ್ನೂರುವರ್ಷಗಳೂ ಸಿದ್ಧವಾಗಿದೆ. ಒಂದು ಚತುರ್ಯುಗಕ್ಕೆ ಹನ್ನೆರಡುಸಹಸ್ರ ವರ್ಷಗಳು ಸಿದ್ಧವಾಗಿವೆ. ಯಜ್ಞಯಾಗಾದಿಗಳಿಗಿಂತಲೂ ತಪಸ್ಸೇ ಉತ್ತಮ ಮಾರ್ಗವೆಂದು ವ್ಯಕ್ತವಾಗಿದೆ. ಸಪ್ತರ್ಷಿಸಂವತ್ಸರ, ಕ್ರೌಂಚಸಂವತ್ಸರವೇ ಮೊದಲಾದವು ನಿರೂಪಿತವಾಗಿವೆ. ವರ್ಣಾಶ್ರಮಾಚಾರಗಳೂ, ಚಕ್ರವರ್ತಿಯ ಸ್ವರೂಪವೂ, ಹಿಂಸಾರೂಪವಾದ ಯಾಗಕ್ಕಿಂತಲೂ ಅಹಿಂಸಾರೂಪವಾದ ತಪಸ್ಸೇ ಮೊದಲಾದವು ಮೋಕ್ಷಕ್ಕೆ ಮುಖ್ಯಸಾಧನವೆಂಬ ವಿಷಯವೂ, ವಸುಮಹಾರಾಜನ ಶಾಪವೂ ವರ್ಣಿತವಾಗಿವೆ. ಯಜ್ಞಕ್ಕಿಂತಲೂ ತಪಸ್ಸೇ ಸರ್ವರೀತಿಯಿಂದಲೂ ಉತ್ತಮವೆಂಬ ವಿಷಯವೂ ನಿರೂಪಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಅಷ್ಟಪಂಚಾಶೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ದ್ವಾಪರಸ್ಯ ವಿಧಿಂ ಪುನಃ ।
ತತ್ರ ತ್ರೇತಾಯುಗೇ ಕ್ಷೀಣೇ ದ್ವಾಪರಂ ಪ್ರತಿಪದ್ಯತೇ ॥ ೧ ॥

ದ್ವಾಪರಾದೌ ಪ್ರಜಾನಾಂ ತು ಸಿದ್ಧಿಸ್ತ್ರೇತಾಯುಗೇ ತು ಯಾ ।
ಪರಿವೃತ್ತೇ ಯುಗೇ ತಸ್ಮಿಂಸ್ತತಃ ಸಾ ಸಂಪ್ರಣಶ್ಯತಿ ॥ ೨ ॥

---

## ಐವತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ಇದುವರೆಗೂ ತ್ರೇತಾಯುಗದ ವಿಚಾರವನ್ನು ತಿಳಿಸಿದ್ದಾಗಿದೆ. ಈಗ ದ್ವಾಪರಯುಗದ ವಿಷಯಗಳನ್ನು ತಿಳಿಸುವೆನು ಕೇಳಿರಿ. ತ್ರೇತಾಯುಗವು ಸಂಧ್ಯಂಶದೊಡನೆ ಕಳೆದುಹೋಗಲು ದ್ವಾಪರಯುಗವು ಪ್ರಾರಂಭವಾಗುವುದು.

೨. ದ್ವಾಪರಯುಗವು ಪ್ರಾರಂಭವಾಗಲು, ಪ್ರಜೆಗಳಿಗೆ ತ್ರೇತಾಯುಗದ ಸಿದ್ಧಿಗಳೆಲ್ಲವೂ ನಷ್ಟವಾದುವು. ಯುಗವು ಬದಲಾಯಿಸಲು ಸಿದ್ಧಿಗಳೆಲ್ಲವೂ ಸಿದ್ಧಿಗಳೂ ಕೂಡ ಬದಲಾಯಿಸಿದುವು.

ತತಃ ಪ್ರವರ್ತತೇ ತಾಸಾಂ ಪ್ರಜಾನಾಂ ದ್ವಾಪರೇ ಪುನಃ ।
ಲೋಭೋಽಧೃತಿರ್ವಣಿಗ್ಯುದ್ಧಂ ತತ್ವಾನಾಮವಿನಿಶ್ಚಯಃ ॥ ೩ ॥

ಸಂಭೇದಶ್ಚೈವ ವರ್ಣಾನಾಂ ಕಾರ್ಯಾಣಾಂ ಚಾವಿನಿರ್ಣಯಃ ।
ಯಜ್ಞೌಷಧೇಃ ಪಶೋರ್ದಂಡೋ ಮದೋ ದಂಭೋಽಕ್ಷಮಾ ಬಲಂ ॥
ಏಷಾಂ ರಜಸ್ತಮೋಯುಕ್ತಾ ಪ್ರವೃತ್ತಿರ್ದ್ವಾಪರೇ ಸ್ಮೃತಾ ॥ ೪ ॥

ಆದ್ಯೇ ಕೃತೇ ಚ ಧರ್ಮೋಽಸ್ತಿ ತ್ರೇತಾಯಾಂ ಸಂಪ್ರಪದ್ಯತೇ ।
ದ್ವಾಪರೇ ವ್ಯಾಕುಲೀಭೂತ್ವಾ ಪಣಶ್ಯತಿ ಕಲೌ ಯುಗೇ ॥ ೫ ॥

ವರ್ಣಾನಾಂ ವಿಪರಿಧ್ವಂಸಃ ಸಂಕೀರ್ತ್ಯತೇ ತಥಾಶ್ರಮಃ ।
ದ್ವೈಧಮುತ್ಪದ್ಯತೇ ಚೈವ ಯುಗೇ ತಸ್ಮಿನ್ ಶ್ರುತೌ ಸ್ಮೃತೌ ॥ ೬ ॥

---

೩–೪. ದ್ವಾಪರಯುಗವು ಪ್ರಾರಂಭವಾಗಲು, ಪ್ರಜೆಗಳಿಗೆ ಲೋಭ, ಅಧೈರ್ಯ, ವ್ಯಾಪಾರದಲ್ಲಿ ಪರಸ್ಪರ ಕಲಹ, ತತ್ವಗಳ ಅನಿರ್ಣಯ, ವರ್ಣಗಳಿಗೆ ಅನ್ಯೋನ್ಯಮತಿಭೇದ, ಕಾರ್ಯಗಳ ಅನಿಶ್ಚಯ, ಯಾಗದ ಪದಾರ್ಥಗಳಿಗೂ ಪಶುಗಳಿಗೂ ಶಿಕ್ಷೆ ಅಂದರೆ ಕಂದಾಯ ಮೊದಲಾದುವುಗಳಿಂದ ತೊಂದರೆ, ಮದ, ಅಹಂಕಾರ, ಅಶಕ್ತಿ, ಸಾಮರ್ಥ್ಯ ಇವುಗಳು ಉಂಟಾದುವು. ದ್ವಾಪರಯುಗದಲ್ಲಿ ರಜಸ್ತಮೋಗುಣಗಳು ಅಧಿಕವಾಗಿ ಅವುಗಳ ಕಾರ್ಯಗಳಾದ ಹಿಂಸಾದಿಗಳು ಪ್ರಾರಂಭವಾದುವು.

೫. ಕೃತಯುಗದ ಪ್ರಾರಂಭದಲ್ಲಿ ಧರ್ಮಗಳು ಸಂಪೂರ್ಣವಾಗಿದ್ದುವು. ತ್ರೇತಾಯುಗದಲ್ಲಿಯೂ ಆ ಧರ್ಮಗಳು ಅನುವರ್ತಿಸಿಗೊಂಡಿದ್ದುವು. ದ್ವಾಪರಯುಗದಲ್ಲಿ ವ್ಯಾಕುಲವಾದುವು. ಕಲಿಯುಗದಲ್ಲಿ ಆ ಧರ್ಮಗಳು ನಷ್ಟವಾಗುವುವು.

೬. ದ್ವಾಪರಯುಗದಲ್ಲಿಯೇ ವರ್ಣಗಳ ನಾಶವೂ, ಬ್ರಹ್ಮಚರ್ಯಾದ್ಯಾಶ್ರಮಗಳ ಪರಿಧ್ವಂಸವೂ, ಶ್ರುತಿ, ಸ್ಮೃತೀತಿಹಾಸ ಪುರಾಣಗಳಲ್ಲಿ ಮತಭೇದಗಳಿಂದ ಭಿನ್ನಭಿನ್ನಾಭಿಪ್ರಾಯಗಳೂ ಉಂಟಾಗುವುವು.

ದ್ವೈಧಾತ್ ಶ್ರುತೇಃ ಸ್ಮೃತೇಶ್ಚೈವ ನಿಶ್ಚಯೋ ನಾಧಿಗಮ್ಯತೇ।
ಅನಿಶ್ಚಯಾಧಿಗಮನಾದ್ಧರ್ಮತತ್ತ್ವಂ ನಿಗದ್ಯತೇ ॥
ಧರ್ಮತತ್ತ್ವೇ ತು ಭಿನ್ನಾನಾಂ ಮತಿಭೇಧೋ ಭವೇನ್ನೃಣಾಂ ॥ ೭ ॥

ಪರಸ್ಪರವಿಭಿನ್ನೈಸ್ತೈರ್ದೃಷ್ಟೀನಾಂ ವಿಭ್ರಮೇಣ ಚ।
ಅಯಂ ಧರ್ಮೋ ಹ್ಯಯಂ ನೇತಿ ನಿಶ್ಚಯೋ ನಾಭಿಗಮ್ಯತೇ ॥ ೮ ॥

ಕಾರಣಾನಾಂ ಚ ವೈಕಲ್ಯಾತ್ ಕಾರಣಸ್ಯಾಪ್ಯನಿಶ್ಚಯಾತ್।
ಮತಿಭೇದೇ ಚ ತೇಷಾಂ ವೈ ದೃಷ್ಟೀನಾಂ ವಿಭ್ರಮೋ ಭವೇತ್ ॥ ೯ ॥

ತತೋ ದೃಷ್ಟಿವಿಭಿನ್ನೈಸ್ತೈಃ ಕೃತಂ ಶಾಸ್ತ್ರಕುಲಂ ತ್ವಿದಂ।
ಏಕೋ ವೇದಶ್ಚತುಷ್ಪಾದಸ್ತ್ರೇತಾಸ್ವಿಹ ವಿಧೀಯತೇ ॥ ೧೦ ॥

---

೭. ಪ್ರಜೆಗಳಿಗೆ ಶ್ರುತಿ ಸ್ಮೃತ್ಯಾದಿಗಳಲ್ಲಿ ಭಿನ್ನಾಭಿಪ್ರಾಯವುಂಟಾಗುವುದರಿಂದ ಯಾವವಿಧನಿರ್ಣಯವೂ ಉಂಟಾಗಲಾರದು. ಒಂದೇವಿಧವಾದ ನಿಶ್ಚಯವಿಲ್ಲದಿರುವುದರಿಂದ ಧರ್ಮಗಳಲ್ಲಿ ಸಂದೇಹವೂ ಉಂಟಾಗುವುದು. ಇಂತಹ ಸಂಶಯಗಳಿಂದ ಭಿನ್ನಾಭಿಪ್ರಾಯವುಂಟಾಗಿ ಪ್ರಜೆಗಳಿಗೆ ಮತಿಭೇದಗಳಾಗುವುವು.

೮. ಪರಸ್ಪರ ಭಿನ್ನಾಭಿಪ್ರಾಯವಿರುವುದರಿಂದಲೂ, ಭ್ರಾಂತಿಯಿಂದಲೂ ಇದು ಧರ್ಮವೇ ಅಥವಾ ಅಧರ್ಮವೇ ಎಂಬುದಾಗಿ ನಿಶ್ಚಯವಾಗದೆ ಸಂದೇಹವೇ ಸಂಭವಿಸುವುದು.

೯. ಕಾರಣಗಳ ವ್ಯತ್ಯಾಸದಿಂದಲೂ, ಕಾರಣಗಳ ಅನಿಶ್ಚಯದಿಂದಲೂ, ಕಾರ್ಯಗಳು ಬದಲಾಯಿಸುವಂತೆ, ಪ್ರಜೆಗಳಿಗೆ ಮತಿಭೇದವಿದ್ದರೆ ಸಂಶಯವೂ, ಭ್ರಾಂತಿಯೂ ಆಗುವುದು ಸಹಜವಾಗಿಯೇ ಇರುತ್ತದೆ.

೧೦. ಹೀಗೆ ಪ್ರಜೆಗಳಲ್ಲಿ ಭಿನ್ನಾಭಿಪ್ರಾಯಗಳಿದ್ದರೆ ಅವರು ಮಾಡುವ ಅಂದರೆ ಬರೆಯುವ ಶಾಸ್ತ್ರಗಳಲ್ಲಿಯೂ ಭಿನ್ನಾಭಿಪ್ರಾಯಗಳಿರುವುವು. ಒಂದೇ ವೇದವು ತ್ರೇತಾಯುಗದಲ್ಲಿ ನಾಲ್ಕುಪಾದಗಳುಳ್ಳದ್ದಾಗಿ ಆಯಿತು. ತ್ರೇತಾಯುಗದಲ್ಲಿ ಒಂದೇ ವೇದಕ್ಕೆ ನಾಲ್ಕುಪಾದಗಳುಂಟಾದುವು.

**ಸಂರೋಧಾದಾಯುಷಶ್ಚೈವ ದೃಶ್ಯತೇ ದ್ವಾಪರೇಷು ಚ |**
**ವೇದವ್ಯಾಸೈಶ್ಚತುರ್ಧಾ ತು ವ್ಯಸ್ಯತೇ ದ್ವಾಪರಾಧಿಷು || ೧೧ ||**

**ಋಷಿಪುತ್ರೈಃ ಪುನರ್ವೇದಾ ಭಿದ್ಯಂತೇ ದೃಷ್ಟಿವಿಭ್ರಮೈಃ |**
**ಮಂತ್ರಬ್ರಾಹ್ಮಣವಿನ್ಯಾಸೈಃ ಸ್ವರವರ್ಣವಿಪರ್ಯಯೈಃ || ೧೨ ||**

**ಸಂಹಿತಾ ಋಗ್ಯಜುಸ್ಸಾಮ್ನಾಂ ಸಂಹನ್ಯಂತೇ ಶ್ರುತರ್ಷಿಭಿಃ |**
**ಸಾಮಾನ್ಯಾದ್ವೈಕೃತಾಚ್ಚೈವ ದೃಷ್ಟಿಭಿನ್ನೈಃ ಕ್ವಚಿತ್ ಕ್ವಚಿತ್ || ೧೩ ||**

**ಬ್ರಾಹ್ಮಣಂ ಕಲ್ಪಸೂತ್ರಾಣಿ ಮಂತ್ರಪ್ರವಚನಾನಿ ಚ |**
**ಅನ್ಯೇ ತು ಪ್ರಹಿತಾಸ್ತೇಷಾಂ ಕೇಚಿತ್ತಾನ್ ಪ್ರತ್ಯವಸ್ಥಿತಾಃ || ೧೪ ||**

---

೧೧. ದ್ವಾಪರಾದಿ ಯುಗಗಳಲ್ಲಿ ಪ್ರಜೆಗಳಿಗೆ ಆಯುಷ್ಯವು ಕಡಿಮೆಯಾಗಿರುವುದರಿಂದ ವೇದವು ವಿಸ್ತಾರವಾಗಿ ನಾಲ್ಕುಭಾಗವಾಯಿತು. ಮತಿಸಂಕೋಚವೇ ವೇದಗಳ ವಿಭಾಗಕ್ಕೆ ಕಾರಣವಾಗಿದೆ.

೧೨. ಭಿನ್ನಭಿನ್ನಾಭಿಪ್ರಾಯಗಳಿರುವ ಋಷಿಕುಮಾರರಿಂದ ಒಂದೇ ವೇದವು ನಾನಾವಿಧವಾಗಿ ಮಾಡಲ್ಪಟ್ಟಿದೆ. ಮತ್ತು ಆ ಋಷಿಕುಮಾರರು ವೇದವನ್ನು ಮಂತ್ರ ಬ್ರಾಹ್ಮಣ ವ್ಯತ್ಯಾಸದಿಂದಲೂ, ಸ್ವರವರ್ಣಗಳ ವಿಪರ್ಯದಿಂದಲೂ ಅನೇಕವಿಧವನ್ನಾಗಿ ಮಾಡಿದರು.

೧೩. ಮಹರ್ಷಿಗಳು ಸಂಹಿತೆಯನ್ನು ಋಕ್ಕು, ಯಜುಸ್ಸು, ಸಾಮವೆಂಬುದಾಗಿ ಮೂರುಭಾಗಗಳನ್ನಾಗಿ ಮಾಡಿದರು. ದೃಷ್ಟಿಭೇದ ಮತಿಭೇದಗಳಿಂದ ಸಾಮಾನ್ಯಭಾಗವೇ ವಿವಿಧಾಕಾರವಾಗಿ ವಿಕೃತವಾಗಿದೆ.

೧೪. ಕೆಲವರು ಬ್ರಾಹ್ಮಣವನ್ನು ಕಲ್ಪಸೂತ್ರಗಳು, ಮಂತ್ರಪ್ರವಚನಗಳು ಎಂಬುದಾಗಿ ಎರಡುಭಾಗವನ್ನಾಗಿ ವಿಂಗಡಿಸಿರುವರು. ಮತ್ತೆ ಕೆಲವರು ಅದನ್ನು ತಮ್ಮ ಬುದ್ಧಿಗೆ ತೋರಿದಂತೆ ಬೇರೆವಿಧವಾಗಿಯೂ ರಚಿಸಿರುವರು.

ದ್ವಾಪರೇಷು ಪ್ರವರ್ತಂತೇ ಭಿನ್ನವೃತ್ತಾಶ್ರಮಾ ದ್ವಿಜಾಃ ।
ಏಕಮಾಧ್ವರ್ಯವಂ ಪೂರ್ವಮಾಸೀದ್ದ್ವೈಧಂ ಪುನಸ್ತತಃ ॥ ೧೫ ॥

ಸಾಮಾನ್ಯವಿಪರೀತಾರ್ಥೈಃ ಕೃತಂ ಶಾಸ್ತ್ರಕುಲಂ ತ್ವಿದಂ ।
ಆಧ್ವರ್ಯವಸ್ಯ ಪ್ರಸ್ಥಾನೈರ್ಬಹುಧಾ ವ್ಯಾಕುಲಂ ಕೃತಂ ॥ ೧೬ ॥

ತಥೈವಾಥರ್ವಋಕ್ಸಾಮ್ನಾಂ ವಿಕಲ್ಪೈಶ್ಚಾಪ್ಯಸಂಕ್ಷಯೈಃ ।
ವ್ಯಾಕುಲಂ ದ್ವಾಪರೇ ಭಿನ್ನೇ ಕ್ರಿಯತೇ ಭಿನ್ನದರ್ಶನೈಃ ॥ ೧೭ ॥

ತೇಷಾಂ ಭೇದಾಃ ಪ್ರಭೇದಾಶ್ಚ ವಿಕಲ್ಪೈಶ್ಚಾಪ್ಯಸಂಕ್ಷಯಾಃ ।
ದ್ವಾಪರೇ ಸಂಪ್ರವರ್ತಂತೇ ವಿನಶ್ಯಂತಿ ಪುನಃ ಕಲೌ ॥ ೧೮ ॥

---

೧೫. ಹೀಗೆ ದ್ವಾಪರಯುಗದಲ್ಲಿ ಬ್ರಾಹ್ಮಣರು ವಿವಿಧವಾದ ಅಂದರೆ ಭಿನ್ನ ಭಿನ್ನವಾದ ಆಶ್ರಮಗಳು, ಆಚಾರಗಳು ಇವುಗಳುಳ್ಳವರಾಗಿದ್ದರು. ಅದರಂತೆಯೇ ಅಧ್ವರ್ಯುವೃತ್ತಿಯಲ್ಲಿಯೂ ಕೂಡ ಭಿನ್ನಾಭಿಪ್ರಾಯವಿದ್ದಿತು.

೧೬. ಹೀಗೆಯೇ ಶಾಸ್ತ್ರಗಳಿಗೂ ಕೂಡ ಕೆಲವರು ಸಾಮಾನ್ಯಾರ್ಥವನ್ನೂ, ಕೆಲವರು ವಿಪರೀತಾರ್ಥವನ್ನೂಕೂಡ ಹೇಳುತ್ತಿದ್ದರು. ಅಧ್ವರ್ಯುವ್ಯಾಪಾರದಂತೆಯೇ ಇತರ ಕರ್ಮಗಳ ವಿಷಯದಲ್ಲಿಯೂ ಕೂಡ ಭಿನ್ನಭಿನ್ನಾಭಿಪ್ರಾಯಗಳು ಏರ್ಪಡುತ್ತಿದ್ದುವು.

೧೭. ಮತ್ತು ವಿಭಿನ್ನರಾದ ದಾರ್ಶನಿಕರು ದ್ವಾಪರಯುಗದಲ್ಲಿ ಋಗ್ವೇದ, ಅಥರ್ವಣವೇದ, ಸಾಮವೇದಗಳಿಗೆ ಸಂಶಯವಿಪರ್ಯಯಾರ್ಥಗಳನ್ನು ಕಲ್ಪಿಸಿ ವ್ಯಾಕುಲವನ್ನಾಗಿ ಮಾಡಿದರು.

೧೮. ಹೀಗೆ ವಿಭಿನ್ನಮತಿಕರು ವೇದಶಾಸ್ತ್ರಗಳಿಗೆ ವಿವಿಧಾಭಿಪ್ರಾಯವನ್ನು ಕಲ್ಪಿಸಿ, ವಿಕಲ್ಪಗಳನ್ನಾಗಿಯೂ, ಸಂಶಯಾಸ್ಪದಗಳನ್ನಾಗಿಯೂ ಮಾಡಿದರು. ದ್ವಾಪರಯುಗದಲ್ಲಿಯೇ ವೇದದಲ್ಲಿ (ಭೇದಗಳು) ಭಾಗಗಳೂ, ಉಪಭಾಗಗಳೂ ಉಂಟಾದುವು. ಕಲಿಯುಗದಲ್ಲಿಯಾದರೋ ವೇದಶಾಸ್ತ್ರಗಳು ಅಜ್ಞರಕೈಗೆ ಸಿಕ್ಕಿ, ಅಪಾರ್ಥಗಳಿಂದ ನಶಿಸುತ್ತವೆ.

**ತೇಷಾಂ ವಿಪರ್ಯಯಾಶ್ಚೈವ ಭವಂತಿ ದ್ವಾಪರೇ ಪುನಃ |**
**ಅವೃಷ್ಟಿರ್ಮರಣಂ ಚೈವ ತಥೈವ ವ್ಯಾಧ್ಯುಪದ್ರವಾಃ || ೧೯ ||**

**ವಾಙ್ಮನಃ ಕರ್ಮಜೈರ್ದುಃಖೈರ್ನಿರ್ವೇದೋ ಜಾಯತೇ ಪುನಃ |**
**ನಿರ್ವೇದಾಜ್ಜಾಯತೇ ತೇಷಾಂ ದುಃಖಮೋಕ್ಷವಿಚಾರಣಾ || ೨೦ ||**

**ವಿಚಾರಣಾಚ್ಚ ವೈರಾಗ್ಯಂ ವೈರಾಗ್ಯಾದ್ದೋಷದರ್ಶನಂ |**
**ದೋಷಾಣಾಂ ದರ್ಶನಾಚ್ಚೈವ ದ್ವಾಪರೇ ಜ್ಞಾನಸಂಭವಃ || ೨೧ ||**

**ತೇಷಾಂ ಚ ಮಾನಿನಾಂ ಪೂರ್ವಮಾದ್ಯೇ ಸ್ವಾಯಂಭುವೇಽಂತರೇ |**
**ಉತ್ಪದ್ಯಂತೇ ಹಿ ಶಾಸ್ತ್ರಾಣಾಂ ದ್ವಾಪರೇ ಪರಿಪಂಥಿನಃ || ೨೨ ||**

---

೧೯. ದ್ವಾಪರಯುಗದ ಕೊನೆಕೊನೆಗೆ ವೇದಶಾಸ್ತ್ರಗಳಿಗೆ ವಿಪರೀತಾರ್ಥ ವನ್ನು ಹೇಳುತ್ತಾರೆ. ಈವಿಧ ವಿರುದ್ಧಾರ್ಥಗಳಿಂದ ಅನಾವೃಷ್ಟಿ, ಅಕಾಲಮರಣ, ರೋಗೋಪದ್ರವ ಇವುಗಳು ಉಪಕ್ರಮವಾಗುವುವು.

೨೦. ದ್ವಾಪರಯುಗದಲ್ಲಿ ಮನೋವಾಕ್ಕಾಯ ಕರ್ಮಗಳಿಂದುಂಟಾದ ದುಃಖ ಗಳಿಂದ ಆ ಪ್ರಜೆಗಳಿಗೆ ಪಶ್ಚಾತ್ತಾಪ ಅಥವಾ ವೈರಾಗ್ಯವುಂಟಾಗುವುದು. ಆ ವೈರಾಗ್ಯದಿಂದ ದುಃಖವು ಪರಿಹೃತವಾಗಿ ಮೋಕ್ಷದ ವಿಷಯದಲ್ಲಿ ವಿವೇಚನೆಯು ಉದ್ಭವಿಸುವುದು.

೨೧. ಹೀಗೆ ಮೋಕ್ಷವಿಷಯಕವಾಗಿ ವಿಚಾರಮಾಡುವುದರಿಂದ ವೈರಾಗ್ಯವು ಹುಟ್ಟುವುದು. ಆ ವೈರಾಗ್ಯದಿಂದ ದೋಷಜ್ಞಾನವೂ ಉದ್ಭವಿಸುವುದು. ತಮ್ಮ ನಡೆ ನುಡಿಗಳಲ್ಲಿ ತಮಗೆ ದೋಷಗಳು ಸಿಕ್ಕಿದರೆ ಅಂತಹ ದೋಷಗಳನ್ನು ತ್ಯಜಿಸಿ, ದಿವ್ಯವಾದ ಜ್ಞಾನವನ್ನು ದ್ವಾಪರದಲ್ಲಿ ಪುನಃ ಪಡೆಯುವರು.

೨೨. ದ್ವಾಪರಯುಗದ ಮೊದಲನೆಯ ಸ್ವಾಯಂಭುವ ಮನ್ವಂತರದಲ್ಲಿ ಅಂತಹ ಮಾನಿಷ್ಠರಾದ ಜ್ಞಾನಿಗಳಿಗೆ ವಿರೋಧಿಗಳು ದ್ವಾಪರಯುಗದಲ್ಲಿ ಉದ್ಭವಿಸಿ ಶಾಸ್ತ್ರಗಳ ವಿಚಾರದಲ್ಲಿ ವಿವಾದಮಾಡುವರು. ಇದರಿಂದ ನಿಜವಾಗಿ ಹುಟ್ಟಿದ ಜ್ಞಾನವೂಕೂಡ ಬದಲಾಯಿಸಿ ಹೋಗುವುದು.

ಆಯುರ್ವೇದವಿಕಲ್ಪಾಶ್ಚ ಅಂಗಾನಾಂ ಜ್ಯೋತಿಷಸ್ಯ ಚ ।
ಅರ್ಥಶಾಸ್ತ್ರವಿಕಲ್ಪಶ್ಚ ಹೇತುಶಾಸ್ತ್ರವಿಕಲ್ಪನಂ ॥ ೨೩ ॥

ಸ್ಮೃತಿಶಾಸ್ತ್ರಪ್ರಭೇದಾಶ್ಚ ಪ್ರಸ್ಥಾನಾನಿ ಪೃಥಕ್ ಪೃಥಕ್ ।
ದ್ವಾಪರೇಷ್ವಭಿವರ್ತಂತೇ ಮತಿಭೇದಾಸ್ತಥಾ ನೃಣಾಂ ॥ ೨೪ ॥

ಮನಸಾ ಕರ್ಮಣಾ ವಾಚಾ ಕೃಚ್ಛ್ರಾದ್ವಾರ್ತಾ ಪ್ರಸಿದ್ಧ್ಯತಿ ।
ದ್ವಾಪರೇ ಸರ್ವಭೂತಾನಾಂ ಕಾಯಕ್ಲೇಶಪುರಸ್ಕೃತಾ ॥ ೨೫ ॥

ಲೋಭೋಽಧೃತಿರ್ವಣಿಗ್ಯುದ್ಧಂ ತತ್ವಾನಾಮವಿನಿಶ್ಚಯಃ ।
ವೇದಶಾಸ್ತ್ರ ಪ್ರಣಯನಂ ಧರ್ಮಾಣಾಂ ಸಂಕರಸ್ತಥಾ ॥ ೨೬ ॥

---

೨೩. ದ್ವಾಪರಯುಗದಲ್ಲಿ ಆಯುರ್ವೇದದಲ್ಲಿಯೂ ಅಂದರೆ ವೈದ್ಯಶಾಸ್ತ್ರದಲ್ಲಿಯೂ ವೇದಾಂಗಗಳಾದ ವ್ಯಾಕರಣಾದಿ ಶಾಸ್ತ್ರಗಳಲ್ಲಿಯೂ, ಜ್ಯೋತಿಶ್ಶಾಸ್ತ್ರದಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ, ನ್ಯಾಯಶಾಸ್ತ್ರದಲ್ಲಿಯೂ ಮತಿಭೇದಗಳಿಂದ ಭಿನ್ನಾಭಿಪ್ರಾಯಗಳುಂಟಾಗಿ ಸಂದೇಹಗಳು ಉಂಟಾದುವು.

೨೪. ಇದರಂತೆಯೇ ಸ್ಮೃತಿಗಳಲ್ಲಿಯೂ, ವೇದಾಂತಶಾಸ್ತ್ರಗಳಲ್ಲಿಯೂ ಸ್ಥಾನಭೇದದಿಂದಲೂ, ಪಾಠಗಳ ಭೇದದಿಂದಲೂ, ಮತಿಭೇದದಿಂದಲೂ ದ್ವಾಪರದಲ್ಲಿ ವಿಕಲ್ಪಗಳೂ ಸಂದೇಹಗಳೂ ವಿಶೇಷವಾಗಿ ಉದ್ಭವಿಸಿದುವು.

೨೫. ದ್ವಾಪರಯುಗದಲ್ಲಿ ಪ್ರಜೆಗಳ ಮನೋವಾಕ್ಕಾಯಕರ್ಮಗಳ ದೌರ್ಬಲ್ಯದಿಂದ ಜೀವನವು ಕಷ್ಟಕರವಾಗಿಯೇ ಇತ್ತು. ಇದರಿಂದ ಕಾಯಕ್ಲೇಶಗಳು ಜಾಸ್ತಿಯಾಗಿ ಸರ್ವಪ್ರಾಣಿಗಳೂ ದುಃಖವನ್ನು ಅನುಭವಿಸುತ್ತಿದ್ದುವು.

೨೬. ಇದರಿಂದ ಪ್ರಜೆಗಳಲ್ಲಿ ಲೋಭ ಮೋಹಾದಿಗಳು, ಅಧೈರ್ಯ, ವ್ಯಾಪಾರದಲ್ಲಿ ಕಲಹ, ತತ್ವಗಳಲ್ಲಿ ಅನಿಶ್ಚಯ, ವೇದಶಾಸ್ತ್ರಗಳಲ್ಲಿ ಅಪನಂಬಿಕೆ, ಧರ್ಮಸಾಂಕರ್ಯ ಇವು ಉಂಟಾದುವು.

ದ್ವಾಪರೇಷು ಪ್ರವರ್ತಂತೇ ರೋಗೋ ಲೋಭೋ ವಧಸ್ತಥಾ ।
ವರ್ಣಾಶ್ರಮಪರಿಧ್ವಂಸಾಃ ಕಾಮದ್ವೇಷೌ ತಥೈವ ಚ ॥ ೨೭ ॥

ಪೂರ್ಣೇ ವರ್ಷಸಹಸ್ರೇ ದ್ವೇ ಪರಮಾಯುಸ್ತಥಾ ನೃಣಾಂ ।
ನಿಃಶೇಷೇ ದ್ವಾಪರೇ ತಸ್ಮಿನ್ ತಸ್ಯ ಸಂಧ್ಯಾ ತು ಪಾದತಃ ॥ ೨೮ ॥

ಪ್ರತಿಷ್ಠತೇ ಗುಣೈರ್ಹೀನೋ ಧರ್ಮೋಽಸೌ ದ್ವಾಪರಸ್ಯ ತು ।
ತಥೈವ ಸಂಧ್ಯಾ ಪಾದೇನ ಅಂಶಸ್ತಸ್ಯಾವತಿಷ್ಠತೇ ॥ ೨೯ ॥

ದ್ವಾಪರಸ್ಯ ಚ ವರ್ಷೇ ಯಾ ತಿಷ್ಯಸ್ಯ ತು ನಿಬೋಧತ ।
ದ್ವಾಪರಸ್ಯಾಂಶಶೇಷೇ ತು ಪ್ರತಿಪತ್ತಿಃ ಕಲೇ ರತಃ ॥ ೩೦ ॥

---

೨೭. ದ್ವಾಪರಯುಗದಲ್ಲಿ ರೋಗ, ಶೋಕಗಳು, ಲೋಭ, ವಧ, ಕಾಮ, ಕ್ರೋಧ, ಮಾತ್ಸರ್ಯಗಳು, ವರ್ಣಾಶ್ರಮ ಧರ್ಮನಾಶಗಳು ಇವು ಉಂಟಾದುವು.

೨೮. ದ್ವಾಪರಯುಗದಲ್ಲಿ ಪ್ರಜೆಗಳಿಗೆ ಎರಡುಸಾವಿರ ವರ್ಷಗಳು ಆಯುಃ ಪ್ರಮಾಣಗಳಾಗಿದ್ದುವು. ಈ ರೀತಿಯಲ್ಲಿ ದ್ವಾಪರಯುಗವು ಸಂಪೂರ್ಣವಾಗಿ ಕಳೆಯಲಾಗಿ ದ್ವಾಪರಯುಗದ ಸಂಧ್ಯಾಕಾಲವು ಪ್ರಾಪ್ತವಾಗುವುದು.

೨೯. ದ್ವಾಪರಯುಗದ ಸಂಧ್ಯಾಕಾಲವು ಆ ಯುಗದ ಗುಣಗಳಿಂದ ಹೀನವಾಗಿ ಧರ್ಮರೂಪವಾಗಿ ಉಳಿಯುವುದು. ಅದರಂತೆ ದ್ವಾಪರಯುಗದ ಸಂಧ್ಯಾ ಪಾದಾಂಶವೂ ಸಹ ತನ್ನ ಧರ್ಮಗಳೊಡನೇ ಪ್ರಾಪ್ತವಾಗುವುದು.

೩೦. ಮೇಲೆ ಹೇಳಿದ ವಿಷಯಗಳು ದ್ವಾಪರಯುಗದ ವಿಷಯವಾಗಿದೆ. ಈಗ ಕಲಿಯುಗದ ವಿಷಯಗಳನ್ನು ಹೇಳುವೆನು ಕೇಳಿರಿ. ದ್ವಾಪರಾಂಶಗಳಲ್ಲಿರತಕ್ಕ ಧರ್ಮಕ್ಕಿಂತಲೂ ಕಲಿಯುಗದಲ್ಲಿ ಧರ್ಮಗಳು ಬಹಳ ಹೀನವಾಗಿರುವುವು.

ಹಿಂಸಾಸೂಯಾನೃತಂ ಮಾಯಾ ವಧಶ್ಚೈವ ತಪಸ್ವಿನಾಂ ।
ಏತೇ ಸ್ವಭಾವಾಸ್ತಿಷ್ಯಸ್ಯ ಸಾಧಯಂತಿ ಚ ವೈ ಪ್ರಜಾಃ ॥ ೩೧ ॥

ಏಷ ಧರ್ಮಃ ಕೃತಃ ಕೃತ್ಸ್ನೋ ಧರ್ಮಸ್ಯ ಪರಿಹೀಯತೇ ।
ಮನಸಾ ಕರ್ಮಣಾ ಸ್ತುತ್ಯಾ ವಾರ್ತಾ ಸಿದ್ಧ್ಯತಿ ವಾ ನ ವಾ ॥ ೩೨ ॥

ಕಲೌ ಪ್ರಮಾರಕೋ ರೋಗಃ ಸತತಂ ಕ್ಷುದ್ಭಯಾನಿ ವೈ ।
ಅನಾವೃಷ್ಟಿಭಯಂ ಘೋರಂ ದರ್ಶನಂ ಚ ವಿಪರ್ಯಯಂ ॥ ೩೩ ॥

ನ ಪ್ರಮಾಣಂ ಸ್ಮೃತೇರಸ್ತಿ ತಿಷ್ಯೇ ಲೋಕೇ ಯುಗೇ ಯುಗೇ ।
ಗರ್ಭಸ್ಥೋ ಮ್ರಿಯತೇ ಕಶ್ಚಿದ್ಯೌವನಸ್ಥಸ್ತಥಾಪರಃ ॥
ಸ್ಥಾವಿರೇ ಮಧ್ಯಕೌಮಾರೇ ಮ್ರಿಯಂತೇ ವೈ ಕಲೌ ಪ್ರಜಾಃ ॥ ೩೪ ॥

---

೩೧. ಕಲಿಯುಗದ ಪ್ರಜೆಗಳ ನೈಜವಾದ ಸ್ವಭಾವವು ಹಿಂಸಾ, ಅಸೂಯಾ, ಅನೃತ, ಮೋಸ, ಮಹರ್ಷಿಗಳ ಕೊಲೆ ಇವುಗಳಾಗಿವೆ. ಪ್ರಜೆಗಳು ಕಲಿಯುಗದಲ್ಲಿ ವಿಶೇಷವಾಗಿ ಇವುಗಳನ್ನೇ ಮಾಡುವರು. ಸಾಧುಜನಗಳ ಹಿಂಸೆಯೇ ಕಲಿಯುಗದ ಮುಖ್ಯ ಧರ್ಮವಾಗಿದೆ.

೩೨. ಮೇಲೆ ಹೇಳಿರುವುದೇ ಕಲಿಯುಗದ ಮುಖ್ಯ ಧರ್ಮವಾಗಿದೆ. ಧರ್ಮವು ವಿಶೇಷವಾಗಿ ನಷ್ಟವಾಗುವುದು. ಮನೋವಾಕ್ಕಾಯಕರ್ಮಗಳಿಂದ ಸಿದ್ಧಿಯು ಉಂಟಾಗದೆ, ಕೇವಲ ಮುಖಸ್ತುತಿಯಿಂದ ಕಾರ್ಯವು ಒಂದುವೇಳೆ ಆದರೂ ಆಗ ಬಹುದು. ಆಗದೇ ಇರುವುದೂ ಉಂಟು.

೩೩. ಕಲಿಯುಗದಲ್ಲಿ ಪ್ರಜಾನಾಶಕವಾದ ರೋಗವೂ, ನಿರಂತರವಾದ ಕ್ಷುದ್ಬಾಧೆಯೂ, ಅನಾವೃಷ್ಟಿ ಮೊದಲಾದ ಭೀತಿಯೂ, ಭಯಂಕರವಾದ ಹಿಂಸೆಯೂ, ಅನಾಹುತದರ್ಶನವೂ, ವರ್ಣಾಶ್ರಮ ಧರ್ಮವ್ಯತ್ಯಾಸವೂ ಇವು ಉಂಟಾಗುವುವು.

೩೪. ಎಲೈ ಮುನಿವರ್ಯರೇ, ಕಲಿಯುಗದ ಪ್ರಜೆಗಳಿಗೆ ಶ್ರುತಿಸ್ಮೃತಿಗಳಲ್ಲಿಯೂ, ಧರ್ಮಾಧರ್ಮಗಳಲ್ಲಿಯೂ ಸ್ವಲ್ಪವೂ ಪ್ರಾಮಾಣ್ಯವಿಲ್ಲ. ಅಂದರೆ ನಂಬಿಕೆಯಿಲ್ಲ. ಆದುದರಿಂದ ಕಲಿಯುಗದಲ್ಲಿ ಕೆಲವರು ಮಾತೃಗರ್ಭದಲ್ಲಿಯೂ, ಮತ್ತೆ ಕೆಲವರು ಬಾಲ್ಯದಲ್ಲಿಯೂ, ಕೆಲವರು ಕೌಮಾರಯೌವನಗಳಲ್ಲಿಯೂ, ಮಧ್ಯ ವಯಸ್ಸಿನಲ್ಲಿಯೂ, ಕೆಲವರು ಮುದಿತನದಲ್ಲಿಯೂ ಸಾಯುತ್ತಾರೆ.

ಅಧಾರ್ಮಿಕಾಸ್ತ್ವನಾಚಾರಾಸ್ತೀಕ್ಷ್ಣಕೋಪಾಲ್ಪತೇಜಸಃ ।
ಅನೃತಬ್ರುವಶ್ಚ ಸತತಂ ತಿಷ್ಯೇ ಜಾಯಂತಿ ವೈ ಪ್ರಜಾಃ ॥ ೩೫ ॥

ದುರಿಷ್ಟೈರ್ದುರಧೀತೈಶ್ಚ ದುರಾಚಾರ್ಯೈರ್ದುರಾಗಮೈಃ ।
ವಿಪ್ರಾಣಾಂ ಕರ್ಮದೋಷೈಸ್ತೈಃ ಪ್ರಜಾನಾಂ ಜಾಯತೇ ಭಯಂ ॥ ೩೬ ॥

ಹಿಂಸಾ ಮಾಯಾ ತಥೇರ್ಷ್ಯಾ ಚ ಕ್ರೋಧೋಽಸೂಯಾಕ್ಷಮಾಽನೃತಂ ।
ತಿಷ್ಯೇ ಭವಂತಿ ಜಂತೂನಾಂ ರಾಗೋ ಲೋಭಶ್ಚ ಸರ್ವಶಃ ॥ ೩೭ ॥

ಸಂಕ್ಷೋಭೋ ಜಾಯತೇಽತ್ಯರ್ಥಂ ಕಲಿಮಾಸಾದ್ಯ ವೈ ಯುಗಂ ।
ನಾಧೀಯಂತೇ ತದಾ ವೇದಾ ನ ಯಜಂತೇ ದ್ವಿಜಾತಯಃ ॥
ಉತ್ಸೀದಂತಿ ನರಾಶ್ಚೈವ ಕ್ಷತ್ರಿಯಾಃ ಸವಿಶಃ ಕ್ರಮಾತ್ ॥ ೩೮ ॥

---

೩೫. ಕಲಿಯುಗದಲ್ಲಿ ಪ್ರಜೆಗಳ ಹುಟ್ಟುವಾಗಲೇ ಅಧಾರ್ಮಿಕರಾಗಿಯೂ ಅನಾಚಾರಿಗಳಾಗಿಯೂ, ಉಗ್ರಕೋಪಿಗಳಾಗಿಯೂ, ಅಲ್ಪತೇಜಸ್ವಿಗಳಾಗಿಯೂ, ಅನೃತವಾದಿಗಳಾಗಿಯೂ ಇರುತ್ತಾರೆ. ಆದರಂತೆ ದುಷ್ಫಲವನ್ನೇ ಹೊಂದುತ್ತಾರೆ.

೩೬. ಕಲಿಯುಗದ ಬ್ರಾಹ್ಮಣರು ದುಷ್ಟವಸ್ತು ವಿಷಯಕವಾದ ಇಚ್ಛೆಯನ್ನೂ, ದುಶ್ಶಾಸ್ತ್ರಾಧ್ಯಯನವನ್ನೂ, ದುರಾಚಾರಗಳನ್ನೂ, ದುರಾಗಮಾಭ್ಯಾಸವನ್ನೂ, ದುಷ್ಕರ್ಮಗಳನ್ನೂ ಮಾಡುವರು. ಇದರಿಂದ ಪ್ರಜೆಗಳಿಗೆ ರೋಗಾದ್ಯುಪದ್ರವಗಳೂ, ಅನಾವೃಷ್ಟ್ಯಾದಿಗಳಿಂದ ಭೀತಿಯೂ ಪ್ರಾಪ್ತವಾಗುವುವು.

೩೭. ಕಲಿಯುಗದ ಪ್ರಜೆಗಳಲ್ಲಿ ಹಿಂಸಾ, ಕಪಟ, ದ್ವೇಷ, ಅಸೂಯಾ, ಕೋಪ, ತಾಪ, ಅಧೈರ್ಯ, ಅನೃತ, ಅಶಾಂತಿ, ರೋಗ, ಮತ್ತು ಲೋಭ ಇವು ಸಾಮಾನ್ಯವಾಗಿರುವುವು.

೩೮. ಕಲಿಯುಗದಲ್ಲಿ ಮನಃಕಲಹದಿಂದ ಬಾಧೆಯು ಬಹಳವಾಗಿ ಉಂಟಾಗುವುದು. ಆಗ ಬ್ರಾಹ್ಮಣರು ವೇದಾಧ್ಯಯನವನ್ನೂ, ಯಜ್ಞಯಾಗಾದಿಗಳನ್ನೂ, ಸುತರಾಂ ಮಾಡುವುದಿಲ್ಲ. ಇದರಿಂದ ತಾವು ಕೆಡುವುದಲ್ಲದೆ ಕ್ಷತ್ರಿಯರೇ ಮೊದಲಾದವರಿಲ್ಲದೇ ಲೋಕವೇ ಅನಾಯಕತ್ವದಿಂದ ಹಾಳಾಗುವುದು.

ಕ್ಷುದ್ರಾಣಾಮಂತ್ಯಯೋನೇಸ್ತು ಸಂಬಂಧಾ ಬ್ರಾಹ್ಮಣೈಃ ಸಹ ।
ಭವಂತೀಹ ಕಲೌ ತಸ್ಮಿನ್ ಶಯನಾಸನಭೋಜನೈಃ ॥ ೩೯ ॥

ರಾಜಾನಃ ಶೂದ್ರಭೂಯಿಷ್ಠಾ ಪಾಷಾಂಡಾನಾಂ ಪ್ರವರ್ತಕಾಃ ।
ಭ್ರೂಣಹತ್ಯಾಃ ಪ್ರಜಾಸ್ತತ್ರ ಪ್ರಜಾ ಏವಂ ಪ್ರವರ್ತತೇ ॥ ೪೦ ॥

ಆಯುರ್ಮೇಧಾ ಬಲಂ ರೂಪಂ ಕುಲಂ ಚೈವ ಪ್ರಹೀಯತೇ ।
ಶೂದ್ರಾಶ್ಚ ಬ್ರಾಹ್ಮಣಾಚಾರಾಃ ಶೂದ್ರಾಚಾರಾಶ್ಚ ಬ್ರಾಹ್ಮಣಾಃ ॥ ೪೧ ॥

ರಾಜವೃತ್ತೇ ಸ್ಥಿತಾಶ್ಚೋರಾಶ್ಚೋರವೃತ್ತಾಶ್ಚ ಪಾರ್ಥಿವಾಃ ।
ಭೃತ್ಯಾಶ್ಚ ನಷ್ಟಸುಹೃದೋ ಯುಗಾಂತೇ ಪರ್ಯುಪಸ್ಥಿತೇ ॥ ೪೨ ॥

ಅಶೀಲಿನ್ಯೋऽವ್ರತಾಶಾಪಿ ಸ್ತ್ರಿಯೋ ಮದ್ಯಾಮಿಷಪ್ರಿಯಾಃ ।
ಮಾಯಾಮಾತ್ರಾ ಭವಿಷ್ಯಂತಿ ಯುಗಾಂತೇ ಪ್ರತ್ಯುಪಸ್ಥಿತೇ ॥ ೪೩ ॥

---

೩೯. ಬ್ರಾಹ್ಮಣರಿಗೆ ಅಲ್ಪಜನರು ಅಂತ್ಯಜರು ಇವರ ಸಂಬಂಧವು ಉಂಟಾಗುವದು. ಇದರಿಂದ ಬ್ರಾಹ್ಮಣರು ಇತರ ಜಾತೀಯರೊಡನೆ ಶಯನ ಏಕತ್ರವಾಸ ಭೋಜನ ಇವುಗಳನ್ನೂ ಸಂಕೋಚವಿಲ್ಲದೆಯೇ ಮಾಡುವರು.

೪೦. ಕಲಿಯುಗದಲ್ಲಿ ಪ್ರಾಯಿಕವಾಗಿ ರಾಜರು ಶೂದ್ರರಾಗಿರುವರು. ಪಾಷಂಡಿಗಳಿಗೆ ಅಧಿಕಾರವು ಸಿಕ್ಕಿ ಪ್ರಜಾಪ್ರವರ್ತಕರಾಗುವರು. ಆಗ ಪ್ರಜೆಗಳಲ್ಲಿ ಭ್ರೂಣಹತ್ಯಾ ಅಂದರೆ ಗರ್ಭದಲ್ಲಿಯೇ ಶಿಶುಹನನಾದಿಗಳು ಉಂಟಾಗುತ್ತವೆ.

೪೧-೪೨. ಕಲಿಯುಗದ ಕೊನೆಯಭಾಗವಲ್ಲಿ ಆಯುಸ್ಸು, ಬುದ್ಧಿಶಕ್ತಿ, ಬಲ, ಕುಲರೂಪ, ಇವುಗಳು ಕಡಿಮೆಯಾಗುತ್ತವೆ. ಆಗ ಬ್ರಾಹ್ಮಣರು ಶೂದ್ರಾಚಾರ ಗಳನ್ನೂ ಶೂದ್ರರು ಬ್ರಾಹ್ಮಣಾಚಾರಗಳನ್ನೂ ಮಾಡುವರು. ಕಳ್ಳರು ರಾಜರಾಗಿ ಪ್ರಜೆಗಳ ಸರ್ವಸ್ವವನ್ನೂ ಅಪಹರಿಸುವರು. ರಾಜರು ಕಳ್ಳರಾಗಿ ಪ್ರಜೆಗಳಿಗೆ ಬಾಧೆ ಯನ್ನು ಕೊಡುವರು. ಮತ್ತು ಭೃತ್ಯರು ಯಜಮಾನರಲ್ಲಿ ಪ್ರೀತಿಯನ್ನು ಬಿಡುವರು.

೪೩. ಕಲಿಯುಗದಲ್ಲಿ ಸ್ತ್ರೀಯರಾದರೋ ದುಶ್ಶೀಲರೂ, ದುರ್ನಡತೆಯುಳ್ಳ ವರೂ, ಮದ್ಯಮಾಂಸಪ್ರಿಯರೂ, ವಂಚನಕುಶಲೆಯರೂ, ಪತಿಭಕ್ತಿರಹಿತರೂ, ಆಗಿರುವರು.

ಶ್ವಾಪಾದಪ್ರಬಲತ್ವಂ ಚ ಗವಾಂ ಚೈವಾಪ್ಯುಪಕ್ಷಯಃ ।
ಸಾಧೂನಾಂ ವಿನಿವೃತ್ತಿಶ್ಚ ವಿದ್ಯಾತ್ತಸ್ಮಿನ್ ಕಲೌ ಯುಗೇ ॥ ೪೪ ॥

ತದಾ ಸೂಕ್ಷ್ಮೇ ಮಹೋದರ್ಕೇ ದುರ್ಲಭೋ ಭೋಗಿನಾಂ ತಥಾ ।
ಚತುರಾಶ್ರಮಶೈಥಿಲ್ಯಾದ್ಧರ್ಮಃ ಪ್ರವಿಚಲಿಷ್ಯತಿ ॥ ೪೫ ॥

ತದಾ ಹ್ಯಲ್ಪಫಲಾ ದೇವೀ ಭವೇದ್ಭೂಮಿರ್ಮಹೀಯಸೀ ।
ಶೂದ್ರಾಸ್ತಪಶ್ಚರಿಷ್ಯಂತಿ ಯುಗಾಂತೇ ಪ್ರತ್ಯುಪಸ್ಥಿತೇ ॥ ೪೬ ॥

ತದಾ ಹ್ಯೈಕಾಹಿಕೋ ಧರ್ಮೋ ದ್ವಾಪರೇ ಯಶ್ಚ ಮಾಸಿಕಃ ।
ತ್ರೇತಾಯಾಂ ವತ್ಸರಸ್ಥಶ್ಚ ಏಕಾಹಾದತಿರಿಚ್ಯತೇ ॥ ೪೭ ॥

---

೪೪. ಇಂತಹ ಕಲಿಯುಗನಲ್ಲಿ ನರಿ ನಾಯಿಗಳೇ ಮೊದಲಾದ ದುಷ್ಟಮೃಗಗಳು ಅಧಿಕವಾಗಿ ಗೋವು ಮೊದಲಾದ ಉಪಯುಕ್ತ ಸಾಧುಪ್ರಾಣಿಗಳು ಕ್ಷೀಣವಾಗುವುವು. ಇದರಂತೆ ಸಾಧುಸತ್ಪುರುಷರಿಗೆ ಹೀನತೆಯೂ ದುಷ್ಟರಿಗೆ ಪ್ರಾಬಲ್ಯವೂ ಉಂಟಾಗುವುವು.

೪೫. ಇಂತಹ ಸೂಕ್ಷ್ಮವಾದ ಕಲಿಯುಗದಲ್ಲಿ ಭೋಗಿಜನರಿಗೆ ಮುಂದೆ ಶುಭವು ಬರುವುದೆಂಬುದೂ ದುರ್ಲಭವಾಗಿಯೇ ತೋರುವುದು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಧರ್ಮಗಳೂ ಶಿಥಿಲವಾಗಿ ಪ್ರಜೆಗಳಿಗೆ ಅನೇಕೋಪದ್ರವಗಳು ಸಂಭವಿಸುತ್ತವೆ.

೪೬. ಅಂತಹ ಕಲಿಕಾಲದಲ್ಲಿ ಪೂಜ್ಯಳಾದ ಭೂದೇವಿಯು ಅಲ್ಪಫಲದಾಯಕ ಳಾಗುವಳು. ಶೂದ್ರರು ತಪಸ್ಸೇ ಮೊದಲಾದ ಶುಭಾಚಾರಗಳನ್ನೂ ಮಾಡುವರು.

೪೭. ಇಂತಹ ಕಲಿಯುಗದಲ್ಲಿ ಪುರುಷನು ಒಂದು ದಿವಸ ಸದಾಚಾರ ಸತ್ಕರ್ಮಾದಿಗಳನ್ನು ಮಾಡಿದರೆ ದ್ವಾಪರಯುಗದಲ್ಲಿ ಒಂದು ತಿಂಗಳು ಶುಭಕರ್ಮ ಗಳನ್ನು ಮಾಡಿದ ಫಲವೂ, ತ್ರೇತಾಯುಗದಲ್ಲಿ ಒಂದುವರ್ಷ ಸತ್ಕರ್ಮಗಳನ್ನು ಮಾಡಿದ ಫಲವೂ ಬರುವುದು. ಒಂದು ದಿವಸದ ಕಾರ್ಯವು ವರ್ಷದ ಕರ್ಮಗಳನ್ನು ಮೀರುವುದು.

ಅರಕ್ಷಿತಾರೋ ಹರ್ತಾರೋ ಬಲಿಭಾಗಸ್ಯ ಪಾರ್ಥಿವಾಃ ।
ಯುಗಾಂತೇಷು ಭವಿಷ್ಯಂತಿ ಸ್ವರಕ್ಷಣಪರಾಯಣಾಃ ॥ ೪೮ ॥

ಅಕ್ಷತ್ರಿಯಾಶ್ಚ ರಾಜಾನೋ ವಿಶಃ ಶೂದ್ರೋಪಜೀವಿನಃ ।
ಶೂದ್ರಾಭಿಮಾನಿನಃ ಸರ್ವೇ ಯುಗಾಂತೇ ದ್ವಿಜಸತ್ತಮಾಃ ॥ ೪೯ ॥

ಪತಯಶ್ಚ ಭವಿಷ್ಯಂತಿ ಬಹವೋಽಸ್ಮಿನ್ ಕಲೌ ಯುಗೇ ।
ಚಿತ್ರವರ್ಷೀ ತದಾ ದೇವೋ ಯದಾ ಸ್ಯಾತ್ತು ಯುಗಕ್ಷಯಃ ॥ ೫೦ ॥

ಸರ್ವೇ ವಾಣಿಜಕಾಶ್ಚಾಪಿ ಭವಿಷ್ಯಂತ್ಯಧಮೇ ಯುಗೇ ।
ಭೂಯಿಷ್ಠಂ ಕೂಟಮಾನೈಶ್ಚ ಪಣ್ಯವಿಕ್ರೀತತೇಜನೈಃ ॥ ೫೧ ॥

---

೪೮. ಕಲಿಯುಗದ ಕೊನೆಯ ಭಾಗದಲ್ಲಿ ರಾಜರು ಸ್ವಾರ್ಥಪರರೂ, ಆತ್ಮ ರಕ್ಷಣಪರಾಯಣರೂ ಆಗಿ, ಯಜ್ಞಯಾಗಾದಿಗಳನ್ನೂ, ಪ್ರಜೆಗಳನ್ನೂ ರಕ್ಷಣಮಾಡದೆ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ, ಸತ್ಕರ್ಮಗಳಿಗೆ ವಿಘ್ನಕಾರಿಗಳಾಗುವರು.

೪೯. ಆ ಯುಗದಲ್ಲಿ ಕ್ಷತ್ರಿಯರಲ್ಲದವರು ರಾಜರಾಗಿಯೂ, ವೈಶ್ಯರು ಶೂದ್ರ ಜೀವಿಗಳಾಗಿಯೂ, ಬ್ರಾಹ್ಮಣ ಶೂದ್ರಾಭಿಮಾನಿಗಳೂ, ಶೂದ್ರೋಪಜೀವಿಗಳೂ ಆಗಿಯೂ ಇರುವರು ಎಂಬುದನ್ನು ವಿಪ್ರೋತ್ತಮರೇ ಕೇಳಿರೆಂದನು.

೫೦. ಇಂತಹ ಕಲಿಯುಗದ ಕೊನೆಯಲ್ಲಿ ಜಗತ್ತಿನಲ್ಲಿ ಬಹುನಾಯಕರಾಗುವರು. ಆಗ ದೇವನಾದ ಇಂದ್ರನು ಚಿತ್ರವಿಚಿತ್ರವಾಗಿ ವಿವಿಧ ರೀತಿಯಲ್ಲಿ ವೃಷ್ಟಿಯನ್ನು ಕರೆಯುವನು.

೫೧. ಇಂತಹ ನೀಚವಾದ ಕಲಿಯುಗದಲ್ಲಿ ಸರ್ವವರ್ಣದವರೂ ವ್ಯಾಪಾರ ಕ್ಕಾಗಿ ಹೊರಟು, ಅಳತೆಯಲ್ಲಿಯೂ, ತೂಕದಲ್ಲಿಯೂ ಮೋಸವನ್ನು ಮಾಡಿ ಕಟಪ ವೃತ್ತಿಯಿಂದ ಜೀವಿಸುವರು.

ಕುಶೀಲಚರ್ಯಾ ಪಾಷಂಡೈರ್ವೃಥಾರೂಪೈಃ ಸಮಾವೃತಂ ।
ಪುರುಷಾಲ್ಪಂ ಬಹುಸ್ತ್ರೀಕಂ ಯುಗಾಂತೇ ಪರ್ಯುಪಸ್ಥಿತೇ ॥ ೫೨ ॥

ಬಹುಯಾಚನಕೋ ಲೋಕೋ ಭವಿಷ್ಯತಿ ಪರಸ್ಪರಂ ।
ಕ್ರವ್ಯಾದನಃ ಕ್ರೂರವಾಕ್ಯೋ ನಾರ್ಜವೋ ನಾನಸೂಯಕಃ ॥ ೫೩ ॥

ನ ಕೃತೇ ಪ್ರತಿಕರ್ತಾ ಚ ಕ್ಷೀಣೋ ಲೋಕೋ ಭವಿಷ್ಯತಿ ।
ಅಶಂಕಾ ಚೈವ ಪತಿತೇ ತದ್ಯುಗಾಂತಸ್ಯ ಲಕ್ಷಣಂ ॥ ೫೪ ॥

ನರಶೂನ್ಯಾ ವಸುಮತೀ ಶೂನ್ಯಾ ಚೈವ ಭವಿಷ್ಯತಿ ।
ಮಂಡಲಾನಿ ಭವಂತ್ಯತ್ರ ದೇಶೇಷು ನಗರೇಷು ಚ ॥ ೫೫ ॥

---

೫೨. ಕಲಿಯುಗದಲ್ಲಿ ಪಾಷಂಡಿಗಳು ಕಪಟವೇಷಧಾರಿಗಳಾಗಿ ಸಂಗೀತ, ನಾಟಕಪೇ ಮೊದಲಾದುವುಗಳಿಂದ ಜನರನ್ನು ಮೋಹಗೊಳಿಸುವರು. ಈ ಕಲಿಯುಗದ ಕೊನೆಯ ಭಾಗದಲ್ಲಿ ಕಲಹಾದಿಗಳಿಂದ ಪುರುಷರು ಹತರಾಗಿ ಅಲ್ಪರಾಗಿಯೂ, ಸ್ತ್ರೀಯರು ಅಧಿಕರಾಗಿಯೂ ಇರುವರು.

೫೩. ಈ ಯುಗದಲ್ಲಿ ಯಾಚಕರು ಅಧಿಕರಾಗುತ್ತಾರೆ. ಪರಸ್ಪರ ಯಾಚನಾ ವೃತ್ತಿಯಿಂದಲೇ ಅನೇಕರು ಜೀವಿಸುತ್ತಾರೆ. ಜನರು ಮಾಂಸಭಕ್ಷಕರಾಗಿಯೂ, ಕ್ರೂರಿಗಳಾಗಿಯೂ, ದ್ವೇಷಾಸೂಯೆಗಳುಳ್ಳವರಾಗಿಯೂ, ಋಜುಮಾರ್ಗವಿಹೀನ ರಾಗಿಯೂ ಇರುವರು.

೫೪. ಕಲಿಯುಗದಲ್ಲಿ ಉಪಕಾರಕ್ಕೆ ಪ್ರತ್ಯುಪಕಾರವಾಗದೆ ಅಪಕಾರವೇ ಆಗುವುದು. ಜನರು ಅಲ್ಪಶಕ್ತರಾಗಿರುವರು. ಮತ್ತು ಆತಂಕವುಳ್ಳವರಾಗಿಯೂ, ಪತಿತರಾಗಿಯೂ ಇರುವರು.

೫೫. ಭೂಮಿಯಲ್ಲಿ ಪುರುಷರು ಇಲ್ಲದೆ ಸ್ತ್ರೀಪ್ರಾಯಕವಾಗುವುದು. ಪ್ರಜೆಗ ಳಿಲ್ಲದೆ ಶೂನ್ಯವಾಗಿಯೂ ಆಗುವುದು. ಅನೇಕ ದೇಶಗಳು, ನಗರಗಳು ಕೇವಲ ಶೂನ್ಯ ವಾಗಿ ಭೂಮಿಮಾತ್ರ ಕಾಣುವುದು.

ಅಲ್ಪೋದಕಾ ಚಾಲ್ಪಫಲಾ ಭವಿಷ್ಯತಿ ವಸುಂಧರಾ ।
ಗೋಪ್ತಾರಶ್ಚಾಪ್ಯ ಗೋಪ್ತಾರಃ ಪ್ರಭವಿಷ್ಯಂತ್ಯಶಾಸನಾಃ ॥ ೫೬ ॥

ಹರ್ತಾರಃ ಪರರತ್ನಾನಾಂ ಪರದಾರಪ್ರಧರ್ಷಕಾಃ ।
ಕಾಮಾತ್ಮಾನೋ ದುರಾತ್ಮಾನೋ ಹ್ಯಧರ್ಮಾತ್ಸಾಹಸಪ್ರಿಯಾಃ ॥ ೫೭ ॥

ಅನಷ್ಟಚೇತನಾಃ ಪುಂಸೋ ಮುಕ್ತಕೇಶಾಸ್ತು ಚೂಲಿಕಾಃ ।
ಊನಷೋಡಶವರ್ಷಾಶ್ಚ ಪ್ರಜಾಯಂತೇ ಯುಗಕ್ಷಯೇ ॥ ೫೮ ॥

ಶುಲ್ಕದಂತಾ ಜಿತಾಕ್ಷಾಶ್ಚ ಮುಂಡಾಃ ಕಾಷಾಯವಾಸಸಃ ।
ಶೂದ್ರಾ ಧರ್ಮಂ ಚರಿಷ್ಯಂತಿ ಯುಗಾಂತೇ ಪರ್ಯುಪಸ್ಥಿತೇ ॥ ೫೯ ॥

---

೫೬. ಕಲಿಯುಗದಲ್ಲಿ ಅರಾಜಕವಾಗಿ ಪ್ರಜೆಗಳನ್ನು ಶಿಕ್ಷಿಸುವವರೂ, ಆಜ್ಞಾದಾಯಕರೂ, ಮಾರ್ಗದರ್ಶಿಗಳೂ ಇಲ್ಲದೆ ಬಹಳ ಕಷ್ಟಗಳು ಸಂಭವಿಸುವುವು. ಅಲ್ಪವಾದ ವೃಷ್ಟಿಯಿಂದ ಸ್ವಲ್ಪಜಲವೂ, ಅಲ್ಲಲ್ಲಿ ಪ್ರಲಯಗಳೂ ಉಂಟಾಗುವುವು.

೫೭. ಆ ಯುಗದಲ್ಲಿ ಪ್ರಜೆಗಳು ಪರಧನ, ಪರಸ್ತ್ರೀಗಳನ್ನು ಅಪಹಾರಕರೂ. ಕಾಮುಕರೂ, ದುರಾಚಾರಿಗಳೂ, ಅತ್ಯಾಚಾರಿಗಳೂ, ಅಧಾರ್ಮಿಕರೂ, ಸಾಹಸಪ್ರಿಯರೂ ಆಗಿರುವರು.

೫೮. ಕಲಿಯುಗದ ಕೊನೆಯಲ್ಲಿ ಪುರುಷರು ವಿವೇಕಶೂನ್ಯರಾಗಿಯೂ, ಕೇಶಶೂನ್ಯರಾಗಿಯೂ, ಮುಂಜುಟ್ಟುಳ್ಳವರಾಗಿಯೂ, ಅಲ್ಪಾಯುಷ್ಯವಂತರಾಗಿಯೂ ಆಗುತ್ತಾರೆ.

೫೯. ಕಲಿಯುಗದ ಪ್ರಜೆಗಳು ಕೃತ್ರಿಮದಂತವುಳ್ಳವರಾಗಿಯೂ, ನೇತ್ರಪಾಟವಶೂನ್ಯರಾಗಿಯೂ, ಮುಂಡರಾಗಿಯೂ, ಕಾವೀವಸ್ತ್ರಧಾರಕರಾಗಿಯೂ ಇರುವರು. ಶೂದ್ರರು ಧರ್ಮವನ್ನು ಮಾಡುವರು. ಇತರರು ಧರ್ಮವನ್ನು ತ್ಯಜಿಸುವರು

**ಸಸ್ಯಚೋರಾ ಭವಿಷ್ಯಂತಿ ತಥಾ ಚೈಲಾಭಿಮರ್ಷನಾಃ ।**
**ಚೌರಾಶ್ಚೌರಸ್ಯ ಹರ್ತಾರೋ ಹಂತುಹರ್ತಾರ ಏವ ಚ ॥ ೬೦ ॥**

**ಜ್ಞಾನಕರ್ಮಣ್ಯುಪರತೇ ಲೋಕೇ ನಿಷ್ಕ್ರಿಯತಾಂ ಗತೇ ।**
**ಕೀಟಮೂಷಿಕಸರ್ಪಾಶ್ಚ ದಂಶಯಿಷ್ಯಂತಿ ಮಾನವಾ ॥ ೬೧ ॥**

**ಸುಭಿಕ್ಷಂ ಕ್ಷೇಮಮಾರೋಗ್ಯಂ ಸಾಮರ್ಥ್ಯಂ ದುರ್ಲಭಂ ಭವೇತ್ ।**
**ಕೌಶಿಕಾಃ ಪ್ರತಿವತ್ಸ್ಯಂತಿ ದೇಶಾ ಕ್ಷುದ್ಭಯಪೀಡಿತಾ ॥ ೬೨ ॥**

**ದುಃಖೇನಾಭಿಪ್ಲುತಾನಾಂ ಚ ಪರಮಾಯುಃ ಶತಂ ಭವೇತ್ ।**
**ದೃಶ್ಯಂತೇ ನ ಚ ದೃಶ್ಯಂತೇ ವೇದಾಃ ಕಲಿಯುಗೇಽಖಿಲಾಃ ॥ ೬೩ ॥**

**ಉತ್ಸೀದಂತಿ ತಥಾ ಯಜ್ಞಾಃ ಕೇವಲಾ ಧರ್ಮಪೀಡಿತಾಃ ।**
**ಕಷಾಯಿಣಶ್ಚ ನಿರ್ಗ್ರಂಥಾಸ್ತಥಾ ಕಾಪಾಲಿನಶ್ಚ ಹ ॥ ೬೪ ॥**

---

೬೦. ಕಲಿಯುಗದ ಪ್ರಜೆಗಳು ಸಸ್ಯಚೋರರೂ, ಧಾನ್ಯಚೋರರೂ, ವಸ್ತ್ರಚೋರರೂ ಆಗಿರುವರು. ಚೋರರು ಇತರರಾದ ಕಳ್ಳರ ಮನೆಯಲ್ಲಿ ಕದಿಯುವರು. ವಂಚಕರನ್ನು ಬೇರೆ ವಂಚಕರು ಮೋಸಮಾಡುವರು. ಇದು ಕಲಿಯ ಧರ್ಮವು.

೬೧. ಕಲಿಯುಗದಲ್ಲಿ ಜ್ಞಾನ ಕರ್ಮಗಳು ನಷ್ಟವಾಗಿ ಜನರು ಕ್ರಿಯಾಭ್ರಷ್ಟರಾಗುವರು. ಕ್ರಿಮಿಕೀಟಗಳು, ಇಲಿಗಳು, ಸರ್ಪಗಳು ಇವು ಪ್ರಜೆಗಳಿಗೆ ಹಿಂಸೆಯನ್ನುಂಟುಮಾಡುವುವು.

೬೨. ದೇಶಗಳಲ್ಲಿ ಸುಭಿಕ್ಷವೂ, ಪ್ರಜೆಗಳಿಗೆ ಕ್ಷೇಮ, ಆರೋಗ್ಯ, ಶಕ್ತಿ ಇವುಗಳು ಅತಿದುರ್ಲಭವಾಗುವುವು. ಹಸಿವು ಬಾಯಾರಿಕೆಗಳಿಂದ ಪೀಡಿತವಾದ ಪ್ರಜೆಗಳನ್ನು ಗೂಬೆಗಳು ಹೆದರಿಸಿ ಪೀಡಿಸುತ್ತವೆ.

೬೩. ದುಃಖದಿಂದ ಪೀಡಿತರಾದ ಪ್ರಜೆಗಳ ಆಯುಸ್ಸವು ಪರಮಾವಧಿ ನೂರುವರ್ಷಗಳಾಗಿರುವುದು. ಕಲಿಯುಗದಲ್ಲಿ ವೇದಗಳು ದೃಶ್ಯಾದೃಶ್ಯವಾಗಿರುವುವು.

೬೪. ಯಜ್ಞಯಾಗಾದಿ ಸತ್ಕರ್ಮಗಳು ನಾಶವಾಗುವುವು. ಧರ್ಮಗಳು ಲುಪ್ತವಾಗುವುವು. ವೇದದ್ವೇಷಿಗಳೂ, ಕಾಷಾಯವಸ್ತ್ರಧಾರಿಗಳೂ, ಮುಂಡಿಗಳೂ, ಕಪಾಲಧಾರಿಗಳೂ ಆದ ಪಾಷಂಡಿಗಳು ಪ್ರಬಲರಾಗಿರುವರು.

ವೇದವಿಕ್ರಯಿಣಾಶ್ಚಾನ್ಯೇ ತೀರ್ಥವಿಕ್ರಯಿಣೋಽಪರೇ ।
ವರ್ಣಾಶ್ರಮಾಣಾಂ ಯೇ ಚಾನ್ಯೇ ಪಾಷಂಡಾಃ ಪರಿಪಂಥಿನಃ ॥ ೬೫ ॥

ಉತ್ಪದ್ಯಂತೇ ತಥಾ ತೇ ವೈ ಸಂಪ್ರಾಪ್ತೇ ತು ಕಲೌ ಯುಗೇ ।
ನಾಧೀಯಂತೇ ತದಾ ವೇದಾಃ ಶೂದ್ರಾ ಧರ್ಮಾರ್ಥಕೋವಿದಾಃ ॥ ೬೬ ॥

ಯಜಂತೇ ನಾಶ್ವಮೇಧೇನ ರಾಜಾನಃ ಶೂದ್ರಯೋನಯಃ ।
ಸ್ತ್ರೀವಧಂ ಗೋವಧಂ ಕೃತ್ವಾ ಹತ್ವಾ ಚೈವ ಪರಸ್ಪರಂ ॥ ೬೭ ॥

ದುಃಖಪ್ರಚಾರತೋಽಲ್ಪಾಯುರ್ದೇಶೋತ್ಸಾದಃ ಸರೋಗತಾ ।
ಮೋಹೋ ಗ್ಲಾನಿಸ್ತಥಾ ಸೌಖ್ಯಂ ತಮೋವೃತ್ತಂ ಕಲೌ ಸ್ಮೃತಂ ॥ ೬೮ ॥

---

೬೫. ಕೆಲವರು ವೇದವಿಕ್ರಯವಮಾಡಿ ಜೀವಿಸುವರು. ಕೆಲವರು ತೀರ್ಥ ವಿಕ್ರಯದಿಂದ ಜೀವಿಸುವರು. ಪಾಷಂಡಿಗಳು ವರ್ಣಾಶ್ರಮಾಚಾರಗಳಿಗೆ ವಿರುದ್ಧ ವಾಗಿಯೂ, ಪ್ರತಿಬಂಧಕರಾಗಿಯೂ ಇರುವರು.

೬೬. ಕಲಿಯುಗವು ಹುಟ್ಟಿದ ಕೂಡಲೇ ಪಾಷಂಡಿಗಳು ಉತ್ಪನ್ನರಾಗಿ ವೇದ ದ್ವೇಷವನ್ನು ಮಾಡುವರು. ಆಗ ಬ್ರಾಹ್ಮಣಾದಿಗಳು ವೇದಗಳನ್ನು ಅಧ್ಯಯನ ಮಾಡುವುದಿಲ್ಲ. ಶೂದ್ರರು ಧರ್ಮಾರ್ಥಗಳಲ್ಲಿ ಕುಶಲರಾಗಿ ವಿಚಾರಮಾಡುವರು.

೬೭. ಶೂದ್ರಜಾತಿಯಲ್ಲಿ ಉತ್ಪನ್ನರಾದ ಧೊರೆಗಳು ಅಶ್ವಮೇಧಾದಿ ಯಾಗ ಗಳನ್ನು ಮಾಡುವುದಿಲ್ಲ. ಅದಕ್ಕೆ ಬದಲು ಸ್ತ್ರೀವಧವನ್ನೂ, ಗೋವುಗಳ ವಧವನ್ನೂ ಮಾಡುವರು. ಪರಸ್ಪರ ಕಲಹದಿಂದ ಅನ್ಯೋನ್ಯವಾಗಿ ಕೊಲ್ಲುವರು. ಪರಸ್ಪರ ಹೊಡೆದಾಡಿ ಸ್ವಕಾರ್ಯಗಳನ್ನು ಸಾಧಿಸಿಕೊಳ್ಳುವರು.

೬೮. ಈ ಕಲಿಕಾಲದಲ್ಲಿ ಪರಹಿಂಸೆಯನ್ನು ಮಾಡುವುದರಿಂದ ಪ್ರಜೆಗಳಿಗೆ ಅಲ್ಪಾಯುಷ್ಯವೂ, ದೇಶಗಳ ನಾಶವೂ, ರೋಗೋಪದ್ರವಗಳೂ, ಮೋಹವೂ, ಆಯಾಸವೂ, ಅಸೌಖ್ಯವೂ, ಅಜ್ಞಾನದ ಕಾರ್ಯಗಳೂ ಇವುಗಳು ಉಂಟಾಗುವುವು.

**ಪ್ರಜಾ ತು ಭ್ರೂಣಹತ್ಯಾಯಾಮಥ ವೈ ಸಂಪ್ರವರ್ತತೇ |**
**ತಸ್ಮಾದಾಯುರ್ಬಲಂ ರೂಪಂ ಕಲಿಂ ಪ್ರಾಪ್ಯ ಪ್ರಹೀಯತೇ ||**
**ದುಃಖೇನಾಭಿಪ್ಲುತಾನಾಂ ವೈ ಪರಮಾಯುಃ ಶತಂ ನೃಣಾಂ || ೧೯ ||**

**ದೃಶ್ಯಂತೇ ನಾಭಿದೃಶ್ಯಂತೇ ವೇದಾಃ ಕಲಿಯುಗೇಽಖಿಲಾಃ |**
**ಉತ್ಸೀದಂತೇ ತದಾ ಯಜ್ಞಾಃ ಕೇವಲಾ ಧರ್ಮಪೀಡಿತಾಃ || ೨೦ ||**

**ತದಾ ತ್ವಲ್ಪೇನ ಕಾಲೇನ ಸಿದ್ಧಿಂ ಯಾಸ್ಯಂತಿ ಮಾನವಾಃ |**
**ಧನ್ಯಾ ಧರ್ಮಂ ಚರಿಷ್ಯಂತಿ ಯುಗಾಂತೇ ಧರ್ಮಸತ್ತಮಾಃ || ೨೧ ||**

**ಶ್ರುತಿಸ್ಮೃತ್ಯುದಿತಂ ಧರ್ಮಂ ಯೇ ಚರಂತ್ಯನಸೂಯಕಾಃ |**
**ತ್ರೇತಾಯಾಂ ವಾರ್ಷಿಕೋ ಧರ್ಮೋ ದ್ವಾಪರೇ ಮಾಸಿಕಃ ಸ್ಮೃತಃ ||**
**ಯಥಾಶಕ್ತಿ ಚರನ್ ಪ್ರಾಜ್ಞಸ್ತದಹ್ನಾ ಪ್ರಾಪ್ನುಯಾತ್ ಕಲೌ || ೨೨ ||**

---

೧೯. ಪ್ರಜೆಗಳು ಭ್ರೂಣಹತ್ಯೆಯಲ್ಲಿ ಆಸಕ್ತರಾಗಿರುವರು. ಇದರಿಂದ ಕಲಿಯಲ್ಲಿ ಆಯುಸ್ಸು, ಬಲ, ರೂಪ ಇವು ಕಲಿಯುಗದಲ್ಲಿ ಕ್ಷೀಣವಾಗುವುವು. ಈ ರೀತಿಯಾದ ನಾನಾದುಃಖದಿಂದಾವೃತರಾದ ಪ್ರಜೆಗಳಿಗೆ ಆಯುಷ್ಯವು ಪರಮಾವಧಿ ಒಂದು ನೂರು ವರ್ಷಗಳಿರುವುವು

೨೦. ಕಲಿಯುಗದಲ್ಲಿ ಸಮಸ್ತವಾದ ವೇದಗಳೂ, ದೃಶ್ಯಾದೃಶ್ಯಗಳಾಗಿರುತ್ತವೆ. ಅಂದರೆ ಬಹಳ ಅಪರೂಪವಾಗಿ ಸಾವಿರಕ್ಕೆ ಒಬ್ಬಿಬ್ಬರು ವೇದಾಧ್ಯಯನವನ್ನು ಮಾಡುವರು. ಯಜ್ಞಯಾಗಾದಿಗಳು ಧರ್ಮಗಳಿಂದ ಪೀಡಿತವಾಗಿ ನಾಶವಾಗುವುವು.

೨೧. ಇಂತಹ ಕಲಿಯುಗದಲ್ಲಿ ಯಾವ ಸತ್ಪುರುಷರು ಧಾರ್ಮಿಕಕಾರ್ಯಗಳನ್ನು ಮಾಡುವರೋ ಅವರು ಅಲ್ಪಕಾಲದಲ್ಲಿ ಮಹಾಸಿದ್ಧಿಯನ್ನು ಪಡೆಯುವರು. ಎಲೈ ಮುನಿವರ್ಯರೇ, ಇಂತಹ ಕಲಿಯುಗದಲ್ಲಿ ಭಾಗ್ಯಶಾಲಿಗಳು ಧರ್ಮವನ್ನು ಆಚರಿಸಿ ಮಹಾಫಲವನ್ನು ಹೊಂದುವರು.

೨೨. ಯಾವ ಮನುಷ್ಯನು ಶ್ರುತಿಸ್ಮೃತ್ಯುಕ್ತವಾದ ಧರ್ಮಕಾರ್ಯಗಳನ್ನು ಮಾಡುವನೋ, ಅಂತಹ ಪುಣ್ಯಾತ್ಮನು ತ್ರೇತಾಯುಗದಲ್ಲಿ ಒಂದು ವರ್ಷ ಮಾಡಿದ ಧರ್ಮಗಳ ಫಲವನ್ನೂ, ದ್ವಾಪರಯುಗದಲ್ಲಿ ಒಂದು ತಿಂಗಳು ಮಾಡಿದ ಧರ್ಮದ ಫಲವನ್ನೂ ಒಂದೇ ದಿವಸದಲ್ಲಿ ಹೊಂದುವನು. ಮನುಷ್ಯನು ತನ್ನ ಯೋಗ್ಯತಾನುಗುಣವಾಗಿ ಧರ್ಮಕಾರ್ಯಗಳನ್ನು ಮಾಡಿದರೆ ಸಂಪೂರ್ಣಫಲವು ಶೀಘ್ರವಾಗಿಯೇ ಬರುವುದು.

**ಏಷಾ ಕಲಿಯುಗೇಽವಸ್ಥಾ ಸಂಧ್ಯಾಂಶಂ ತು ನಿಬೋಧ ಮೇ ।**
**ಯುಗೇ ಯುಗೇ ತು ಹೀಯಂತೇ ತ್ರೀಂಸ್ತ್ರೀನ್ ಪಾದಾಂಶ್ಚ ಸಿದ್ಧಯಃ ॥೭೩॥**

**ಯುಗಸ್ವಭಾವಾತ್ಸಂಧ್ಯಾಸ್ತು ತಿಷ್ಠಂತೀವಾಸ್ತು ಪಾದಶಃ ।**
**ಸಂಧ್ಯಾಸ್ವಭಾವಾಚ್ಚಾಂಶೇಷು ಪಾದಶಸ್ತೇ ಪ್ರತಿಷ್ಠಿತಾಃ ॥ ೭೪ ॥**

**ಏವಂ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಿಕೇ ।**
**ತೇಷಾಂ ಶಾಸ್ತಾ ಹ್ಯಸಾಧೂನಾಂ ಭೃಗೂಣಾಂ ನಿಧನೋತ್ಥಿತಃ ॥ ೭೫ ॥**

**ಗೋತ್ರೇಣ ವೈ ಚಂದ್ರಮಸೋ ನಾಮ್ನಾ ಪ್ರಮಿತಿರುಚ್ಯತೇ ।**
**ಮಾಧವಸ್ಯ ತು ಸೋಽಂಶೇನ ಪೂರ್ವಂ ಸ್ವಾಯಂಭುವೇಂತರೇ ॥ ೭೬ ॥**

---

೭೩. ಎಲೈ ವಿಪ್ರೋತ್ತಮರೇ, ಇದುವರೆಗೂ ಹೇಳಿರುವುದು ಕಲಿಯುಗದ ಅವಸ್ಥೆಯಾಗಿದೆ. ಈ ಕಲಿಯುಗದ ಸಂಧ್ಯಾಂಶವನ್ನು ನಿರೂಪಿಸುವೆನು ಕೇಳಿರೆಂದನು. ಪ್ರತಿಯುಗಗಳ ಸಂಧ್ಯಾಂಶಗಳಲ್ಲಿ ಆಯಾ ಯುಗಗಳ ಮೂರು ಭಾಗಗಳು ನಾಶವಾಗಿ ಒಂದು ಭಾಗದಷ್ಟು ಮಾತ್ರ ಧರ್ಮವು ಉಳಿಯುವುದು.

೭೪. ಆಯಾ ಯುಗಗಳ ಸಿದ್ಧಿಗಳು ಆಯಾ ಸಂಧ್ಯಾಂಶಗಳಲ್ಲಿ ನಾಲ್ಕು ಭಾಗಗಳಲ್ಲಿ ಒಂದು ಪಾದಮಾತ್ರ ಉಳಿಯುವುದು. ಸಂಧ್ಯಾಕಾಲದಲ್ಲಿ ಯುಗಧರ್ಮಗಳು ಒಂದು ಪಾದಮಾತ್ರ ಉಳಿಯುವುದು.

೭೫. ಹೀಗೆ ಕಲಿಯುಗದ ಸಂಧ್ಯಾಂಶಕಾಲವು ಬರಲು ಭಗವಂತನು ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿಯೂ, ಭೃಗುವಂಶಿಕರಾದ ದುಷ್ಟರನ್ನು ಮೂಲೋತ್ಪಾಟನಮಾಡುವುದಕ್ಕಾಗಿಯೂ ಅವತರಿಸುವನು.

೭೬. ಪೂರ್ವದ ಸ್ವಾಯಂಭುವ ಮನ್ವಂತರದಲ್ಲಿ ಶ್ರೀ ಭಗವಂತನು ಚಂದ್ರವಂಶದಲ್ಲಿ ವಸುಮತಿಯೆಂಬ ನಾಮದಿಂದ ಅವತರಿಸುವನು. ಅಂದರೆ ಶ್ರೀ ಮಹಾವಿಷ್ಣುವು ಒಂದಂಶದಿಂದ ದುಷ್ಟನಿಗ್ರಹಕ್ಕಾಗಿ ಅವತರಿಸುವನು.

ಸಮಾಃ ಸ ವಿಂಶತಿಂ ಪೂರ್ಣಾಃ ಪರ್ಯಟೇ ವೈ ವಸುಂಧರಾಂ ।
ಆಚಕರ್ಷ ಸ ವೈ ಸೇನಾಂ ಸವಾಜಿರಥಕುಂಜರಾಂ ॥ ೭೭ ॥

ಪ್ರಗೃಹೀತಾಯುಧೈರ್ವಿಪ್ರೈಃ ಶತಶೋಽಥ ಸಹಸ್ರಶಃ ।
ಸ ತದಾ ತೈಃ ಪರಿವೃತೋ ಮ್ಲೇಚ್ಛಾನ್ ಹಂತಿ ಸಹಸ್ರಶಃ ॥ ೭೮ ॥

ಸ ಹತ್ವಾ ಸರ್ವಗಶ್ಚೈವ ರಾಜ್ಞಸ್ತಾನ್ ಶೂದ್ರಯೋನಿಜಾನ್ ।
ಪಾಷಂಡಾನ್ ಸ ತತಃ ಸರ್ವಾನ್ನಿಃಶೇಷಾನ್ ಕೃತವಾನ್ ಪ್ರಭುಃ ॥ ೭೯ ॥

ನಾತ್ಯರ್ಥಂ ಧಾರ್ಮಿಕಾ ಯೇ ಚ ತಾನ್ ಸರ್ವಾನ್ ಹಂತಿ ಸರ್ವಶಃ ।
ವರ್ಣವ್ಯತ್ಯಾಸಜಾತಾಂಶ್ಚ ಯೇ ಚ ತಾನುಪಜೀವಿನಃ ॥ ೮೦ ॥

---

೭೭. ಆ ಪುರುಷನಿಗೆ ಇಪ್ಪತ್ತುವರ್ಷ ವಯಸ್ಸಾಗಿರುವುದು. ಅವನು ಆನೆ,ಕುದುರೆ, ರಥ, ಪದಾತಿಗಳೆಂಬ ಚತುರಂಗಸಮೇತನಾಗಿ ಭೂಮಂಡಲವಲ್ಲಿ ತಿರುಗಾಡುವನು.

೭೮. ಆ ಪುರುಷನು ಆಯುಧಪಾಣಿಗಳಾದ ಸಾವಿರಾರು ಬ್ರಾಹ್ಮಣರಿಂದ ಕೂಡಿ ಭೂಮಿಯಲ್ಲಿ ಅಲದಾಡುತ್ತಾ ಅಲ್ಲಲ್ಲಿರುವ ದುಷ್ಟರಾದ ಮ್ಲೇಚ್ಛರನ್ನು ಸಾವಿರಾರುಕಟ್ಟಲೆ ಸಂಹಾರಮಾಡುವನು.

೭೯. ಆ ಭಗವಂತನು ಹೀಗೆ ಸರ್ವತ್ರ ಸಂಚರಿಸುತ್ತಾ, ದುಷ್ಟರಾದ ರಾಜರೇ ಮೊದಲಾದವರನ್ನು ಸಂಹರಿಸುತ್ತಾ, ಸಮಸ್ತ ಪಾಷಂಡಿಗಳನ್ನೂ ನಿಶ್ಶೇಷವಾಗಿ ಸಂಚರಿಸುವನು.

೮೦. ಯಾರು ಅತ್ಯಂತವಾಗಿ ಅಧರ್ಮಿಷ್ಠರೂ, ಜಾತಿಸಾಂಕರ್ಯಕ್ಕೆ ಕಾರಣರೂ ಆಗಿರುವರೋ ಅವರನ್ನೂ, ಅವರನ್ನು ಅನುಸರಿಸಿರುವ ದುಷ್ಟರನ್ನೂ, ನಿಶ್ಶೇಷವಾಗಿಯೂ ನಾಮಾವಶಿಷ್ಟರನ್ನಾಗಿಯೂ ಮಾಡುವನು.

ಉದೀಚ್ಯಾನ್ಮಧ್ಯದೇಶಾಂಶ್ಚ ಪಾರ್ವತೀಯಾಂಸ್ತಥೈವ ಚ ।
ಪ್ರಾಚ್ಯಾನ್ ಪ್ರತೀಚ್ಯಾಂಶ್ಚ ತಥಾ ವಿಂಧ್ಯಪೃಷ್ಠಾಪರಾಂತಿಕಾನ್ ॥ ೮೧ ॥

ತಥೈವ ದಾಕ್ಷಿಣಾತ್ಯಾಂಶ್ಚ ದ್ರವಿಡಾನ್ ಸಿಂಹಲೈಃ ಸಹ ।
ಗಾಂಧಾರಾನ್ ಪಾರದಾಂಶ್ಚೈವ ಪಹ್ನವಾನ್ ಯವನಾಸ್ತಥಾ ॥ ೮೨ ॥

ತುಷಾರಾನ್ ಬರ್ಬರಾಂಶ್ಚೀನಾನ್ ಶೂಲಿಕಾನ್ ದರದಾನ್ ಖಸಾನ್ ।
ಲಂಪಾಕಾನಥ ಕೇತಾಂಶ್ಚ ಕಿರಾತಾನಾಂ ಚ ಜಾತಯಃ ॥ ೮೩ ॥

ಪ್ರವೃತ್ತಚಕ್ರೋ ಬಲವಾನ್ ಮ್ಲೇಚ್ಛಾನಾಮಂತಕೃದ್ವಿಭುಃ ।
ಅಧೃಷ್ಯಃ ಸರ್ವಭೂತಾನಾಂ ಚಚಾರಾಥ ವಸುಂಧರಾಂ ॥ ೮೪ ॥

ಮಾಧವಸ್ಯ ತು ಸೋಽಂಶೇನ ದೇವಸ್ಯ ಹಿ ವಿಜಜ್ಞಿವಾನ್ ।
ಪೂರ್ವಜನ್ಮವಿಧಿಜ್ಞೈಶ್ಚ ಪ್ರಮಿತಿರ್ನಾಮವೀರ್ಯವಾನ್ ॥ ೮೫ ॥

---

೮೧–೮೪. ಶ್ರೀ ಭಗವಂತನಾದ ಮಹಾವಿಷ್ಣುವು ತನ್ನ ಒಂದು ಅಂಶದಿಂದ ಪ್ರಮಿತಿನಾಮಕನಾಗಿ ಅವತರಿಸಿ, ಮಹಾಸೈನ್ಯದಿಂದ ಸಹಿತನೂ, ಅತಿಶೂರನೂ ಆಗಿ ಉದೀಚ್ಯರೂ, ಮಧ್ಯದೇಶದವರೂ, ಪಾರ್ವತೀಯರೂ, ಪ್ರಾಚ್ಯರೂ. ಪಶ್ಚಿಮದೇಶೀಯರೂ, ವಿಂಧ್ಯಪರ್ವತವಾಸಿಗಳೂ, ದಾಕ್ಷಿಣಾತ್ಯರಾದ ದ್ರಾವಿಡರೂ, ಸಿಂಹಳವಾಸಿಗಳೂ, ಗಾಂಧಾರರೂ, ಪಾರದರೂ, ಪ್ರಹ್ನವರೂ, ಯವನರೂ, ತುಷಾರರೂ, ಬರ್ಬರರೂ, ಚೀನರೂ, ಶೂಲಿಕರೂ, ದಾರದರೂ, ಖಸರೂ, ಲಂಪಾಕರೂ, ಕೇತರೂ, ಕಿರಾತರೂ, ಮ್ಲೇಂಚ್ಛರೂ ಇವರೇ ಮೊದಲಾದವರನ್ನು ಜಯಿಸಿ, ಮ್ಲೇಂಚ್ಛರೇ ಮೊದಲಾದ ದುಷ್ಟರನ್ನು ನಿರ್ಮೂಲಮಾಡುವನು. ಮತ್ತು ಸರ್ವಭೂತಗಳಿಗೂ ಭಯಂಕರನೂ ಅದೃಷ್ಯನೂ ಆಗಿ, ಸಕಲ ಭೂಮಂಡಲದಲ್ಲಿಯೂ ಸಂಚರಿಸಿ, ದುಷ್ಟರನ್ನು ಕಿತ್ತುಹಾಕಿ ಶಿಷ್ಟರನ್ನು ಶಿಕ್ಷಿಸುವವನು.

೮೫. ಆ ಭಗವಂತನೇ ಪೂರ್ವಯುಗಗಳ ವಿಧಾನಗಳನ್ನೂ, ಧರ್ಮಗಳನ್ನೂ ತಿಳಿದಿರುವ ಸುಮತಿಯೆಂಬ ಜ್ಞಾನಿಯಾಗಿಯೂ, ಶೂರನಾಗಿಯೂ ಅವತರಿಸಿ ಸಕಲ ಭೂಮಂಡಲದ ವೃತ್ತಾಂತವನ್ನೂ ತಿಳಿಯುವನು.

ಗೋತ್ರೇಣ ವೈ ಚಂದ್ರಮುಸಃ ಪೂರ್ವೇ ಕಲಿಯುಗೇ ಪ್ರಭುಃ ।
ದ್ವಾತ್ರಿಂಶೇಽಭ್ಯುದಿತೇ ವರ್ಷೇ ಪ್ರಕ್ರಾಂತೇ ವಿಂಶತಿಂ ಸಮಾಃ ॥ ೮೬ ॥

ವಿನಿಘ್ನನ್ ಸರ್ವಭೂತಾನಿ ಮಾನವಾನಿ ಸಹಸ್ರಶಃ ।
ಕೃತ್ವಾ ವೀರ್ಯಾವಶೇಷಾಂ ತು ಪೃಥ್ವೀಂ ರೂಢೇಣ ಕರ್ಮಣಾ ॥
ಪರಸ್ಪರನಿಮಿತ್ತೇನ ಕೋಪೇನಾಕಸ್ಮಿತೇನ ತು ॥ ೮೭ ॥

ಸ ಸಾಧಯಿತ್ವಾ ವೃಷಲಾನ್ ಪ್ರಾಯಶಸ್ತಾನಧಾರ್ಮಿಕಾನ್ ।
ಗಂಗಾಯಮುನಯೋರ್ಮಧ್ಯೇ ನಿಷ್ಠಾಂ ಪ್ರಾಪ್ತಃ ಸಹಾನುಗಃ ॥ ೮೮ ॥

ತತೋ ವ್ಯತೀತೇ ತಸ್ಮಿಂಸ್ತು ಅಮಾತ್ಯೇ ಸತ್ಯಸೈನಿಕೇ ॥
ಉತ್ಸಾದ್ಯ ಪಾರ್ಥಿವಾನ್ ಸರ್ವಾನ್ ಮ್ಲೇಚ್ಛಾಂಶ್ಚೈವ ಸಹಸ್ರಶಃ ॥ ೮೯ ॥

---

೮೬–೮೭. ಪ್ರಭುವಾದ ಭಗವಂತನು ಪೂರ್ವದ ಕಲಿಯುಗದಲ್ಲಿ ಮೂವತ್ತೆರಡು ವರ್ಷಗಳುಳ್ಳ ಶೂರನಾಗಿ ಅವತರಿಸಿ, ಸರ್ವದುಷ್ಟಭೂತಗಳನ್ನೂ, ಸಾವಿರಾರು ಲೋಕಕಂಟಕರನ್ನೂ ಧ್ವಂಸಮಾಡಿ ಅತಿ ಕೋಪದಿಂದ ಪ್ರಜ್ವಲಿಸುತ್ತಾ, ಇಪ್ಪತ್ತು ವರ್ಷಗಳಕಾಲ ತನ್ನ ಪ್ರತಾಪವನ್ನು ತೋರ್ಪಡಿಸುತ್ತಾ, ನಷ್ಟವಾದ ಸನಾತನ ಧರ್ಮಗಳನ್ನು ರೂಢಮೂಲವನ್ನಾಗಿ ಮಾಡಿದನು.

೮೮. ಸಾಕ್ಷಾದ್ಭಗವಂತನು ಭೂಮಿಯಲ್ಲವತರಿಸಿ, ಅಧರ್ಮಿಷ್ಟರಾದ ದುಷ್ಟ ರಾಜರನ್ನು ಶಿಕ್ಷಿಸಿ, ಧರ್ಮವನ್ನು ಸ್ಥಾಪಿಸಿ, ತನ್ನ ಪರಿವಾರಸಮೇತನಾಗಿ ಗಂಗಾ ಯಮುನಾ ನದಿಗಳ ಮಧ್ಯದಲ್ಲಿದ್ದ ಉತ್ತಮ ಕ್ಷೇತ್ರದಲ್ಲಿ ನಿಂತನು.

೮೯. ಹೀಗೆ ಸ್ವಾಮಿಯು ಧರ್ಮಸ್ಥಾಪನೆಗಾಗಿ ಕಲಿಯುಗಾಂತದಲ್ಲಿ ಅವತರಿಸಿ, ಸಾವಿರಾರು ದುಷ್ಟಕ್ಷತ್ರಿಯರನ್ನೂ, ಲೋಕಕಂಟಕರಾದ ಮ್ಲೇಂಛರನ್ನೂ ನಿರ್ಮೂಲಮಾಡಿ, ಪ್ರಾಚೀನ ಧರ್ಮಗಳನ್ನು ಸ್ಥಾಪಿಸಿ, ಸತ್ಯಸಂಧರಾದ ಭೃತ್ಯ ಸಮೇತನಾಗಿ ಮಾಯವಾಗುವನು.

ತತ್ರ ಸಂಧ್ಯಾಂಶಕೇ ಕಾಲೇ ಸಂಪ್ರಾಪ್ತೇ ತು ಯುಗಾಂತಿಕೇ ।
ಸ್ಥಿತಾಸ್ವಲ್ಪಾವಶಿಷ್ಟಾಸು ಪ್ರಜಾಸ್ವಿಹ ಕ್ವಚಿತ್ ಕ್ವಚಿತ್ ॥ ೯೦ ॥

ಅಪ್ರಗ್ರಹಾಸ್ತತಸ್ತಾ ವೈ ಲೋಕಚೇಷ್ಟಾಸ್ತು ವೃಂದಶಃ ।
ಉಪಹಿಂಸಂತಿ ಚಾನ್ಯೋಽನ್ಯಂ ಪ್ರಪದ್ಯಂತೇ ಪರಸ್ಪರಂ ॥ ೯೧ ॥

ಅರಾಜಕೇ ಯುಗವಶಾತ್ ಸಂಶಯೇ ಸಮುಪಸ್ಥಿತೇ ।
ಪ್ರಜಾಸ್ತಾ ವೈ ತತಃ ಸರ್ವಾಃ ಪರಸ್ಪರಭಯಾರ್ದಿತಾಃ ॥ ೯೨ ॥

ವ್ಯಾಕುಲಾಶ್ಚ ಪರಿಶ್ರಾಂತಾಸ್ತ್ಯಕ್ತ್ವಾ ದಾರಾನ್ ಗೃಹಾಣಿ ಚ ।
ಸ್ವಾನ್ ಪ್ರಾಣಾನ್ ಸಮವೇಕ್ಷಂತೋ ನಿಷ್ಠಾಂ ಪ್ರಾಪ್ತಾಃ ಸುದುಃಖಿತಾಃ ॥೯೩॥

---

೯೦. ಅಲ್ಲಿಗೆ ಕಲಿಕಾಲವು ಕಳೆದು ಕಲಿಯುಗದ ಸಂಧ್ಯಾಂಶಕಾಲವು ಸಂಭವಿಸುವುದು. ಹೀಗೆ ಕಲಿಯುಗದ ಜೊತೆಯಲ್ಲಿ ಅನೇಕ ಜನರು ನಷ್ಟವಾಗಲು, ಸಂಧ್ಯಾಂಶದಲ್ಲಿ ಆಯಾ ದೇಶಗಳಲ್ಲಿ ವಿರಳವಿರಳವಾಗಿ ಕೆಲಕೆಲವು ಜನಗಳು ಜೀವಿಸುತ್ತಿದ್ದರು.

೯೧. ಆಗ ಪ್ರಜೆಗಳು ಆಶ್ರಯವಿಲ್ಲದೇ ಪ್ರತ್ಯೇಕವಾಗಿ ಕಾರ್ಯಗಳನ್ನು ಮಾಡಲು ಅಸಮರ್ಥರಾಗಿ ಸಾಂಘಿಕವಾಗಿ ಕಾರ್ಯಗಳನ್ನು ಮಾಡುತ್ತಿದ್ದರು. ಆಗ ಪರಸ್ಪರವಾಗಿ ಹಿಂಸೆಗಳೂ ಉಪದ್ರವಗಳೂ ವಿಶೇಷವಾಗಿಯಾದುವು.

೯೨. ಕಲಿಯುಗದ ಸಂಧ್ಯಾಂಶ ಮಹಿಮೆಯಿಂದ ಪುನಃ ದೇಶಗಳು ಅರಾಜಕಗಳಾದುವು. ಆಗ ಉಳಿದ ಪ್ರಜೆಗಳು ಅವಲಂಬನವಿಲ್ಲದೆ ಜೀವನದಲ್ಲಿ ಸಂಶಯಗ್ರಸ್ತರಾಗಿ ಪರಸ್ಪರ ಭೀತಿಗ್ರಸ್ಥರಾಗುವರು.

೯೩. ಪ್ರಜೆಗಳು ಹೀಗೆ ವ್ಯಾಕುಲವುಳ್ಳವರೂ ಪರಿಶ್ರಾಂತರೂ ಆಗಿ, ಭಯದಿಂದ ತಮ್ಮ ಹೆಂಡರೂ ಮಕ್ಕಳೂ ಮನೆಮಠಗಳೂ ಇವನ್ನು ಬಿಟ್ಟು, ಭಯದಿಂದ ತಮ್ಮ ಪ್ರಾಣ ರಕ್ಷಣೆಯಲ್ಲಿಯೇ ಆಸಕ್ತರಾಗಿ ಅತ್ಯಂತ ದುಃಖದಿಂದ ಇತಿಕರ್ತವ್ಯತಾಮೂಢರಾದರು.

ನಷ್ಟೇ ಶ್ರೌತೇ ಸ್ಮೃತೇ ಧರ್ಮೇ ಪರಸ್ಪರಹತಾಸ್ತದಾ ।
ನಿರ್ಮರ್ಯಾದಾ ನಿರಾಕ್ರಂದಾ ನಿಃಸ್ನೇಹಾ ನಿರಪತ್ರಪಾಃ ॥ ೯೪ ॥

ನಷ್ಟೇ ವರ್ಷೇ ಪ್ರತಿಹತಾ ಹ್ರಸ್ವಕಾಃ ಪಂಚವಿಶ್ವಕಾಃ ।
ಹಿತ್ವಾ ದಾರಾಂಶ್ಚ ಪುತ್ರಾಂಶ್ಚ ವಿಷಾದವ್ಯಾಕುಲೇಂದ್ರಿಯಾಃ ॥ ೯೫ ॥

ಅನಾವೃಷ್ಟಿಹತಾಶ್ಚೈವ ವಾರ್ತಾಮುತ್ಸೃಜ್ಯ ದುಃಖಿತಾಃ ।
ಪ್ರತ್ಯಂತಾಂಸ್ತಾನ್ನಿಷೇವಂತೇ ಹಿತ್ವಾ ಜನಪದಾನ್ ಸ್ವಕಾನ್ ॥ ೯೬ ॥

ಸರಿತಃ ಸರಾಗಾನ್ ಕೂಪಾನ್ ಸೇವಂತೇ ಪರ್ವತಾಂಸ್ತದಾ ।
ಮಧುಮಾಂಸೈರ್ಮೂಲಫಲೈರ್ವರ್ತಯಂತಿ ಸುದುಃಖಿತಾಃ ॥ ೯೭ ॥

---

೯೪. ಆ ಕಾಲದಲ್ಲಿ ಶ್ರುತಿಸ್ಮೃತ್ಯಾದಿಗಳೂ, ವರ್ಣಾಶ್ರಮಾಚಾರ ಧರ್ಮಗಳೂ ನಷ್ಟವಾದುವು. ಆಗ ಪ್ರಜೆಗಳು ಪರಸ್ಪರ ಹತರೂ, ಮರ್ಯಾದಾತೀತರೂ, ಸ್ನೇಹರಹಿತರೂ, ಲಜ್ಜಾಶೂನ್ಯರೂ, ರೋದನಾಪರರೂ ಆಗಿದ್ದರು.

೯೫. ಆಗ ಅನಾವೃಷ್ಟಿಯಿಂದ ಪೀಡಿತರಾದ ಪ್ರಜೆಗಳು ಅತ್ಯಂತ ಕುಳ್ಳರಾಗಿಯೂ, ಇಪ್ಪತ್ತೈದುವರ್ಷ ಆಯುಷ್ಯವುಳ್ಳವರಾಗಿಯೂ ಇರುವರು. ಅವರು ಶತ್ರುಗಳ ಭಯಗ್ರಸ್ಥರೂ, ಕ್ಷುತ್ಪಿಪಾಸೆಗಳಿಂದ ವ್ಯಾಕುಲೇಂದ್ರಿಯರೂ ಆಗಿ, ಆತ್ಮರಕ್ಷಣೆಗಾಗಿ ಪತ್ನೀಪುತ್ರರನ್ನೂ ಮನೆಮಠಗಳನ್ನೂ ಬಿಟ್ಟು ಪಲಾಯನಮಾಡುವರು.

೯೬. ಅನಾವೃಷ್ಟಿಯಿಂದ ಪೀಡಿತರಾದ ಪ್ರಜೆಗಳು ತಮ್ಮ ಜೀವನದ ವಿಷಯದಲ್ಲಿ ಆಶೆಯನ್ನು ಬಿಟ್ಟು ಖಿನ್ನರಾಗಿ, ತಂತಮ್ಮ ದೇಶವನ್ನು ತ್ಯಾಗಮಾಡಿ, ಪರ್ವತಗಳ ಗವಿಗಳನ್ನು ಹೊಂದುವರು.

೯೭. ಮತ್ತು ಕೆಲವರು ಈ ಕಲಿಯುಗದ ಸಂಧ್ಯಾಂಶಗಳಲ್ಲಿ ಮನೆಮಠಗಳ ಹಂಗು ತೊರೆದು, ಮನೆಮಠಗಳನ್ನು ಬಿಟ್ಟು ನದಿಗಳು, ಸಮುದ್ರಗಳು, ಭಾವಿಗಳು, ಪರ್ವತಗಳು ಇವುಗಳನ್ನು ಹೊಂದಿ, ಮಧ್ಯ ಮಾಂಸಗಳನ್ನು ತಿಂದು ಜೀವಿಸುವರು.

ಚೀರವಸ್ತ್ರಾಜಿನಧರಾ ನಿಷ್ಪತ್ರಾ ನಿಷ್ಪರಿಗ್ರಹಾಃ ।
ವರ್ಣಾಶ್ರಮಪರಿಭ್ರಷ್ಟಾಃ ಸಂಕರಂ ಘೋರಮಾಸ್ಥಿತಾಃ ॥ ೯೮ ॥

ಏತಾ ಕಾಷ್ಠಾಮನುಪ್ರಾಪ್ತಾ ಅಲ್ಪಶೇಷಾಸ್ತಥಾ ಪ್ರಜಾಃ ।
ಜರಾವ್ಯಾಧಿಕ್ಷುಧಾವಿಷ್ಟಾ ದುಃಖನ್ನಿರ್ವೇದಮಾಗರ್ಮ ॥ ೯೯ ॥

ವಿಚಾರಣಂ ತು ನಿರ್ವೇದಾತ್ ಸಾಮ್ಯಾವಸ್ಥಾ ವಿಚಾರಣಾತ್ ।
ಸಾಮ್ಯಾವಸ್ಥಾಸು ಸಂಬೋಧಃ ಸಂಬೋಧಾದ್ಧರ್ಮಶೀಲತಾ ॥ ೧೦೦ ॥

ತಾಸೂಪಗಮಯುಕ್ತಾಸು ಕಲಿಶಿಷ್ಟಾಸು ವೈ ಸ್ವಯಂ ।
ಅಹೋರಾತ್ರಂ ತದಾ ತಾಸಾಂ ಯುಗಂ ತು ಪರಿವರ್ತತೇ ॥ ೧೦೧ ॥

---

೯೮. ಆಗ ಜನಗಳಿಗೆ ಉಡುವುದಕ್ಕೆ ಬಟ್ಟೆಬರೆಗಳಿಲ್ಲದೆ, ಛಿಂದಿಯನ್ನೂ, ಕೃಷ್ಣಾಜಿನವನ್ನೂ ಧರಿಸಿಕೊಂಡು, ಮಾನಮರ್ಯಾದೆಯಿಲ್ಲದೆಯೇ ಪತ್ನೀಸುರಿಲ್ಲದೆ ವರ್ಣಾಶ್ರಮಭ್ರಷ್ಟರಾಗಿ ಘೋರವಾದ ಜಾತಿಸಾಂಕರ್ಯವನ್ನು ಹೊಂದುವರು.

೯೯. ಹೀಗೆ ಕಲಿಯುಗದ ಅಂತ್ಯದಲ್ಲಿ ಪ್ರಜೆಗಳು ಮೇಲೆ ನಿರೂಪಿಸಿರುವ ಮಹಾದುಃಖವನ್ನು ಅನುಭವಿಸುತ್ತಾ ಅಲ್ಪಾವಶಿಷ್ಟರೂ ಜರಾವ್ಯಾಧಿಗಳಿಂದ ಪೀಡಿತರೂ ಆಗಿ ದುಃಖದಿಂದ ಪಶ್ಚಾತ್ತಾಪವನ್ನು ಹೊಂದುವರು.

೧೦೦. ಹೀಗೆ ಜನಿಸಿದ ಪಶ್ಚಾತ್ತಾಪದಿಂದ ವಿಚಾರವನ್ನೂ, ಆ ವಿಚಾರಣೆಯಿಂದ ಸಮಚಿತ್ತತೆಯನ್ನೂ, ಅದರಿಂದ ಧರ್ಮಶೀಲತೆಯನ್ನೂ ಹೊಂದಿ ಶಾಂತರಾಗಿರುವರು.

೧೦೧. ಹೀಗೆ ಕಲಿಯುಗದ ಕೊನೆಯ ಭಾಗದಲ್ಲಿ ನಾನಾ ಕಷ್ಟಗಳಿಗೆ ಸಿಲುಕ ನಷ್ಟವಾಗದೆ, ಅವಶಿಷ್ಟವಾದ ಉತ್ತಮ ವಸ್ತುಗಳು ಪುನಃ ಕೃತಯುಗದಲ್ಲಿ ಅಹೋರಾತ್ರಿಗಳಂತೆ ಪರಿವರ್ತಿತವಾಗುವುವು.

**ಚಿತ್ತಸಂಮೋಹನಂ ಕೃತ್ವಾ ತಾಸಾಂವೈ ತೈಃ ಸಪ್ತಮಂ ತು ತತ್ ।**
**ಭಾವಿನೋಽರ್ಥಸ್ಯ ಚ ಬಲಾತ್ತತಃ ಕೃತಮವರ್ತತ ॥ ೧೦೨ ॥**

**ಪ್ರವೃತ್ತೇ ತು ಪುನಸ್ತಸ್ಮಿಂಸ್ತತಃ ಕೃತಯುಗೇ ತು ವೈ ।**
**ಉತ್ಪನ್ನಾಃ ಕಲಿಶಿಷ್ಟಾಸ್ತು ಕಾರ್ತಯುಗ್ಯಃ ಪ್ರಜಾಸ್ತಥಾ ॥ ೧೦೩ ॥**

**ತಿಷ್ಠಂತಿ ಚೇಹ ಯೇ ಸಿದ್ಧಾಃ ಸುಹೃಷ್ಟಾ ವಿಚರಂತಿ ವೈ ।**
**ಸದಾ ಸಪ್ತರ್ಷಯಶ್ಚೈವ ತತ್ರ ತೇ ಚ ವ್ಯವಸ್ಥಿತಾಃ ॥ ೧೦೪ ॥**

**ಬ್ರಹ್ಮಕ್ಷತ್ರವಿಶಃ ಶೂದ್ರಾ ಬೀಜಾರ್ಥಂ ಯೇ ಸ್ಮೃತಾ ಇಹ ।**
**ಕಲಿಜೈಃ ಸಹ ತೇ ಸರ್ವೇ ನಿರ್ವಿಶೇಷಾಸ್ತದಾಭವನ್ ॥ ೧೦೫ ॥**

**ತೇಷಾಂ ಸಪ್ತರ್ಷಯೋ ಧರ್ಮಂ ಕಥಯಂ ತೀತರೇಷು ಚ ।**
**ವರ್ಣಾಶ್ರಮಾಚಾರಯುಕ್ತಃ ಶ್ರೌತಃ ಸ್ಮಾರ್ತೋ ದ್ವಿಧಾ ತು ಸಃ ॥ ೧೦೬ ॥**

---

೧೦೨. ಕಲಿಯುಗದ ಪ್ರಜೆಗಳ ಚಿತ್ತಭ್ರಮೆಯೊಡನೆ ಆ ಯುಗವು ಅತೀತವಾಗಲು. ಭವಿಷ್ಯದರ್ಥಾನುಗುಣವಾಗಿ ಸಪ್ತಮದ ಕೃತಯುಗವು ಪ್ರಾಪ್ತವಾಗುವುದು.

೧೦೩. ಅನಂತರ ಆ ಕೃತಯುಗವು ಪ್ರಾರಂಭವಾಗಲು, ಆ ಕೃತಯುಗದಲ್ಲಿ ಕಲಿಶಿಷ್ಟರಾದ ಪ್ರಜೆಗಳು ಪುನಃ ಉದ್ಭವಿಸಿ ಕೃತಯುಗದ ಪ್ರಜೆಗಳಾಗುವರು.

೧೦೪. ಯಾವ ಸಿದ್ಧಪುರುಷರು ಹಿಂದಿನ ಕಲಿಯುಗದಲ್ಲಿ ಉತ್ಪನ್ನರಾಗಿ ದೃಢರಾಗಿದ್ದು ಸಂಚರಿಸುತ್ತಿದ್ದರೋ ಅವರೂ ಮತ್ತು ಸಪ್ತರ್ಷಿಗಳೂ ಆ ಯುಗದಲ್ಲಿ ಅವಶಿಷ್ಟರಾಗಿರುವರು.

೧೦೫. ಬ್ರಾಹ್ಮಣರು, ಕ್ಷತ್ರಿಯರು ಮತ್ತು ಶೂದ್ರರು ಇವರು ಯಾವ ಯುಗದಲ್ಲಿ ಬೀಜಭೂತರಾಗಿದ್ದರೋ ಅವರೆಲ್ಲರೂ ನಿಶ್ಶೇಷವಾಗಿ ಕೃತಯುಗದಲ್ಲಿ ನಾಮಾವಶೇಷರಾಗಿರುವರು.

೧೦೬. ಅವರಿಗೆ ಸಪ್ತರ್ಷಿಗಳು ಇತರ ಯುಗದಲ್ಲಿದ್ದ ವರ್ಣಾಶ್ರಮಾಚಾರ ಧರ್ಮಗಳನ್ನು ಹೇಳುತ್ತಾರೆ. ಹೀಗೆ ವರ್ಣಾಶ್ರಮಾಚಾರಯುಕ್ತವಾದ ಧರ್ಮವು ಶ್ರೌತ, ಸ್ಮಾರ್ತವೆಂಬುದಾಗಿ ದ್ವಿವಿಧವಾಗಿದೆ.

**ತತಸ್ತೇಷು ಕ್ರಿಯಾವತ್ಸು ವರ್ತಂತೇ ವೈ ಪ್ರಜಾಃ ಕೃತೇ ।**
**ಶ್ರೌತಃ ಸ್ಮಾರ್ತಃ ಕೃತಾನಾಂ ತು ಧರ್ಮಃ ಸಪ್ತರ್ಷಿದರ್ಶಿತಃ ॥ ೧೦೭ ॥**

**ತಾಸು ಧರ್ಮವ್ಯವಸ್ಥಾರ್ಥಂ ತಿಷ್ಠಂತೀಹಾಯುಗಕ್ಷಯಾತ್ ।**
**ಮನ್ವಂತರಾಧಿಕಾರೇಷು ತಿಷ್ಠಂತಿ ಮುನಯಸ್ತು ವೈ ॥ ೧೦೮ ॥**

**ಯಥಾ ದಾವಪ್ರದಗ್ಧೇಷು ತೃಣೇಷ್ವಿಹ ತಪೇ ಋತೌ ।**
**ನವಾನಾಂ ಪ್ರಥಮಂ ದೃಷ್ಟಸ್ತೇಷಾಂ ಮೂಲೇ ತು ಸಂಭವಃ ॥ ೧೦೯ ॥**

**ಏವಂ ಯುಗಾದ್ಯುಗಸ್ಯೇಹ ಸಂತಾನಸ್ತು ಪರಸ್ಪರಂ ।**
**ವರ್ತತೇ ಹ್ಯವ್ಯವಚ್ಛೇದಾದ್ಯಾವನ್ಮನ್ವಂತರಕ್ಷಯಃ ॥ ೧೧೦ ॥**

---

೧೦೭. ಅನಂತರ ಕೃತಯುಗದಲ್ಲಿ ಪ್ರಜೆಗಳು ವರ್ಣಾಶ್ರಮಾಚಾರಕ್ರಿಯೆಗಳನ್ನು ನಡೆಸುತ್ತಿದ್ದರು. ಹೀಗೆ ಸಪ್ತರ್ಷಿಗಳಿಂದ ಪ್ರೋಕ್ತವಾದ ಶ್ರೌತ ಸ್ಮಾರ್ತ ಧರ್ಮಗಳು ಕೃತಯುಗದಲ್ಲಿ ಸಂಪೂರ್ಣವಾಗಿ ಆರಂಭವಾದುವು.

೧೦೮. ಹೀಗೆ ಮಹರ್ಷಿಗಳು ಮನ್ವಂತರಾಧಿಕಾರಗಳಲ್ಲಿ ಪ್ರತಿಯೊಂದು ಯುಗಗಳಲ್ಲಿಯೂ ಧರ್ಮಗಳನ್ನು ಸ್ಥಾಪನೆಗಾಗಿ ಪ್ರಲಯಕಾಲದವರೆಗೂ ಜಾಗರೂಕರಾಗಿರುವರು.

೧೦೯. ಗ್ರೀಷ್ಮಋತುವಿನಲ್ಲಿ ಕಾಡುಗಿಚ್ಚಿನಿಂದ ದಗ್ಧವಾದ ತೃಣಾದಿಗಳು ಮಳೆಗಾಲ ಬಂದರೆ ಪುನಃ ಹೇಗೆ ಚಿಗುರುತ್ತವೆಯೋ, ಅದರಂತೆ ಕಲಿಯುಗದಿಂದ ನಷ್ಟವಾದ ಧರ್ಮಗಳು ಪುನಃ ಕೃತಯುಗದಲ್ಲಿ ವೃದ್ಧಿಯಾಗುವುವು.

೧೧೦. ಹೀಗೆ ಪ್ರತಿಯೊಂದು ಯುಗಗಳಿಗೂ ಇತರ ಯುಗಗಳೊಡನೇ ಸಂಬಂಧವು ಅವಿಚ್ಛಿನ್ನವಾಗಿ ಮನ್ವಂತರ ಕ್ಷಯವಾಗುವವರೆಗೂ ಇರುತ್ತದೆ. ಕಲಿಯುಗಕ್ಕೂ, ಹಿಂದಿನ ಕೃತಯುಗಕ್ಕೂ, ಮುಂದಿನ ದ್ವಾಪರಯುಗಕ್ಕೂ ಸಂಬಂಧವು ಇರುವುದು.

**ಸುಖಮಾಯುರ್ಬಲಂ ರೂಪಂ ಧರ್ಮಾರ್ಥೌ ಕಾಮ ಏವ ಚ ।**
**ಯುಗೇಷ್ವೇತಾನಿ ಹೀಯಂತೇ ತ್ರೀಣಿ ಪಾದಕ್ರಮೇಣ ತು ॥ ೧೧೧ ॥**

**ಸ ಸಂಧ್ಯಂಶೇಷು ಹೀಯಂತೇ ಯುಗಾನಾಂ ಧರ್ಮಸಿದ್ಧಯಃ ।**
**ಇತ್ಯೇಷ ಪ್ರತಿಸಂಧಿರ್ವಃ ಕೀರ್ತಿತಸ್ತು ಮಯಾ ದ್ವಿಜಾಃ ॥ ೧೧೨ ॥**

**ಚತುರ್ಯುಗಾನಾಂ ಸರ್ವೇಷಾಮೇತೇನೈವ ಪ್ರಸಾಧನಂ ।**
**ಏಷಾ ಚತುರ್ಯುಗಾವೃತ್ತಿರಾಸಹಸ್ರಾತ್ ಪ್ರವರ್ತತೇ ॥ ೧೧೩ ॥**

**ಬ್ರಹ್ಮಣಸ್ತದಹಃ ಪ್ರೋಕ್ತಂ ರಾತ್ರಿಶ್ಚ ತಾವತೀ ಸ್ಮೃತಾ ।**
**ಅತ್ರಾರ್ಜವಂ ಜಡೀಭಾವೋ ಭೂತಾನಾಮಾಯುಗಕ್ಷಯಾತ್ ॥ ೧೧೪ ॥**

---

೧೧೧. ಕೃತಯುಗದಲ್ಲಿ ನಾಲ್ಕುಪಾದ ಧರ್ಮವೂ, ತ್ರೇತಾದ್ವಾಪರಕಲಿಯುಗಗಳಲ್ಲಿ ಒಂದೊಂದು ಪಾದವೂ ಹೀನವಾಗಿಯೂ ಇರುತ್ತದೆ. ಅದಕ್ಕನುಗುಣವಾಗಿ ಸುಖ, ಆಯುಸ್ಸು, ಬಲ, ರೂಪ, ಧರ್ಮಾರ್ಥಗಳು ಮತ್ತು ಕಾಮ ಇವುಗಳು ಕ್ರಮವಾಗಿ ತ್ರೇತಾಯುಗಾದಿಗಳಲ್ಲಿ ಒಂದೊಂದು ಭಾಗದಷ್ಟು ಹೀನವಾಗಿರುತ್ತವೆ.

೧೧೨. ಎಲೈ ವಿಪ್ರೋತ್ತಮರೇ, ಆಯಾ ಯುಗಗಳಲ್ಲಿರುವ ಧರ್ಮಗಳು ಆಯಾ ಯುಗಗಳ ಸಂಧ್ಯಾಂಶಗಳಲ್ಲಿ ಹೀನವಾಗುತ್ತವೆ. ಯುಗಕ್ಕಿಂತಲೂ ಸಂಧ್ಯಾಂಶಗಳಲ್ಲಿ ಧರ್ಮಸಿದ್ಧಿಗಳು ಬಹಳ ನ್ಯೂನವಾಗಿರುತ್ತವೆ.

೧೧೩. ಮೇಲೆ ನಿರೂಪಿಸಿರುವ ಚತುರ್ಯುಗಗಳ ಧರ್ಮಗಳೇ ಸಹಸ್ರಾರು ಚತುರ್ಯುಗಗಳವರೆಗೂ ಒಂದೇ ಸಮವಾಗಿಯೇ ಇರುತ್ತವೆ. ಬದಲಾಯಿಸುವುದಿಲ್ಲ.

೧೧೪. ಹೀಗೆ ಒಂದು ಸಹಸ್ರ ಚತುರ್ಯುಗಗಳು ಆದರೆ ಬ್ರಹ್ಮನಿಗೆ ಒಂದು ಹಗಲು ಆಗುವುದು. ಒಂದು ಸಹಸ್ರ ಚತುರ್ಯುಗಗಳು ರಾತ್ರಿಯು. ಹೀಗೆ ಒಂದು ಹಗಲು ರಾತ್ರಿ ಕಳೆದರೆ ಒಂದು ಅವಾಂತರಪ್ರಲಯವಾಗುವುದು. ಆಗ ಭೂತಗಳು ಸ್ವವ್ಯಾಪಾರಮಾಡದೇ ಜಡವಾಗಿರುವುವು.

ಏತದೇವ ತು ಸರ್ವೇಷಾಂ ಯುಗಾನಾಂ ಲಕ್ಷಣಂ ಸ್ಮೃತಂ ।
ಏಷಾ ಚತುರ್ಯುಗಾನಾಂ ತು ಗಣನಾ ಹ್ಯೇಕಸಪ್ತತಿಃ ॥
ಕ್ರಮೇಣ ಪರಿವೃತ್ತಾ ತು ಮನೋರಂತರಮುಚ್ಯತೇ ॥ ೧೧೫ ॥

ಚತುರ್ಯುಗೇ ತಥೈಕಸ್ಮಿನ್ ಭವತೀಹ ಯಥಾಶ್ರುತಂ ।
ತಥಾ ಚಾನ್ಯೇಷು ಭವತಿ ಪುನಸ್ತದ್ವೈ ಯಥಾಕ್ರಮಂ ॥ ೧೧೬ ॥

ಸರ್ಗೇ ಸರ್ಗೇ ಯಥಾ ಭೇದಾ ಉತ್ಪದ್ಯಂತೇ ತಥೈವ ತು ।
ಪಂಚವಿಂಶತ್ಪರಿಮಿತಾ ನ ನ್ಯೂನಾ ನಾಧಿಕಾಸ್ತಥಾ ॥ ೧೧೭ ॥

ತಥಾ ಕಲ್ಪಯುಗೈಃ ಸಾರ್ಧಂ ಭವಂತಿ ಸಮಲಕ್ಷಣಾಃ ।
ಮನ್ವಂತರಾಣಾಂ ಸರ್ವೇಷಾಮೇತದೇವ ತು ಲಕ್ಷಣಂ ॥ ೧೧೮ ॥

---

೧೧೫. ಮೇಲೆ ಹೇಳಿದ ಲಕ್ಷಣಗಳೇ ಸಮಸ್ತ ಯುಗಗಳಲ್ಲಿಯೂ ಇರುತ್ತವೆ. ಹೀಗೆ ಚತುರ್ಯುಗಗಳನ್ನು ಗಣಿಸಬೇಕಾಗುತ್ತದೆ. ಇಂತಹ ಚತುರ್ಯುಗಗಳು ಎಪ್ಪತ್ತೊಂದು ಆದರೆ ಒಬ್ಬ ಮನುವಿನ ಕಾಲವು ಮುಗಿಯುವುದು. ಹೀಗೆ ಕ್ರಮವಾಗಿ ಹದಿನಾಲ್ಕು ಮನುಗಳ ಕಾಲವನ್ನು ತಿಳಿಯಬೇಕು.

೧೧೬. ಮೊದಲನೆಯ ಚತುರ್ಯುಗದಲ್ಲಿ ಯಾವ ಧರ್ಮಕರ್ಮಗಳೂ, ದೇವಾದಿ ಜನನಗಳೂ ಉಂಟಾಗುತ್ತವೆಯೋ, ಮಿಕ್ಕ ಚತುರ್ಯುಗಗಳಲ್ಲಿಯೂ ಸಹ ಅದೇ ಧರ್ಮಾದಿಗಳೇ ಉಂಟಾಗುವುವು.

೧೧೭. ಪ್ರತಿಯೊಂದು ಸೃಷ್ಟಿಕ್ರಮದಲ್ಲಿಯೂ ಯಾವ ಇಪ್ಪತ್ತೈದು ಪ್ರಭೇದಗಳಿರುತ್ತವೆಯೋ, ಅವೇ ಸರ್ವ ಯುಗಗಳಲ್ಲಿಯೂ ಇರುತ್ತವೆ. ಸ್ವಲ್ಪವೂ ನ್ಯೂನಾಧಿಕಗಳಾಗುವುದಿಲ್ಲ.

೧೧೮. ಒಬ್ಬ ಮನುವಿನ ಕಲ್ಪದ ಯುಗದಲ್ಲಿ ಯಾವ ಕ್ರಮಗಳು ಇರುತ್ತವೆಯೋ, ಅದೇ ಕ್ರಮಗಳೇ ಇತರ ಕಲ್ಪದ ಯುಗಗಳಲ್ಲಿಯೂ ಉಂಟಾಗುತ್ತವೆ. ಸಕಲ ಮನ್ವಂತರಗಳಲ್ಲಿಯೂ ಒಂದೇ ಕ್ರಮಗಳು ಉಂಟಾಗುವುವು.

ತಥಾ ಯುಗಾನಾಂ ಪರಿವರ್ತನಾನಿ
ಚಿರಪ್ರವೃತ್ತಾನಿ ಯುಗಸ್ವಭಾವಾತ್ ।
ತಥಾ ನ ಸಂತಿಷ್ಠತಿ ಜೀವಲೋಕಃ
ಕ್ಷಯೋದಯಾಭ್ಯಾಂ ಪರಿವರ್ತಮಾನಃ ॥ ೧೧೯ ॥

ಇತ್ಯೇತಲ್ಲಕ್ಷಣಂ ಪ್ರೋಕ್ತಂ ಯುಗಾನಾಂ ವೈ ಸಮಾಸತಃ ।
ಅತೀತಾನಾಗತಾನಾಂ ವೈ ಸರ್ವಮನ್ವಂತರೇಷ್ವಿಹ ॥ ೧೨೦ ॥

ಅನಾಗತೇಷು ತದ್ವಚ್ಚ ತರ್ಕಃ ಕಾರ್ಯೋ ವಿಜಾನತಾ ।
ಮನ್ವಂತರೇಷು ಸರ್ವೇಷು ಅತೀತಾನಾಗತೇಷ್ವಿಹ ॥ ೧೨೧ ॥

ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ವೈ ।
ವ್ಯಾಖ್ಯಾತಾನಿ ವಿಜಾನೀಧ್ವಂ ಕಲ್ಪೇ ಕಲ್ಪೇನ ಚೈವ ಹಿ ॥ ೧೨೨ ॥

---

೧೧೯. ಕೃತತ್ರೇತಾದಿ ಯುಗಗಳು ಹೇಗೆ ಪರಿವರ್ತಿತವಾಗುತ್ತವೆಯೋ ಹಾಗೆಯೇ ಆಯಾ ಯುಗಗಳ ಸ್ವಭಾವಾನುಗುಣವಾಗಿ ಪ್ರಜೆಗಳು ಜನನ ಮರಣಾದಿಗಳನ್ನು ಹೊಂದಿ ಪರಿವರ್ತಿತರಾಗಿ ವೃದ್ಧಿಕ್ಷಯಗಳನ್ನು ಪಡೆಯುವರು.

೧೨೦. ಈ ರೀತಿಯಾಗಿ ಕೃತ ತ್ರೇತಾದಿ ಯುಗಗಳ ಸ್ವಭಾವವನ್ನು ಸಂಕ್ಷೇಪವಾಗಿ ತಿಳಿಸಿರುತ್ತೇನೆ. ಇದರಂತೆಯೇ ಭೂತಭವಿಷ್ಯತ್ಕಾಲಿಕ ಸಕಲ ಮನ್ವಂತರ ಲಕ್ಷಣಗಳನ್ನೂ ತಿಳಿಯಬೇಕು.

೧೨೧. ಭೂತ ವರ್ತಮಾನ ಯುಗಗಳಲ್ಲಿ ಯಾವ ಲಕ್ಷಣಗಳಿವೆಯೋ ಆ ಲಕ್ಷಣಗಳೇ ಭಾವಿಯುಗಗಳಲ್ಲಿಯೂ ಇರುವುವೆಂದು ಊಹಿಸಬೇಕಾಗಿದೆ. ಭೂತ ಭವಿಷ್ಯದ್ವರ್ತಮಾನ ಯುಗಗಳಲ್ಲಿ ಒಂದೇ ಸಮವಾದ ಕಾರ್ಯಗಳು ನಡೆಯುತ್ತವೆ. ಎಂದಿಗೂ ಬದಲಾವಣೆಗಳು ಆಗುವುದಿಲ್ಲ.

೧೨೨. ಒಬ್ಬ ಮನುವಿನ ಒಂದು ಯುಗದಲ್ಲಿ ಯಾವ ಯಾವ ಕಾರ್ಯಗಳು ಹೇಗೆ ನಡೆಯುತ್ತವೆಯೋ, ಅದರಂತೆಯೇ ಆ ಮನುವಿನ ಇತರ ಯುಗಗಳಲ್ಲಿಯೂ, ಇತರ ಮನ್ವಂತರಗಳಲ್ಲಿಯೂ ಆಯಾ ಕಾರ್ಯಗಳು ಹಾಗೆಯೇ ನಡೆಯುತ್ತವೆಯೆಂದು ಭಾವಿಸಬೇಕು ಹೀಗೆಂದು ನೀವು ತಿಳಿಯಿರೆಂದು ಸೂತಮುನಿಯು ಹೇಳಿದನು.

ಅಸ್ಯಾಭಿಮಾನಿನಃ ಸರ್ವೇ ನಾಮರೂಪೈರ್ಭವಂತ್ಯುತ ।
ದೇವಾ ಹ್ಯಷ್ಟವಿಧಾ ಯೇ ಚ ಇಹ ಮನ್ವಂತರೇಶ್ವರಾಃ ॥ ೧೨೩ ॥

ಋಷಯೋ ಮನವಶ್ಚೈವ ಸರ್ವೇ ತುಲ್ಯಾಃ ಪ್ರಯೋಜನೈಃ ।
ಏವಂ ವರ್ಣಾಶ್ರಮಾಣಾಂ ತು ಪ್ರವಿಭಾಗೋ ಯುಗೇ ಯುಗೇ ॥ ೧೨೪ ॥

ಯುಗಸ್ವಭಾವಾಚ್ಚ ತಥಾ ವಿಧತ್ತೇ ವೈ ಸದಾ ಪ್ರಭುಃ ।
ವರ್ಣಾಶ್ರಮವಿಭಾಗಶ್ಚ ಯುಗಾನಿ ಯುಗಸಿದ್ಧಯೇ ॥ ೧೨೫ ॥

---

೧೨೩. ಒಂದು ಮನ್ವಂತರದಲ್ಲಿ ಭೂತಾದಿಗಳಿಗೆ ಅಭಿಮಾನಿಗಳಾದ ಅಷ್ಟವಿಧ ದೇವತೆಗಳು ಯಾವ ಯಾವ ನಾಮಗಳಿಂದ ಪ್ರಖ್ಯಾತರಾಗಿರುವರೋ, ಆ ದೇವತೆಗಳು ಇತರ ಯುಗಗಳಲ್ಲಿಯೂ ಪೂರ್ವದಂತೆ ಅಭಿಮಾನಿಗಳೂ ನಾಮವುಳ್ಳವರೂ ಆಗಿರುವರು.

೧೨೪. ಮತ್ತು ಒಂದು ಯುಗದಲ್ಲಿ ಯಾವ ಯಾವ ಮಹರ್ಷಿಗಳೂ, ಮನುಗಳೂ, ವರ್ಣಾಶ್ರಮಾಚಾರಗಳೂ ಇರುತ್ತವೆಯೋ, ಇತರ ಯುಗಗಳಲ್ಲಿಯೂ ಕೂಡ ಅವರಿಗೆ ಸಮಾನರಾದ ದೇವತೆಗಳೂ ಸಮಾನಪ್ರಯೋಜನಗಳೂ ವರ್ಣಾಶ್ರಮಾಚಾರ ಧರ್ಮಗಳೂ ಇರುತ್ತವೆ.

೧೨೫. ಸ್ವಾಮಿಯಾದ ಶ್ರೀಭಗವಂತನು ಆಯಾ ಯುಗಗಳಿಗನುಗುಣವಾಗಿ ಧರ್ಮಗಳನ್ನೂ, ಆ ಧರ್ಮಗಳಿಗನುಸಾರವಾಗಿ ವರ್ಣಾಶ್ರಮಾಚಾರಗಳನ್ನೂ ಸೃಷ್ಟಿ ಮಾಡುವನು. ಯುಗಕ್ಕೆ ತಕ್ಕಂತೆಯೇ ಸಮಸ್ತ ಕಾರ್ಯಗಳೂ ನಡೆಯುತ್ತವೆ.

೧೨೬. ಎಲೈ ಮುನಿವರ್ಯರೇ, ಪೂರ್ವೋಕ್ತರೀತಿಯಲ್ಲಿ ಯುಗಗಳು, ಅವುಗಳ ಲಕ್ಷಣ, ಸಂಬಂಧ ಇವೇ ಮೊದಲಾದುವುಗಳನ್ನು ನಿಮಗಾಗಿ ತಿಳಿಸಿರುವೆನು.

**ಅನುಷಂಗಃ ಸಮಾಖ್ಯಾತಃ ಸೃಷ್ಟಿಸರ್ಗಂ ನಿಬೋಧತ ।**
**ವಿಸ್ತರೇಣಾನುಪೂರ್ವ್ಯಾ ಚ ಸ್ಥಿತಿಂ ವಕ್ಷ್ಯೇ ಯುಗೇಷ್ವಿಹ ॥ ೧೨೬ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಚತುರ್ಯುಗಾಖ್ಯಾನಂ "**
**ನಾಮಾಷ್ಟಪಂಚಾಶೋಽಧ್ಯಾಯಃ**

---

ಈಗ ಸೃಷ್ಟಿಕ್ರಮಗಳನ್ನೂ, ಸ್ಥಿತಿಯನ್ನೂ ಯುಗಾನುಸಾರವಾಗಿಯೂ, ವಿಸ್ತಾರವಾಗಿಯೂ. ಕ್ರಮವಾಗಿಯೂ ಹೇಳುವೆನು ಕೇಳಿರೆಂದು ಸೂತನು ಮುನಿಗಳಿಗೆ ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಚತುರ್ಯುಗವರ್ಣನೆಯೆಂಬ "
ಐವತ್ತೆಂಟನೆಯ ಅಧ್ಯಾಯವು ಸಮಾಪ್ತವು.

# ಐವತ್ತೆಂಟನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ದ್ವಾಪರ ಕಲಿಯುಗಗಳ ಧರ್ಮಗಳು ವಿಶೇಷವಾಗಿ ವರ್ಣಿತವಾಗಿವೆ. ತ್ರೇತಾಯುಗದಲ್ಲಿದ್ದ ಸಿದ್ಧಿಗಳು ದ್ವಾಪರಯುಗದಲ್ಲಿ ನಷ್ಟವಾಗಿ ಕಾಮ, ಕ್ರೋಧ, ಲೋಭ, ಮೋಹಾದಿಗಳು ಅಧಿಕವಾಗಿ ಧರ್ಮಗಳು ಅಲ್ಪಾವಶಿಷ್ಟವಾಗುವುವು. ಆಗ ಜಾತಿಸಾಂಕರ್ಯಾದಿಗಳು ಸಂಭವಿಸಿ, ನಾನಾವಿಧ ದುಃಖಗಳು ಉಂಟಾಗುವುವು. ವರ್ಣಾಶ್ರಮಾಚಾರಗಳು ನಷ್ಟವಾಗುವುವು. ಇಂತಹ ದ್ವಾಪರಯುಗವು ಕಳೆದು ಸಂಧ್ಯಾಂಶವು ಬರಲು ಇನ್ನೂ ಸ್ವಲ್ಪ ಹೆಚ್ಚು ಕಷ್ಟಗಳು ಉಂಟಾಗುವುವು. ಹೀಗೆ ದ್ವಾಪರಯುಗವು ಕಳೆದು ಕಲಿಯುಗವು ಬರಲು ಹಿಂಸಾ, ಅಸೂಯಾ, ಅನೃತ, ಮೋಸ, ವಧೆ ಇವು ಜಾಸ್ತಿಯಾಗಿ. ಅಧರ್ಮಗಳು, ರೋಗ, ಅನಾವೃಷ್ಟಿ, ಅಕಾಲ ಮರಣ ಇವುಗಳು ಸಂಭವಿಸುವುವು. ಬ್ರಾಹ್ಮಣಾದಿಗಳು ವೇದಾಧ್ಯಯನಗಳನ್ನು ಮಾಡದೆ, ಹೀನ ಜಾತಿಯವರೊಡನೆ ಶಯನಾಸನಭೋಜನಾದಿಗಳನ್ನು ಮಾಡುವರು. ಅನಾಚಾರವು ಅಧಿಕವಾಗಿ ಜಾತಿಸಾಂಕರ್ಯವಾಗುವುದು. ಯಜ್ಞಯಾಗಾದಿ ಸತ್ಕರ್ಮಗಳು ನಾಶವಾಗುವುವು. ಚೋರರಂತೆ ದೊರೆಗಳು ಪ್ರಜಾದ್ರವ್ಯಗಳನ್ನು ಅಪಹರಿಸುವರು. ಆದರೆ ಕಲಿಯುಗದಲ್ಲಿ ಒಂದು ದಿವಸ ಸತ್ಕರ್ಮಗಳನ್ನು ಮಾಡಿದರೆ ಇತರ ಯುಗಗಳಲ್ಲಿ ಒಂದು ವರ್ಷಗಳು ಮಾಡಿದ ಧರ್ಮಗಳ ಫಲವನ್ನು ಹೊಂದುವರು. ಹೀಗೆ ಧರ್ಮಗಳು ನಷ್ಟವಾಗಲು, ಪ್ರಜೆಗಳು ನಾನಾ ಕಷ್ಟಗಳನ್ನು ಹೊಂದುವರು. ಆಗ ಶ್ರೀ ಭಗವಂತನು ಧರ್ಮಸ್ಥಾಪನೆಗಾಗಿ ಪ್ರಮಿತಿಯೆಂಬ ನಾಮದಿಂದ ಚಂದ್ರವಂಶದಲ್ಲಿ ಅವತರಿಸಿ ಸೈನ್ಯಸಮೇತನಾಗಿ ಭೂಮಂಡಲದಲ್ಲಿ ಸಂಚರಿಸುವನು. ಹೀಗೆ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡುತ್ತಾ, ಮ್ಲೇಂಛಾದಿ ದುಷ್ಟರಾಜರನ್ನು ನಿರ್ಮೂಲಮಾಡುವನು. ಹೀಗೆ ಇಪ್ಪತ್ತು ವರ್ಷಗಳಕಾಲ ಸಂಚರಿಸಿ, ಧರ್ಮಸ್ಥಾಪನೆಯನ್ನು ಮಾಡಿ ಸೈನ್ಯಸಮೇತನಾಗಿ ಶ್ರೀ ಭಗವಂತನು ಮಾಯವಾಗುವನು. ಹೀಗೆ ಕಲಿಯುಗವು ಕಳೆದು ಕಲಿಯುಗದ ಸಂಧ್ಯಾಂಶವು ಬರಲು ಕಲಿಯುಗಕ್ಕಿಂತಲೂ ದ್ವಿಗುಣವಾದ ಕಷ್ಟಗಳು ಸಂಭವಿಸುವುವು. ಆಗ ಪ್ರಜೆಗಳು ಆತ್ಮರಕ್ಷಣೆಗಾಗಿ ಪತ್ನೀಪುತ್ರರನ್ನೂ, ಮನೆ ಮಠಗಳನ್ನೂ ತ್ಯಜಿಸಿ ಪರ್ವತ ಗುಹೆಗಳನ್ನು ಹೊಂದುವರು. ಆ ಸಂಧ್ಯಾಂಶವು ಸಂಪೂರ್ಣ ಕಳೆದುಹೋಗಲು ಪುನಃ ಕೃತಯುಗವು ಪ್ರಾಪ್ತವಾಗಿ ಧರ್ಮಸ್ಥಾಪನೆಯಾಗುವುದು. ಹೀಗೆಯೇ ಪ್ರತಿಯೊಂದು ಚತುರ್ಯುಗದಲ್ಲಿಯೂ ಕಾರ್ಯಗಳು ನಡೆಯುವುವು ಎಂಬ ವಿಷಯಗಳು ವರ್ಣಿತವಾಗಿವೆ

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಏಕೋನಷಷ್ಟಿತಮೋಽಧ್ಯಾಯಃ

**॥ ಸೂತ ಉವಾಚ ॥**

**ಯುಗೇಷು ಯಾಸ್ತು ಜಾಯಂತೇ ಪ್ರಜಾಸ್ತಾ ವೈ ನಿಬೋಧತ ।**
**ಆಸುರೀ ಸರ್ಪಗೋ ಪಕ್ಷಿ ಪೈಶಾಚೀ ಯಕ್ಷರಾಕ್ಷಸೀ ॥**
**ಯಸ್ಮಿನ್ ಯುಗೇ ಚ ಸಂಭೂತಿಸ್ತಾಸಾಂ ಯಾವತ್ತು ಜೀವಿತಂ ॥ ೧ ॥**

**ಪಿಶಾಚಾಸುರಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಯುಗಮಾತ್ರಂ ತು ಜೀವಂತಿ ಋತೇ ಮೃತ್ಯುಂ ವಧೇನ ತೇ ॥ ೨ ॥**

---

## ಐವತ್ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಯಾವ ಯಾವ ಯುಗಗಳಲ್ಲಿ ಯಾವ ಪ್ರಾಣಿಗಳು ಪುರುಷರು ಜನಿಸುವರೋ, ಅವರು ಆ ಯುಗಗಳ ಕೊನೆಯವರೆಗೂ ಜೀವಿಸುವರು ಎಂಬ ವಿಷಯಗಳನ್ನು ಈಗ ತಿಳಿಸುವೆನು ಕೇಳಿರಿ. ಯಾವ ಕೃತ, ತ್ರೇತಾದಿ ಯುಗಗಳಲ್ಲಿ ಅಸುರರು, ಸರ್ಪಗಳು, ಪ್ರಾಣಿಗಳು, ಪಕ್ಷಿಗಳು, ಪಿಶಾಚಿಗಳು, ಯಕ್ಷರು, ರಾಕ್ಷಸರು ಇವರು ಜನಿಸುವರೋ, ಅವರು ಅಂದರೆ ಅವರ ಜಾತೀಯರು ಆ ಯುಗದ ಕೊನೆಯವರೆಗೂ ಜೀವಿಸುವರು.

೨. ಆದರೆ ಪಿಶಾಚಿಗಳು, ಅಸರರು, ಗಂಧರ್ವರು, ಯಕ್ಷರು, ರಾಕ್ಷಸರು ಮತ್ತು ಸರ್ಪಗಳು ಇವುಗಳನ್ನು ಯಾರೂ ಕೊಲ್ಲದಿದ್ದರೆ ಅವು ಆ ಯುಗಗಳ ಕೊನೆಯ ವರೆಗೂ ಜೀವಿಸುತ್ತವೆ.

ಮಾನುಷಾಣಾಂ ಪಶೂನಾಂ ಚ ಪಕ್ಷಿಣಾಂ ಸ್ಥಾವರೈಃ ಸಹ ।
ತೇಷಾಮಾಯುಃ ಪರಿಕ್ರಾಂತಂ ಯುಗಧರ್ಮೇಷು ಸರ್ವಶಃ ॥ ೩ ॥

ಅಸ್ಥಿತಿಸ್ತು ಕಲೌ ದೃಷ್ಟಾ ಭೂತಾನಾಮಾಯುಷಸ್ತು ವೈ ।
ಪರಮಾಯುಃ ಶತಂ ತ್ವೇತನ್ಮನುಷ್ಯಾಣಾಂ ಕಲೌ ಸ್ಮೃತಂ ॥ ೪ ॥

ದೇವಾಸುರಪ್ರಮಾಣಾತ್ತು ಸಪ್ತಸಪ್ತಾಂಗುಲಂ ಹ್ರಸತ್ ।
ಅಂಗುಲಾನಾಂ ಶತಂ ಪೂರ್ಣಮಷ್ಟಪಂಚಾಶದುತ್ತರಂ ॥ ೫ ॥

ದೇವಾಸುರಪ್ರಮಾಣಂತದುಚ್ಛ್ರಾಯಂ ಕಲಿಜೈಃ ಸ್ಮೃತಂ ।
ಚತ್ವಾರಶ್ಚಾಪ್ಯಶೀತಿಶ್ಚ ಕಲಿಜೈರಂಗುಲೈಃ ಸ್ಮೃತಂ ॥ ೬ ॥

---

೩. ಮನುಷ್ಯರು, ಪಶುಗಳು, ಪಕ್ಷಿಗಳು, ವೃಕ್ಷಾದಿಗಳು ಇವುಗಳಿಗೆ ಆಯಾ ಯುಗಾನುಸಾರವಾಗಿ ಆಯುಷ್ಯವು ಕ್ಲಿಷ್ಟವಾಗಿರುವುದೆಂದು ಜ್ಞಾನಿಗಳು ಹೇಳುವರು.

೪. ಕಲಿಯುಗದಲ್ಲಿ ಮನುಷ್ಯರಿಗೆ ಪರಮಾವಧಿ ಜೀವಿತಕಾಲವು ಒಂದುನೂರು ವರ್ಷಗಳೆಂಬುದಾಗಿ ವ್ಯವಸ್ಥಿತವಾಗಿದೆ. ಭೂತಗಳಿಗೆ ಪರಮಾವಧಿ ಜೀವಿತಕಾಲವು (ಸ್ಥಿರವಲ್ಲ) ಅಸ್ಥಿರವಾಗಿದೆ.

೫. ದೇವಾಸುರರ ಪ್ರಮಾಣವು ನೂರ ಐವತ್ತೆಂಟು ಅಂಗುಲಗಳಾಗಿರುವುದು. ಅಂದರೆ ಸುಮಾರು ಹದಿಮೂರು ಅಡಿ ಎತ್ತರವಾಗಿರುವರು. ಕಲಿಯುಗದಲ್ಲಿ ಮನುಷ್ಯರು ಅವರಿಗಿಂತಲೂ ನಲವತ್ತೇಳಂಗುಲ ಕಡಮೆಯಾಗಿರುವರು. ಅಂದರೆ ಸುಮಾರು ಒಂಭತ್ತು ಅಡಿ ಎತ್ತರವಾಗಿರುವರು.

೬. ಕಲಿಯುಗದ ರೀತಿಯಿಂದ ದೇವಾಸುರರ ಪ್ರಮಾಣವನ್ನು ನಿರೂಪಿಸಿರುವೆನು. ಮನುಷ್ಯರ ಪ್ರಮಾಣವಾದರೋ ಕಲಿಯುಗಾನುಸಾರವಾಗಿ ಎಂಭತ್ತುನಾಲ್ಕು ಅಂಗುಲ ಅಂದರೆ ಏಳಡಿ ಎತ್ತರವಾಗಿರುವರು.

**ಸ್ವೇನಾಂಗುಲಪ್ರಮಾಣೇನ ಊರ್ಧ್ವಮಾಪಾದಮಸ್ತಕಂ ।**
**ಇತ್ಯೇಷ ಮಾನುಷೋತ್ಸೇಧೋ ಹ್ರಸತೀಹ ಯುಗಾಂತಿಕೇ ॥ ೭ ॥**

**ಸರ್ವೇಷು ಯುಗಕಾಲೇಷು ಅತೀತಾನಾಗತೇಷ್ವಿಹ ।**
**ಸ್ವೇನಾಂಗುಲಪ್ರಮಾಣೇನ ಅಷ್ಟತಾಲಃ ಸ್ಮೃತೋ ನರಃ ॥ ೮ ॥**

**ಆಪಾದತೋ ಮಸ್ತಕಂ ತು ನವತಾಲೋ ಭವೇತ್ತು ಯಃ ।**
**ಸಂಹತಾಜಾನುಬಾಹುಸ್ತು ಸ ಸುರೈರಪಿ ಪೂಜ್ಯತೇ ॥ ೯ ॥**

**ಗವಾಶ್ವಹಸ್ತಿನಾಂ ಚೈವ ಮಹಿಷಸ್ಥಾವರಾತ್ಮನಾಂ ।**
**ಕ್ರಮೇಣೈತೇನ ಯೋಗೇನ ಹ್ರಾಸವೃದ್ಧೀ ಯುಗೇ ಯುಗೇ ॥ ೧೦ ॥**

---

೭. ಹೀಗೆ ಈ ಪ್ರಮಾಣವನ್ನು ತಂತಮ್ಮ ಅಂಗುಲ ಪ್ರಮಾಣದಿಂದ, ಪಾದದಿಂದ ಶಿರಸ್ಸಿನವರೆಗೂ ಅಳತೆಯನ್ನು ಮನುಷ್ಯರು ತಿಳಿಯಬೇಕು. ಈ ಪ್ರಮಾಣವೂ ಸಹ ಕಾಲಕ್ರಮವಾಗಿ ಹ್ರಾಸವಾಗುವುದು. ಪುರುಷರು ಕ್ರಮವಾಗಿ ವಾಮನರಾಗುವರು.

೮-೯. ಅತೀತಾನಾಗತವಾದ ಸಮಸ್ತ ಯುಗಗಳಲ್ಲಿಯೂ ಮನುಷ್ಯರು ತಮ್ಮ ತಮ್ಮ ಅಂಗುಲ ಪ್ರಮಾಣಾನುಸಾರವಾಗಿ ಎಂಟುಗೇಣು ಎತ್ತರವಾಗಿರುವರೆಂದು ಶಾಸ್ತ್ರಕಾರರು ಹೇಳುವರು. ಯಾವ ಪುರುಷನು ಪಾದದಿಂದ ಶಿರಸ್ಸಿನವರೆಗೂ ಒಂಭತ್ತುಗೇಣು ಎತ್ತರವಾಗಿಯೂ, ಆಜಾನುಬಾಹುವಾಗಿಯೂ ಇರುವನೋ ಅವನು ಸರ್ವರಿಂದಲೂ ದೇವತೆಗಳಿಂದಲೂ ಸಹ ಪೂಜಾರ್ಹನಾಗುವನು.

೧೦. ಹೀಗೆಯೇ ಇತರ ಯುಗಗಳಲ್ಲಿಯೂ ಸಹ ಗೋವು, ಕುದುರೆ, ಆನೆ, ಎಮ್ಮೆ ಮತ್ತು ಸ್ಥಾವರವಸ್ತುಗಳು ಇವುಗಳ ಪ್ರಮಾಣವನ್ನು ತಿಳಿಯಬೇಕು. ಅವು ಕ್ರಮವಾಗಿ ಹ್ರಾಸವೃದ್ಧಿಗಳನ್ನು ಹೊಂದುತ್ತವೆ.

ಷಟ್‌ಸಪ್ತತ್ಯಂಗುಲೋತ್ಸೇಧಃ ಪಶೂನಾಂ ಕಕುದಸ್ತು ವೈ ।
ಅಂಗುಲಾಷ್ಟಶತಂ ಪೂರ್ಣಮುತ್ಸೇಧಃ ಕರಿಣಾಂ ಸ್ಮೃತಃ ॥ ೧೧ ॥

ಅಂಗುಲಾನಾಂ ಸಹಸ್ರಂ ತು ಚತ್ವಾರಿಂಶಾಂಗುಲಂ ವಿನಾ ।
ಪಂಚಾಶತಂ ಹಯಾನಾಂ ಚ ಉತ್ಸೇಧಃ ಶಾಖಿನಾಂ ಸ್ಮೃತಃ ॥ ೧೨ ॥

ಮಾನುಷಸ್ಯ ಶರೀರಸ್ಯ ಸನ್ನಿವೇಶಸ್ತು ಯಾದೃಶಃ ।
ತಲ್ಲಕ್ಷಣಸ್ತು ದೇವಾನಾಂ ದೃಶ್ಯತೇ ತತ್ವದರ್ಶನಾತ್ ॥ ೧೩ ॥

ಬುದ್ಧ್ಯಾತಿಶಯಯುಕ್ತಂ ಚ ದೇವಾನಾಂ ಕಾಯಮುಚ್ಯತೇ ।
ದೇವಾನತಿಶಯಂ ಚೈವ ಮಾನುಷಂ ಕಾಯಮುಚ್ಯತೇ ॥ ೧೪ ॥

---

೧೧. ಪಶುಗಳ ಕತ್ತಿನ ಬಳಿಯಲ್ಲಿರುವ ಡುಬ್ಬವು (ಹಿರುಳು) ಎಪ್ಪತ್ತಾರು ಅಂಗುಲ ಎತ್ತರವಾಗಿರುವುದು. ಆನೆಗಳ ಸಹಜವಾದ ಎತ್ತರವು ಎಂಟುನೂರು ಅಂಗುಲ ಸುಮಾರು ಅರವತ್ತೇಳು ಅಡಿಯಷ್ಟು ಉನ್ನತವಾಗಿರುವುದು.

೧೨. ವೃಕ್ಷಗಳು ಸುಮಾರು ಒಂಭೈಯ್ನೂರರವತ್ತಂಗುಲ ಅಂದರೆ ಎಂಭತ್ತು ಅಡಿ ಎತ್ತರವಾಗಿ ಬೆಳೆಯುತ್ತವೆ. ಕುದುರೆಗಳು ಐನೂರು ಅಂಗುಲದಷ್ಟು ಅಂದರೆ ನಲವತ್ತೆರಡು ಅಡಿ ಎತ್ತರವಾಗಿಯೂ ಇರುತ್ತವೆ.

೧೩. ಮನುಷ್ಯಶರೀರದ ಸನ್ನಿವೇಶವು ಹೇಗಿರುತ್ತದೆಯೋ ಹಾಗೆಯೇ ದೇವತೆಗಳ ದೇಹದ ಸನ್ನಿವೇಶವೂ ಇರುತ್ತದೆಯೆಂದು, ಅಂದರೆ ಮನುಷ್ಯನಂತೆಯೇ ದೇವತೆಗಳೂ ಇರುತ್ತಾರೆಂದು ಜ್ಞಾನಿಗಳು ಹೇಳುವರು.

೧೪. ಆದರೆ ದೇವತೆಗಳ ಶರೀರವು ಮನುಷ್ಯಶರೀರದಹಾಗಿದ್ದರೂ ಜ್ಞಾನವು ಮಾತ್ರ ಅತ್ಯಧಿಕವಾಗಿರುವುದು. ದಿವ್ಯಪುರುಷರು ಶರೀರದ ವಿಷಯದಲ್ಲಿ ದೇವತೆಗಳನ್ನು ಮೀರಿರುವರು.

ಇತ್ಯೇತೇ ವೈ ಪರಿಕ್ರಾಂತಾ ಭಾವಾ ಯೇ ದಿವ್ಯಮಾನುಷಾಃ ।
ಪಶೂನಾಂ ಪಕ್ಷಿಣಾಂ ಚೈವ ಸ್ಥಾವರಾಣಾಂ ನಿಬೋಧತ ॥ ೧೫ ॥

ಗಾವೋ ಹ್ಯಜಾ ಮಹಿಷ್ಯೋಽಶ್ವಾ ಹಸ್ತಿನಃ ಪಕ್ಷಿಣೋ ನಗಾಃ ।
ಉಪಯುಕ್ತಾಃ ಕ್ರಿಯಾಸ್ವೇತೇ ಯಜ್ಞಿಯಾಸ್ವಿಹ ಸರ್ವಶಃ ॥ ೧೬ ॥

ದೇವಸ್ಥಾನೇಷು ಜಾಯಂತೇ ತದ್ರೂಪಾ ಏವ ತೇ ಪುನಃ ।
ಯಥಾ ಶಯೋಪಭೋಗಾಸ್ತು ದೇವಾನಾಂ ಶುಭಮೂರ್ತಯಃ ॥ ೧೭ ॥

ತೇಷಾಂ ರೂಪಾನುರೂಪೈಸ್ತೈಃ ಪ್ರಮಾಣೈಃ ಸ್ಥಾಣುಜಂಗಮೈಃ ।
ಮನೋಜ್ಞೈಸ್ತತ್ಸ್ವಭಾವಜ್ಞೈಃ ಸುಖಿನೋ ಹ್ಯುಪಪೇದಿರೇ ॥ ೧೮ ॥

---

೧೫. ಪೂರ್ವೋಕ್ತಕ್ರಮವಲ್ಲಿ ದೇವತೆಗಳು ಮತ್ತು ಮನುಷ್ಯರ ಶರೀರದ ವಿಷಯಗಳನ್ನು ತಿಳಿಸಿರುವೆನು. ಈಗ ಪಶುಗಳು, ಪಕ್ಷಿಗಳು ಮತ್ತು ಅಚಲವಸ್ತುಗಳು ಇವುಗಳ ವಿಷಯಗಳನ್ನು ತಿಳಿಸುವೆನು ಕೇಳಿರೆಂದನು.

೧೬. ಗೋವುಗಳು, ಆಡು, ಎಮ್ಮೆ, ಕುದುರೆ, ಆನೆ, ಪಕ್ಷಿ, ಪರ್ವತ ಇವುಗಳು ಮನುಷ್ಯರ ಕಾರ್ಯಗಳಿಗೆ ಅತ್ಯುಪಯುಕ್ತವಾಗಿವೆ. ಇವುಗಳಲ್ಲಿ ಕೆಲವು ಯಜ್ಞಯಾಗಾದಿಗಳಿಗೆ ಸಾಧಕವಾಗಿಯೂ ಇರುತ್ತವೆ.

೧೭. ಮೇಲೆ ನಿರೂಪಿಸಿರುವ ವಸ್ತುಗಳಲ್ಲಿ ಯಾವುವು ಯಾಗೋಪಯುಕ್ತಗಳಾಗಿವೆಯೋ ಅವು ಪುನಃ ದೇವಸ್ಥಾನಗಳಲ್ಲಿ ಉಪಯುಕ್ತವಾಗಿ ಜನಿಸಿ ಭಗವಂತನ ಕೈಂಕರ್ಯವನ್ನು ಮಾಡುತ್ತವೆ.

೧೮. ಅವು ಸ್ವರೂಪಗಳಿಂದಲೂ, ತಮ್ಮ ಸಮಾನರೂಪಗಳಿಂದಲೂ, ಸ್ಥಾವರ ಜಂಗಮಗಳಾಗಿ ಜನಿಸಿ ಉತ್ತಮವಾದ ಧ್ಯೇಯಗಳಿಂದ ಭಗವತ್ಸೇವೆಯನ್ನು ಮಾಡಿ ಇಹಪರಗಳಲ್ಲಿಯೂ ಸೌಖ್ಯವನ್ನು ಹೊಂದುತ್ತವೆ.

ಅತಃ ಶಿಷ್ಟಾನ್ ಪ್ರವಕ್ಷ್ಯಾಮಿ ಸತಃ ಸಾಧೂಂಸ್ತಥೈವ ಚ ।
ಸದಿತಿ ಬ್ರಹ್ಮಣಃ ಶಬ್ದಸ್ತದ್ವಂತೋ ಯೇ ಭವಂತ್ಯುತ ॥
ಸಾಯುಜ್ಯಂ ಬ್ರಹ್ಮಣೋತ್ಯಂತಂ ತೇನ ಸಂತಃ ಪ್ರವಕ್ಷ್ಯತೇ ॥ ೧೯ ॥

ದಶಾತ್ಮಕೇ ಯೇ ವಿಷಯೇ ಕಾರಣೇ ಚಾಷ್ಟಲಕ್ಷಣೇ ।
ನ ಕ್ರುಧ್ಯಂತಿ ನ ಹೃಷ್ಯಂತಿ ಜಿತಾತ್ಮಾನಸ್ತು ತೇ ಸ್ಮೃತಾಃ ॥ ೨೦ ॥

ಸಾಮಾನ್ಯೇಷು ಚ ಧರ್ಮೇಷು ತಥಾ ವೈಶೇಷಿಕೇಷು ಚ ।
ಬ್ರಹ್ಮಕ್ಷತ್ರವಿಶೋ ಯುಕ್ತಾ ಯಸ್ಮಾತ್ತಸ್ಮಾದ್ದ್ವಿಜಾತಯಃ ॥ ೨೧ ॥

ವರ್ಣಾಶ್ರಮೇಷು ಯುಕ್ತಸ್ಯ ಸ್ವರ್ಗಗೋಮುಖಚಾರಿಣಃ ।
ಶ್ರೌತಸ್ಮಾರ್ತಸ್ಯ ಧರ್ಮಸ್ಯ ಜ್ಞಾನಾದ್ಧರ್ಮಃ ಸ ಉಚ್ಯತೇ ॥ ೨೨ ॥

---

೧೯. ಆದುದರಿಂದ ಉಳಿದಿರುವ ಸತ್ಪುರುಷರು, ಮತ್ತು ಸಾಧುಗಳು ಇವರ ವಿಷಯಗಳನ್ನು ವಿವರಿಸುವೆನು ತಿಳಿಯರೆಂದನು. ಸತ್ ಎಂಬ ಶಬ್ದವು ಬ್ರಹ್ಮವಾಚಕ ವಾಗಿದೆ. ಸಂತರೆಂದರೆ ಅಂತಹ ಬ್ರಹ್ಮಜ್ಞಾನಿಗಳೆಂದು ಅರ್ಥವಾಗುವುದು. ಅವರು ಆ ಜ್ಞಾನದಿಂದ ಬ್ರಹ್ಮನ ಸಾಯುಜ್ಯಪದವಿಗೆ ಅರ್ಹರಾಗಿರುವರು. ಆದುದರಿಂದ ಅವರಿಗೆ ಸಂತರೆಂಬ ನಾಮವು ಅನ್ವರ್ಥಕವಾಗಿರುವುದು.

೨೦. ಜಿತೇಂದ್ರಿಯರಾದ ಸತ್ಪುರುಷರು ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯ ಇವುಗಳಿಗೆ ವಿಷಯಗಳಾದ ರೂಪರಸಾದಿಗಳಿಗೆ ಅಧೀನರಾಗದೆ ಕೋಪತಾಪಾದಿಗಳಿಗೆ ಅವಕಾಶವನ್ನು ಕೊಡುವುದಿಲ್ಲ. ಒಂದುವೇಳೆ ವಿಷಯಗಳು ದೊರೆಯದಿದ್ದರೂ ಅವರು ಕೋಪಿಸುವುದಿಲ್ಲ, ಸಂತೋಷಿಸುವುದೂ ಇಲ್ಲ. ಆದುದರಿಂದ ಅವರು ಜಿತೇಂದ್ರಿಯರಾಗಿರುವರು.

೨೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಸಾಮಾನ್ಯವಾದ ಸಂಧ್ಯಾವಂದನಾದಿ ಗಳಲ್ಲಿಯೂ, ವಿಶೇಷವಾದ ಯಜ್ಞಯಾಗಾದಿವಿಶೇಷಧರ್ಮಗಳಲ್ಲಿಯೂ ಒಂದೇ ವಿಧವಾದ ಅಧಿಕಾರವುಳ್ಳವರಾದ್ದರಿಂದ ಈ ಮೂರು ಜಾತಿಯರಿಗೂ ದ್ವಿಜಾತಿಗಳೆಂದು ನಾಮವು ಪ್ರಾಪ್ತವಾಗಿದೆ.

೨೨. ಯಾವನು ವರ್ಣಾಶ್ರಮಾಚಾರಯುಕ್ತನೂ, ಸ್ವರ್ಗಗೋವುಗಳಮುಂದೆ ಸಂಚರಿಸುವನೂ, ಶ್ರೌತಸ್ಮಾರ್ತಧರ್ಮಗಳಲ್ಲಿ ಆಸಕ್ತನೂ ಆಗಿರುವನೋ ಅವನಿಗೆ ಜ್ಞಾನಕ್ಕಿಂತಲೂ ಧರ್ಮವೇ ಶ್ರೇಷ್ಠವಾಗಿರುವುದು.

ವಿದ್ಯಾಯಾಃ ಸಾಧನಾತ್ಸಾಧುರ್ಬ್ರಹ್ಮಚಾರೀ ಗುರೋರ್ಹಿತಃ ।
ಕ್ರಿಯಾಣಾಂ ಸಾಧನಾಚ್ಚೈವ ಗೃಹಸ್ಥಃ ಸಾಧುರುಚ್ಯತೇ ॥ ೨೩ ॥

ಸಾಧನಾತ್ತಪಸೋಽರಣ್ಯೇ ಸಾಧುರ್ವೈಖಾನಸಃ ಸ್ಮೃತಃ ।
ಯತಮಾನೋ ಯತಿಃ ಸಾಧುಃ ಸ್ಮೃತೋ ಯೋಗಸ್ಯ ಸಾಧನಾತ್ ॥ ೨೪ ॥

ಏವಮಾಶ್ರಮಧರ್ಮಾಣಾಂ ಸಾಧನಾತ್ ಸಾಧವಃ ಸ್ಮೃತಾಃ ।
ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋಽಥ ಭಿಕ್ಷುಕಃ ॥ ೨೫ ॥

ನ ಚ ದೇವಾ ನ ಪಿತರೋ ಮುನಯೋ ನ ಚ ಮಾನವಾಃ ।
ಅಯಂ ಧರ್ಮೋ ಹ್ಯಯಂ ನೇತಿ ಬ್ರುವಂತೋಽಭಿನ್ನದರ್ಶನಾಃ ॥ ೨೬ ॥

---

೨೩. ಯಾವನು ವಿದ್ಯೆಯಲ್ಲಿ ಆಸಕ್ತನಾಗಿರುವನೋ ಅವನಿಗೆ ಸಾಧು ಸಂಜ್ಞೆಯು ಸಂಭವಿಸಿರುತ್ತದೆ. ಯಾವನು ಗುರುಹಿತದಲ್ಲಿ ರತನೋ ಅವನೇ ಬ್ರಹ್ಮಚಾರಿಯು. ಯಾವನು ಕ್ರಿಯಾಸಾಧಕನೋ ಅವನು ಗೃಹಸ್ಥನಾಗಿಯೂ, ಸಾಧುವಾಗಿಯೂ ಇರುವನು.

೨೪. ವೈಖಾನಸರು ಅರಣ್ಯದಲ್ಲಿ ತಪಸ್ಸಿಗೆ ಸಾಧಕರಾಗಿರುವುದರಿಂದ ಸಾಧುಗಳೆಂಬುದಾಗಿಯೂ, ತಪಸ್ಸಿಗೆ ಅಥವಾ ಮೋಕ್ಷಕ್ಕಾಗಿ (ಸಾಧಕರಾದುದರಿಂದ) ಯತ್ನಿಸುವುದರಿಂದ ಯತಿಗಳೆಂಬುದಾಗಿಯೂ, ಯೋಗಸಾಧಕರಾದುದರಿಂದ ಸಾಧುಗಳೆಂಬುದಾಗಿಯೂ ಪ್ರಖ್ಯಾತರಾಗಿರುವರು.

೨೫. ಹೀಗೆಯೇ ಯಾವನು ವರ್ಣಾಶ್ರಮಧರ್ಮಗಳಿಗೆ ಸಾಧಕನಾಗಿರುವನೋ ಅವನಿಗೂ ಸಾಧುವೆಂದೇ ನಾಮವು ಸಂಭವಿಸಿದೆ. ಪುರುಷರು, ಗೃಹಸ್ಥರು, ಬ್ರಹ್ಮಚಾರಿಗಳು, ವಾನಪ್ರಸ್ಥರು, ಯತಿಗಳು ಎಂಬುದಾಗಿ ನಾಲ್ಕುವಿಧರಾಗಿರುವರು.

೨೬. ದೇವತೆಗಳಾಗಿ ಹುಟ್ಟಿದ ಮಾತ್ರದಿಂದ ಜ್ಞಾನಿಯಾಗುವುದಿಲ್ಲ. ಇದರಂತೆ ಪಿತೃಗಳಾದ ಮಾತ್ರದಿಂದಲೂ ಜ್ಞಾನಿಯಾಗಲಾರರು. ಯತಿಗಳು, ಪುರುಷರು ಆದ ಮಾತ್ರದಿಂದ ಜ್ಞಾನಿಯಾಗುವುದಿಲ್ಲ. ಯಾವನು ಧರ್ಮಾಧರ್ಮಗಳನ್ನೂ, ಯುಕ್ತಾಯುಕ್ತಗಳನ್ನೂ ಹೇಳುವನೋ ಅವನೇ ಜ್ಞಾನಿಯಾಗುವನು.

ಧರ್ಮಾಧರ್ಮಾವಿಹ ಪ್ರೋಕ್ತೌ ಶಬ್ದಾವೇತೌ ಲಯಾತ್ಮಕೌ ।
ಕುಶಲಾಕುಶಲಂ ಕರ್ಮ ಧರ್ಮಾಧರ್ಮಾವಿತಿ ಸ್ಮೃತೌ ॥ ೨೭ ॥

ಧಾರಣಾ ಧೃತಿರಿತ್ಯರ್ಥಾದ್ಧಾತೋರ್ಧರ್ಮಃ ಪ್ರಕೀರ್ತಿತಃ ।
ಅಧಾರಣೇಽಮಹತ್ವೇ ಚ ಅಧರ್ಮ ಇತಿ ಚೋಚ್ಯತೇ ॥ ೨೮ ॥

ಅತ್ರೇಷ್ಟಪ್ರಾಪಕಾ ಧರ್ಮಾ ಆಚಾರ್ಯೈರುಪದಿಶ್ಯತೇ ।
ವೃದ್ಧಾ ಹ್ಯಲೋಲುಪಾಶ್ಚೈವ ಆತ್ಮವಂತೋ ಹ್ಯದಂಭಕಾಃ ॥
ಸಮ್ಯಗ್ವಿನೀತಾ ಋಜವಸ್ತಾನಾಚಾರ್ಯಾನ್ಪ್ರಚಕ್ಷತೇ ॥ ೨೯ ॥

ಸ್ವಯಮಾಚರತೇ ಯಸ್ಮಾದಾಚಾರಂ ಸ್ಥಾಪಯತ್ಯಪಿ ।
ಆಚಿನೋತಿ ಚ ಶಾಸ್ತ್ರಾರ್ಥಾನ್ಯಮೈಃ ಸನ್ನಿಯಮೈರ್ಯುತಃ ॥ ೩೦ ॥

---

೨೭. ಧರ್ಮಾಧರ್ಮವೆಂಬ ಶಬ್ದಗಳು ಕ್ರಿಯಾಸ್ವರೂಪಗಳಾಗಿವೆ. ಯುಕ್ತಾಯುಕ್ತಕರ್ಮಗಳಿಗೆ ಧರ್ಮಾಧರ್ಮಗಳೆಂದು ನಾಮಗಳು ಪ್ರಾಪ್ತವಾಗಿವೆ.

೨೮. ಯಾವುದು ಈ ಚರಾಚರಾತ್ಮಕವಾದ ಜಗತ್ತನ್ನೇ ಧರಿಸಿರುತ್ತವೆಯೋ ಯಾವುದರ ಆಧಾರದಿಂದ ಈ ವಿಶ್ವವು ನಿಂತಿದೆಯೋ ಅವಕ್ಕೆ ಧರ್ಮವೆಂಬ ನಾಮವು ಬಂದಿದೆ. ಧಾರಣಾತ್ಮಕವಾದ ಧೃಧಾತುವಿನಿಂದ ಧರ್ಮಶಬ್ದವು ನಿಷ್ಪನ್ನವಾಗಿದೆ. ಯಾವದು ಜಗತ್ತಿಗೆ ಆಶ್ರಯರಹಿತವೂ, ಅಲ್ಪವೂ ಆಗಿದೆಯೋ ಅದು ಅಧರ್ಮ ವಾಗಿದೆ.

೨೯. ಅವುಗಳಲ್ಲಿ ಯಾವುವು ಇಷ್ಟಾರ್ಥಗಳನ್ನು ಕೊಡುತ್ತವೆಯೋ, ಅವೇ ಧರ್ಮಗಳೆಂದು ಗುರುಗಳು ಹೇಳುವರು. ಯಾರು ವೃದ್ಧರೂ, ನಿಸ್ಪೃಹರೂ, ಆತ್ಮ ತತ್ವಜ್ಞರೂ, ದಂಭರಹಿತರೂ, ಅತ್ಯಂತವಿನೀತರೂ, ಋಜುಗಾಮಿಗಳೂ ಆಗಿರುವರೋ ಅವರೇ ಆಚಾರ್ಯಪುರುಷರಾಗಿರುವರು. ಇಂತಹ ಪುರುಷರೇ ಆಚಾರ್ಯ ರಾಗಿರುವರು.

೩೦. ಯಾವನು ತಾನು ಸದ್ಧರ್ಮಗಳನ್ನು ಆಚರಿಸುತ್ತಾನೆಯೋ, ಸದಾಚಾರ ಗಳನ್ನು ಸ್ಥಾಪಿಸುತ್ತಾನೆಯೋ, ಶಾಸ್ತ್ರಾರ್ಥಗಳನ್ನು ಅನುಷ್ಠಾನಕ್ಕೆ ತರುತ್ತಾನೆಯೋ ಯಾವ ನಿಯಮಾದಿಗಳಿಂದ ಸಹಿತನಾಗಿರುತ್ತಾನೆಯೋ ಅವನೇ ಮುಖ್ಯಾಚಾರ್ಯ ನಾಗಿರುವನು.

ಪೂರ್ವೇಭ್ಯೋ ವೇದಯಿತ್ವೇಹ ಶ್ರೌತಂ ಸಪ್ತರ್ಷಯೋಽಬ್ರುವನ್ ।
ಋಚೋ ಯಜೂಂಷಿ ಸಾಮಾನಿ ಬ್ರಹ್ಮಣೋಽಂಗಾನಿ ಚ ಶ್ರುತಿಃ ॥ ೩೧ ॥

ಮನ್ವಂತರಸ್ಯಾತೀತಸ್ಯ ಸ್ಮೃತ್ವಾಚಾರಂ ಪುನರ್ಜಗೌ ।
ತಸ್ಮಾತ್ಸ್ಮಾರ್ತಃ ಸ್ಮೃತೋ ಧರ್ಮೋ ವರ್ಣಾಶ್ರಮವಿಭಾಗಜಃ ॥ ೩೨ ॥

ಸ ಏಷ ದ್ವಿವಿಧೋ ಧರ್ಮಃ ಶಿಷ್ಟಾಚಾರ ಇಹೋಚ್ಯತೇ ।
ಶೇಷಶಬ್ದಾತ್ ಶಿಷ್ಟ ಇತಿ ಶಿಷ್ಟಾಚಾರಃ ಪ್ರಚಕ್ಷ್ಯತೇ ॥ ೩೩ ॥

ಮನ್ವಂತರೇಷು ಯೇ ಶಿಷ್ಟಾ ಇಹ ತಿಷ್ಠಂತಿ ಧಾರ್ಮಿಕಾಃ ।
ಮನುಃ ಸಪ್ತರ್ಷಯಶ್ಚೈವ ಲೋಕಸಂತಾನಕಾರಣಾತ್ ॥
ಧರ್ಮಾರ್ಥಂ ಯೇ ಚ ಶಿಷ್ಟಾ ವೈ ಯಥಾತಥ್ಯಂ ಪ್ರಚಕ್ಷ್ಯತೆ ॥ ೩೪ ॥

---

೩೧. ಸಪ್ತರ್ಷಿಗಳು ಪೂರ್ವಿಕರಿಂದ ಶ್ರೌತ ಸ್ಮಾರ್ತ ವಿಷಯಗಳನ್ನು ತಿಳಿಯುಕೊಂಡು ಈ ಲೋಕದಲ್ಲಿ ಹರಡಿದರು. ಮತ್ತು ಋಗ್ವೇದ ಯಜುರ್ವೇದ ಸಾಮವೇದ ಇವುಗಳೂ ಶ್ರುತಿಸ್ಮೃತ್ಯಾದಿಗಳೂ ಕೂಡ ಬ್ರಹ್ಮದೇವನ ಅಂಗಗಳಿಂದ ಉದ್ಭವಿಸಿರುತ್ತವೆ.

೩೨. ಆ ಮಹರ್ಷಿಗಳು ಅತೀತವಾದ ಮನ್ವಂತರಗಳ ಆಚಾರಗಳನ್ನು ಸ್ಮರಿಸಿ ಪುನಃ ಲೋಕದಲ್ಲಿ ಪ್ರಸಿದ್ಧಿ ಮಾಡಿರುವರು. ಆದುದರಿಂದ ವರ್ಣಾಶ್ರಮಗಳ ವಿಭಾಗಾನುಸಾರವಾಗಿ ಶ್ರೌತ ಸ್ಮಾರ್ತ ಧರ್ಮಗಳು ಪ್ರಖ್ಯಾತವಾಗಿವೆ.

೩೩. ಹೀಗೆ ಲೋಕದಲ್ಲಿ ಪ್ರಸಿದ್ಧವಾಗಿರುವ ಶ್ರೌತ ಸ್ಮಾರ್ತಗಳೆಂಬ ಎರಡು ವಿಧವಾದ ಧರ್ಮಗಳಿಗೆ ಶಿಷ್ಟಾಚಾರವೆಂಬ ನಾಮವು ಸಂಭವಿಸಿರುತ್ತದೆ. ಶೇಷಶಬ್ದದಿಂದ ಶಿಷ್ಟಪದವು ಉಂಟಾಗಿದೆ. ಶೇಷವೆಂದರೆ ಉಳಿದಿರುವದೆಂದು ಅರ್ಥವಾಗುವುದು. ಏಸಂಚ ಹಿಂದಿನ ಆಚಾರವೇ ಈಗಲೂ ಉಳಿದಿರುವುದರಿಂದ ಅದಕ್ಕೆ ಶಿಷ್ಟಾಚಾರವೆಂದು ನಾಮವು ಪ್ರಾಪ್ತವಾಗಿದೆ.

೩೪. ಪೂರ್ವದ ಮನ್ವಂತರಗಳಲ್ಲಿ ಯಾರು ಇದ್ದರೋ ಅಂತಹ ಮಹಾತ್ಮರೇ ಈಗಲೂ ಇರುವುದರಿಂದ ಅವರಿಗೆ ಶಿಷ್ಟರೆಂಬ ನಾಮವು ಸಂಭವಿಸಿದೆ. ಪೂರ್ವದ ಮನುಗಳೂ ಮತ್ತು ಸಪ್ತರ್ಷಿಗಳೂ ಲೋಕೋದ್ಧಾರವನ್ನು ಮಾಡುವುದಕ್ಕಾಗಿ ಈಗ ಅವತರಿಸಿ ಧರ್ಮಾರ್ಥಗಳನ್ನು ಸ್ಥಾಪಿಸುವರು. ಮತ್ತು ಯಥಾರ್ಥವನ್ನೇ ನುಡಿಯುವರು. ಅಂತಹವರೇ ಶಿಷ್ಟರಾಗಿರುವರು.

ಮನ್ವಾದಯಶ್ಚ ಯೇ ಶಿಷ್ಟಾ ಯೇ ಮಯಾ ಪ್ರಾಗುದೀರಿತಾಃ ।
ತೈಃ ಶಿಷ್ಟೈಶ್ಚರಿತೋ ಧರ್ಮಃ ಸಮ್ಯಗೇವ ಯುಗೇ ಯುಗೇ ॥ ೩೫ ॥

ತ್ರಯೀ ವಾರ್ತಾ ದಂಡನೀತಿರಿಜ್ಯಾ ವರ್ಣಾಶ್ರಮಸ್ತಥಾ ।
ಶಿಷ್ಟೈರಾಚರ್ಯತೇ ಯಸ್ಮಾನ್ಮನುನಾ ಚ ಪುನಃ ಪುನಃ ॥
ಪೂರ್ವೈಃ ಪೂರ್ವಗತತ್ವಾಚ್ಚ ಶಿಷ್ಟಾಚಾರಃ ಸ ಶಾಶ್ವತಃ ॥ ೩೬ ॥

ದಾನಂ ಸತ್ಯಂ ತಪೋಽಲೋಭೋ ವಿದ್ಯೇಜ್ಯಾ ಪ್ರಜನೀ ದಯಾ ।
ಅಷ್ಟೌ ತಾನಿ ಚರಿತ್ರಾಣಿ ಶಿಷ್ಟಾಚಾರಸ್ಯ ಲಕ್ಷಣಂ ॥ ೩೭ ॥

ಶಿಷ್ಟಾ ಯಸ್ಮಾಚ್ಚರಂತ್ಯೇನಂ ಮನುಃ ಸಪ್ತರ್ಷಯಶ್ಚ ವೈ ।
ಮನ್ವಂತರೇಷು ಸರ್ವೇಷು ಶಿಷ್ಟಾಚಾರಸ್ತತಃ ಸ್ಮೃತಃ ॥ ೩೮ ॥

---

೩೫. ನಾನು ನಿಮಗಾಗಿ ಯಾವ ಮನ್ವಾದಿ ಮಹರ್ಷಿಗಳನ್ನು ನಿರೂಪಿಸಿದ್ದೆನೋ, ಅಂತಹ ಮಹಾತ್ಮರಾದ ಮಹರ್ಷಿಗಳು ಆಚರಿಸಿರುವುದೇ ಧರ್ಮವೆಂದು ಪ್ರತಿಯುಗದಲ್ಲಿಯೂ ಪ್ರಸಿದ್ಧಿಯಾಗಿದೆ.

೩೬. ಮನ್ವಾದಿ ಮಹರ್ಷಿಗಳೂ ಮತ್ತು ಸಪ್ತರ್ಷಿಗಳೂ ಆದ ಶಿಷ್ಟರು ಯಾವ ವೇದತ್ರಯಗಳು ವೃತ್ತಿ, ದಂಡನೀತಿ, ಯಾಗ, ವರ್ಣಾಶ್ರಮಧರ್ಮ ಇವುಗಳನ್ನು ಆಚರಿಸುವರೋ, ಅವನ್ನೇ ಸಮಸ್ತರಾದ ಸತ್ಪುರುಷರೂ ಪ್ರತಿ ಯುಗಗಳಲ್ಲಿಯೂ ಆಚರಿಸುವರು. ಆ ಧರ್ಮಗಳು ಅವನ್ನು ಆಚರಿಸಿದರೂ ಕೂಡ ಕೇವಲ ಪುರಾತನರಾದ ಕಾರಣ ಅವರಿಗೆ ಶಿಷ್ಟರೆಂದೂ, ಅವರು ಆಚರಿಸುವ ಧರ್ಮಗಳಿಗೆ ಶಾಶ್ವತವಾದ ಶಿಷ್ಟಾಚಾರಗಳೆಂದೂ ಲೋಕದಲ್ಲಿ ಪ್ರಸಿದ್ಧಿಯುಂಟಾಗಿದೆ.

೩೭. ದಾನ, ಸತ್ಯ, ತಪಸ್ಸು, ಅಲೋಭ, ವಿದ್ಯೆ, ಯಾಗ, ಪ್ರಜಾಸೃಷ್ಟಿ, ದಯಾ ಎಂಬ ಈ ಎಂಟೂ ಶಿಷ್ಟಾಚಾರಗಳಾಗಿವೆ. ಇಂತಹ ಅಷ್ಟವಿಧ ಧರ್ಮವನ್ನು ಆಚರಿಸುವವರೇ ಶಿಷ್ಟಾಚಾರಿಗಳೆಂದು ಮಹಾತ್ಮರು ಹೇಳುವರು

೩೮. ಶಿಷ್ಟರಾದ ಮಹಾತ್ಮರೂ ಸಪ್ತರ್ಷಿಗಳೂ ಈ ಧರ್ಮಗಳನ್ನು ಯಾವಾಗಲೂ ಆಚರಿಸುವುದರಿಂದ ಈ ಧರ್ಮಗಳಿಗೆ ಸದಾ ಕಾಲದಲ್ಲಿಯೂ ಸಮಸ್ತ ಮನ್ವಂತರಗಳಲ್ಲಿಯೂ ಶಿಷ್ಟಾಚಾರವೆಂಬ ಸಂಜ್ಞೆಯು ಸುಪ್ರಸಿದ್ಧವಾಗಿದೆ.

ವಿಜ್ಞೇಯಃ ಶ್ರವಣಾತ್ ಶ್ರೌತಃ ಸ್ಮರಣಾತ್ ಸ್ಮಾರ್ತ ಉಚ್ಯತೇ ।
ಇಜ್ಯಾವೇದಾತ್ಮಕಃ ಶ್ರೌತಃ ಸ್ಮಾರ್ತೋ ವರ್ಣಾಶ್ರಮಾತ್ಮಕಃ ॥
ಪ್ರತ್ಯಂಗಾನಿ ಚ ವಕ್ಷ್ಯಾಮಿ ಧರ್ಮಸ್ಯೇಹ ತು ಲಕ್ಷಣಂ ॥ ೩೯ ॥

ದೃಷ್ಟ್ವಾ ಪ್ರಭೂತಮರ್ಥಂ ಯಃ ಪೃಷ್ಟೋ ವೈ ನ ನಿಗೂಹತಿ ।
ಯಥಾ ಭೂತಪ್ರವಾದಸ್ತು ಇತ್ಯೇತತ್ಸತ್ಯಲಕ್ಷಣಂ ॥ ೪೦ ॥

ಬ್ರಹ್ಮಚರ್ಯಂ ಜಪೋ ಮೌನಂ ನಿರಾಹಾರತ್ವಮೇವ ಚ ।
ಇತ್ಯೇತತ್ ತಪಸೋ ಮೂಲಂ ಸುಘೋರಂ ತದ್ದುರಾಸದಂ ॥ ೪೧ ॥

ಪಶೂನಾಂ ದ್ರವ್ಯಹವಿಷಾಮೃಕ್ಸಾಮಯಜುಷಾಂ ತಥಾ ।
ಋತ್ವಿಜಾಂ ದಕ್ಷಿಣಾನಾಂ ಚ ಸಂಯೋಗೋ ಯೋಗ ಉಚ್ಯತೇ ॥ ೪೨ ॥

---

೩೯. ಸರ್ವಕಾಲದಲ್ಲಿಯೂ ಶ್ರವಣಕ್ಕೆ ಅರ್ಹವಾಗಿರುವುದರಿಂದ ಶ್ರುತ್ಯುಕ್ತ ಧರ್ಮಗಳಿಗೆ ಶ್ರೌತವೆಂದೂ, ಸ್ಮರಣಾರ್ಹವಾದುದರಿಂದ ಸ್ಮೃತ್ಯುಕ್ತಧರ್ಮಗಳಿಗೆ ಸ್ಮಾರ್ತವೆಂದೂ, ಸಂಜ್ಞೆಯು ಸಂಭವಿಸಿರುತ್ತದೆ. ಯಾಗಾದಿ ವೇದೋಕ್ತ ಧರ್ಮಗಳಿಗೆ ಶ್ರೌತವೆಂದೂ, ವರ್ಣಾಶ್ರಮಾಚಾರಗಳಿಗೆ ಸ್ಮಾರ್ತವೆಂದೂ ಸಂಜ್ಞೆಗಳು ಉಂಟಾಗಿವೆ. ಈ ಧರ್ಮಗಳ ಪ್ರತ್ಯಂಗಗಳನ್ನೂ, ಧರ್ಮಾಧರ್ಮಲಕ್ಷಣವನ್ನೂ ಹೇಳುವೆನು ಕೇಳಿರೆಂದನು.

೪೦. ಯಾವನು ಮಹತ್ತಾದ ದ್ರವ್ಯವನ್ನು ನೋಡಿ ಯಾರಾದರೂ ಕೇಳಿದರೆ ಮರೆಮಾಚದೆ ಇದ್ದುದನ್ನು ಇದ್ದಹಾಗೆಯೇ ಹೇಳುವನೋ, ಅವನಿಗೆ ಸತ್ಯವಂತನೆಂದೂ, ಅವನ ಮಾತು ಸತ್ಯವೆಂದೂ ಸಂಜ್ಞೆಯು ಪ್ರಾಪ್ತವಾಗಿದೆ.

೪೧. ಬ್ರಹ್ಮಚರ್ಯ, ಜಪ, ಮೌನ, ನಿರಾಹಾರತೆ ಅಂದರೆ ಆಹಾರವಿಲ್ಲದೇ ಇರುವುದು ಇವುಗಳು ತಪಸ್ಸಿಗೆ ಮೂಲಕಾರಣಗಳಾಗಿವೆಯೆಂದು ಮಹಾತ್ಮರು ಹೇಳುವರು. ಇಂತಹ ತಪಸ್ಸು ಘೋರವಾಗಿಯೂ, ಮಾಡಲಸಾಧ್ಯವಾಗಿಯೂ ಇರುತ್ತವೆಯೆಂದು ಹೇಳುವರು.

೪೨. ಯಾಗೋಪಯುಕ್ತ ಪಶುಗಳು, ದ್ರವ್ಯಗಳು, ಹವಿಸ್ಸು, ಋಗ್ವೇದ, ಯಜುರ್ವೇದ, ಸಾಮವೇದ, ಋತ್ವಿಕ್ಕುಗಳು, ದಕ್ಷಿಣೆಗಳು ಇವುಗಳ ಸಂಯೋಗಕ್ಕೆ ಯೋಗವೆಂಬ ಸಂಜ್ಞೆಯು ಪ್ರಾಪ್ತವಾಗಿದೆ. ಮೇಲೆ ನಿರೂಪಿಸಿರುವ ವಸ್ತುಗಳ ಸಮುದಾಯಕ್ಕೆ ಯೋಗವೆಂಬ ನಾಮವು ಬಂದಿದೆ.

**ಆತ್ಮವತ್ಸರ್ವಭೂತೇಷು ಯೋ ಹಿತಾಯಾಹಿತಾಯ ಚ ।**
**ಸಮಾ ಪ್ರವರ್ತತೇ ಸೃಷ್ಟಿಃ ಕೃತ್ಸ್ನಾ ಹ್ಯೇಷಾ ದಯಾ ಸ್ಮೃತಾ ॥ ೪೩ ॥**

**ಆಕ್ರುಷ್ಟೋಽಭಿಹತೋ ವಾಪಿ ನಾಕ್ರೋಶೇದ್ಯೋ ನ ಹಂತಿ ವಾ ।**
**ವಾಙ್ಮನಃ ಕರ್ಮಭಿಃ ಕ್ಷಾಂತಿಸ್ತಿತಿಕ್ಷೈಷಾ ಕ್ಷಮಾ ಸ್ಮೃತಾ ॥ ೪೪ ॥**

**ಸ್ವಾಮಿನಾಽರಕ್ಷ್ಯಮಾಣಾನಾಮುತ್ಸೃಷ್ಟಾನಾಂ ಚ ಮುತ್ಸು ಚ ।**
**ಪರಸ್ವಾನಾಮನಾದಾನಮಲೋಭ ಇಹ ಕೀರ್ತ್ಯತೇ ॥ ೪೫ ॥**

---

೪೩. ಯಾವನು ತನ್ನ ಹಿತವೇ ಪರರಹಿತವು, ಪರರ ಅಹಿತವೇ, ಕಷ್ಟವೇ ತನ್ನ ಕಷ್ಟವು ಎಂದು ತನ್ನಂತೆಯೇ ಸಕಲ (ವಸ್ತುಗಳಲ್ಲಿಯೂ,) ಪ್ರಾಣಿಗಳಲ್ಲಿಯೂ ಭಾವನೆಯನ್ನಿಡುವನೋ ಅವನೇ ದಯಾವಂತನು. ಅವನ ಸಂಪೂರ್ಣವಾದ ಸಮ ದೃಷ್ಟಿಯೇ ದಯೆಯೆಂದು ಪ್ರಸಿದ್ಧವಾಗಿದೆ. ದಯೆಯೆಂದರೆ ತನ್ನಾತ್ಮನಂತೆಯೇ ಸಕಲ ಪ್ರಾಣಿಗಳಲ್ಲಿಯೂ ಭಾವನೆಯನ್ನು ಮಾಡುವುದು ಎಂದು ಅರ್ಥವಾಗುವುದು.

೪೪. ಯಾವನು ತನ್ನನ್ನು ಹಿಂಸಿಸಿದರೂ, ಎಳೆದರೂ, ಹೊಡೆದರೂ ಕೂಡ ಪರರ ಮೇಲೆ ಕೋಪಿಸಿಕೊಳ್ಳದೆ, ಪರರನ್ನು ಹೊಡೆಯದೆ ಸುಮ್ಮನೆ ಶಾಂತನಾಗಿರು ವನೋ, ಮತ್ತು ಮನೋವಾಕ್ಕಾಯಕರ್ಮಗಳಿಂದ ಸಮವಾಗಿರುವನೋ ಅವನಿಗೆ ಕ್ಷಮಾವಂತನೆಂದೂ, ಅವನ ಶಾಂತತೆಗೆ ಕ್ಷಮೆ ಎಂದೂ ಸಂಜ್ಞೆಯು ಪ್ರಾಪ್ತವಾಗಿದೆ.

೪೫. ಯಾವನು ತನ್ನ ಯಜಮಾನನಿಂದ ರಕ್ಷಿಸಲ್ಪಡದೇ, ಮರಳುಕಾಡು ಮುಂತಾದವುಗಳಲ್ಲಿ ಬಿಡಲ್ಪಟ್ಟರೂ ಕೂಡ ಅಂದರೆ ಪರಮ ಕಷ್ಟಕಾಲದಲ್ಲಿದ್ದರೂ ಕೂಡ ಪರರ ಸ್ವತ್ತನ್ನು ಕಣ್ಣೆತ್ತಿ ನೋಡದೆ, ಪರದ್ರವ್ಯವನ್ನು ತೃಣವೆಂದು ಭಾವಿಸಿ ಸ್ವೀಕರಿ ಸುವುದಿಲ್ಲವೋ ಅದಕ್ಕೆ ಅಲೋಭವೆಂದು ನಾಮವು ಬಂದಿದೆ. ಅಂದರೆ ಯಾರೂ ರಕ್ಷಕರಿಲ್ಲದೆ ಬೀದಿಯಲ್ಲಿ ಬಿದ್ದಿರುವ ಹಣವನ್ನು ಯಾವನು ಕಣ್ಣೆತ್ತಿ ನೋಡದೇ ಇರುವನೋ ಅದಕ್ಕೆ ಅಲೋಭವೆಂದು ಹೆಸರು ಬಂದಿದೆ.

ಮೈಥುನಸ್ಯಾಸಮಾಚಾರೋ ಹ್ಯಚಿಂತನಮಕಲ್ಪನಂ ।
ನಿವೃತ್ತಿರ್ಬ್ರಹ್ಮಚರ್ಯಂ ತದಚ್ಛಿದ್ರಂ ದಮ ಉಚ್ಯತೇ ॥ ೪೬ ॥

ಆತ್ಮಾರ್ಥಂ ವಾ ಪರಾರ್ಥಂ ವಾ ಇಂದ್ರಿಯಾಣೀಹ ಯಸ್ಯ ವೈ ।
ನ ಮಿಥ್ಯಾ ಸಂಪ್ರವರ್ತಂತೇ ಶಮಸ್ಯೈತತ್ತು ಲಕ್ಷಣಂ ॥ ೪೭ ॥

ದಶಾತ್ಮಕೇ ಯೋ ವಿಷಯೇ ಕಾರಣೇ ಚಾಷ್ಟಲಕ್ಷಣೇ ।
ನ ಕ್ರುಧ್ಯೇತ್ತು ಪ್ರತಿಹತಃ ಸ ಜಿತಾತ್ಮಾ ವಿಭಾವ್ಯತೇ ॥ ೪೮ ॥

ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೋಪಗತಂ ಚ ಯತ್ ।
ತತ್ತದ್ಗುಣವತೇ ದೇಯಮಿತ್ಯೇತದ್ದಾನಲಕ್ಷಣಂ ॥ ೪೯ ॥

---

೪೬. ಯಾವನು ಸ್ತ್ರೀಸಂಗವನ್ನು ಯೋಚಿಸಿದೆಯೂ, ಯಾವಾಗಲಾದರೂ ಸ್ಮರಣೆಯನ್ನೂ ಮಾಡದೇ ಸುತರಾಂ ತ್ಯಾಗವನ್ನು ಮಾಡುವನೋ, ಅವನ ವೃತ್ತಿಗೆ ಬ್ರಹ್ಮಚರ್ಯವೆಂದು ಹೆಸರು. ಇಂತಹ ಬ್ರಹ್ಮಚರ್ಯೆಯು ಅವಿಚ್ಛಿನ್ನವಾಗಿ ನಿರಂತರವಾಗಿರುವುದೋ ಅದಕ್ಕೆ ದಮವೆಂದು ನಾಮವು ಬಂದಿದೆ.

೪೭. ಯಾವನ ಇಂದ್ರಿಯಗಳು ಸ್ವಾರ್ಥಕ್ಕಾಗಿಯಾಗಲಿ, ಪರಾರ್ಥಕ್ಕಾಗಿಯಾಗಲಿ ಸುಳ್ಳನ್ನು ಯಾವಕಾಲದಲ್ಲಿಯೂ ಹೇಳುವುದಿಲ್ಲವೋ, ಹಾಗೆ ಸರ್ವಕಾಲದಲ್ಲಿಯೂ ಸುಳ್ಳು ಹೇಳದೇ ಇರುವುದೇ ಶಮಗುಣದ ಲಕ್ಷಣವಾಗಿದೆ.

೪೮. ಯಾವನ ದಶೇಂದ್ರಿಯಗಳು ರೂಪ, ರಸ, ಗಂಧಾದಿ ದಶವಿಷಯಗಳಲ್ಲಿ ಅಧೀನವಾಗದೆ ಸದಾ ವಶವಾಗಿರುತ್ತವೆಯೋ, ಮತ್ತು ಯಾವನು ಅಷ್ಟವಿಧವಾದ ಕಾರಣಗಳಮೇಲೆಯೂ ಕೋಪಮಾಡುವುದಿಲ್ಲವೋ ಅವನೇ ಜಿತೇಂದ್ರಿಯನು.

೪೯. ಯಾವ ಪದಾರ್ಥಗಳು ನಮಗೆ ಅತ್ಯಂತ ಪ್ರಿಯವಾಗಿರುತ್ತವೆಯೋ, ಮತ್ತು ನ್ಯಾಯಮಾರ್ಗದಿಂದ ಸಂಪಾದಿತವಾಗಿವೆಯೋ ಅಂತಹ ಪದಾರ್ಥಗಳನ್ನು ಕುಟುಂಬಿಯಾಗಿಯೂ, ಗುಣವಂತನಾಗಿಯೂ ಇರುವ ಸತ್ಪಾತ್ರದಲ್ಲಿ ದಾನಮಾಡಬೇಕು. ಅದೇ ಉತ್ತಮವಾದ ದಾನವಾಗಿರುತ್ತದೆ. ಇದೇ ಮುಖ್ಯವಾದ ದಾನವು.

ದಾನಂ ತ್ರಿವಿಧಮಿತ್ಯೇತತ್ ಕನಿಷ್ಠಜ್ಯೇಷ್ಠಮಧ್ಯಮಂ ।
ತತ್ರ ನೈಶ್ರ್ಯೇಯಸಂ ಜ್ಯೇಷ್ಠಂ ಕನಿಷ್ಠಂ ಸ್ವಾರ್ಥಸಿದ್ಧಯೇ ॥
ಕಾರುಣ್ಯಾತ್ಸರ್ವಭೂತೇಭ್ಯಃ ಸುವಿಭಾಗಸ್ತು ಬಂಧುಷು ॥ ೫೦ ॥

ಶ್ರುತಿಸ್ಮೃತಿಭ್ಯಾಂ ವಿಹಿತೋ ಧರ್ಮೋ ವರ್ಣಾಶ್ರಮಾತ್ಮಕಃ ।
ಶಿಷ್ಟಾಚಾರಾವಿರುದ್ಧಶ್ಚ ಧರ್ಮಃ ಸತ್ಸಾಧುಸಂಗತಃ ॥ ೫೧ ॥

ಅಪ್ರದ್ವೇಷೋ ಹ್ಯನಿಷ್ಟೇಷು ತಥೇಷ್ಟಾನಭಿನಂದನಂ ।
ಪ್ರೀತಿತಾಪವಿಷಾದೇಭ್ಯೋ ವಿನಿವೃತ್ತಿರ್ವಿರಕ್ತತಾ ॥ ೫೨ ॥

ಸನ್ಯಾಸಃ ಕರ್ಮಣೋ ನ್ಯಾಸಃ ಕೃತನಾಮುಕೃತ್ಯೈಃ ಸಹ ।
ಕುಶಲಾಕುಶಲಾನಾಂ ಚ ಪ್ರಹಾಣಂ ತ್ಯಾಗ ಉಚ್ಯತೇ ॥ ೫೩ ॥

---

೫೦. ದಾನಗಳು ಉತ್ತಮ, ಮಧ್ಯಮ ಅಧಮಗಳೆಂದು ಮೂರು ವಿಧಗಳಾಗಿವೆ. ಯಾವ ದಾನವು ಪರಮ ಪದವಿಗೆ ಸಾಧಕವಾಗಿರುತ್ತದೆಯೋ ಅದು ಉತ್ತಮ ದಾನವು. ತನ್ನ ಪ್ರತಿಷ್ಠೆಗಾಗಿ ಲೋಕದಲ್ಲಿ ಕೀರ್ತಿಯನ್ನು ಪಡೆಯುವುದಕ್ಕಾಗಿ ಕೊಡುವ ದಾನವು ಮಧ್ಯಮವು. ಸ್ವಾರ್ಥಕ್ಕಾಗಿ ಮತ್ತು ಮಹತ್ಪ್ರಯೋಜನವನ್ನು ಹೊಂದುವುದಕ್ಕಾಗಿ ಕೊಡುವ ದಾನವು ಅಧಮವಾಗಿರುವುದು. ಬಂಧುಗಳಂತೆ ಸರ್ವಪ್ರಾಣಿಗಳಲ್ಲಿಯೂ ದಯೆಯನ್ನು ಮಾಡುವುದು ಉತ್ತಮವಾದ ವಿಷಯವು.

೫೧. ಶ್ರುತಿಸ್ಮೃತಿಗಳಿಂದ ಉಕ್ತವೂ, ವರ್ಣಾಶ್ರಮೋಚಿತವೂ, ಶಿಷ್ಟಾಚಾರಾವಿರುದ್ಧವೂ ಆದ ಧರ್ಮವೇ ಸಾಧುಗಳಿಗೆ ಸಮ್ಮತವಾದ ಧರ್ಮವಾಗಿರುತ್ತದೆ.

೫೨. ತಮಗೆ ಇಷ್ಟವಿಲ್ಲದ ವಿಷಯಗಳಲ್ಲಿ ದ್ವೇಷಮಾಡದೇ ಉದಾಸೀನನಾಗಿರುವುದು, ಅತಿಪ್ರಿಯವಸ್ತುಗಳಲ್ಲಿ ಅತ್ಯಂತ ಪ್ರೀತಿಯನ್ನು ತೋರಿಸದಿರುವುದು, ಅತಿಪ್ರೀತಿಕರವೂ, ದುಃಖಕರವೂ ಆದ ವಸ್ತುಗಳಿಂದ ನಿವರ್ತನ ಇವುಗಳಿಗೆ ವಿರಕ್ತಿಯೆಂದು ಹೆಸರು ಬಂದಿದೆ.

೫೩. ಸಮಸ್ತವಾದ ನಿಷಿದ್ಧಕರ್ಮತ್ಯಾಗವು ಕೃತಾಕೃತಗಳೂ, ಶಾಸ್ತ್ರವಿರುದ್ಧಗಳೂ ಆದ ವಿರುದ್ಧಕರ್ಮಗಳನ್ನು ಬಿಡುವುದೂ, ಕುಶಲಾಕುಶಲಗಳಾದ ವಿರುದ್ಧಕರ್ಮವರ್ಜನವೂ ಕೂಡ ತ್ಯಾಗವೆಂದು ಪರಿಗಣಿತವಾಗಿದೆ.

ಅವ್ಯಕ್ತಾದ್ಯೋಽವಿಶೇಷಾಂ ಚ ವಿಕಾರೋಽಸ್ಮಿನ್ನಚೇತನೇ ।
ಚೇತನಾಚೇತನಾನ್ಯತ್ವವಿಜ್ಞಾನಂ ಜ್ಞಾನಮುಚ್ಯತೇ ॥ ೫೪ ॥
ಪ್ರತ್ಯಂಗಾನಾಂ ತು ಧರ್ಮಸ್ಯ ಇತ್ಯೇತಲ್ಲಕ್ಷಣಂ ಸ್ಮೃತಂ ।

ಋಷಿಭಿರ್ಧರ್ಮತತ್ತ್ವಜ್ಞೈಃ ಪೂರ್ವೇ ಸ್ವಾಯಂಭುವೇಽಂತರೇ ॥ ೫೫ ॥
ಅತ್ರ ವೋ ವರ್ಣಯಿಷ್ಯಾಮಿ ವಿಧಿರ್ಮನ್ವಂತರಸ್ಯ ಯಃ ।

ಇತರೇತರವರ್ಣಸ್ಯ ಚಾತುರ್ವರ್ಣಸ್ಯ ಚೈವ ಹಿ ॥
ಪ್ರತಿಮನ್ವಂತರಂ ಚೈವ ಶ್ರುತಿರನ್ಯಾ ವಿಧೀಯತೇ ॥ ೫೬ ॥

ಋಚೋ ಯಜೂಂಷಿ ಸಾಮಾನಿ ಯಥಾವತ್ ಪ್ರತಿದೈವತಂ ।
ಆಭೂತಸಂಪ್ಲವಸ್ಯಾಪಿ ವರ್ಜ್ಯೈಕಂ ಶತರುದ್ರಿಯಂ ॥ ೫೭ ॥

---

೫೪. ಅವ್ಯಕ್ತತತ್ತ್ವಕ್ಕಿಂತಲೂ, ಗುಣತ್ರಯಕ್ಕಿಂತಲೂ ಭಿನ್ನವಾದ ಜಡವಸ್ತುವಿನಲ್ಲಿ ಯಾವ ಜ್ಞಾನವು ಉಂಟಾಗುವುದೋ ಅದಕ್ಕೂ ಶ್ರೀ ಭಗವಂತನ ಚೇತನಗಳಾದ ವೃಕ್ಷಾದಿಗಳಿಗಿಂತಲೂ ಭಿನ್ನನೂ ಎಂಬ ಯಾವ ಜ್ಞಾನವು ಉಂಟಾಗುವುದೋ ಅದಕ್ಕೂ ಜ್ಞಾನವೆಂಬ ಸಂಜ್ಞೆಯು ಪ್ರಾಪ್ತವಾಗಿರುತ್ತದೆ. ಜೀವಜಡಗಳಿಗಿಂತಲೂ ಭಗವಂತನು ಭಿನ್ನನೆಂಬ ತಿಳಿವಳಿಕೆಗೆ ಜ್ಞಾನವೆಂಬ ಸಂಜ್ಞೆಯುಂಟಾಗಿದೆ.

೫೫. ಪೂರ್ವದ ಸ್ವಾಯಂಭುವಮನ್ವಂತರದಲ್ಲಿದ್ದ ಧರ್ಮತತ್ತ್ವಜ್ಞರಾದ ಮಹಾತ್ಮರೂ, ಋಷಿಗಳೂ ಕೂಡ ವಿರುದ್ಧವಸ್ತುಗಳ ತ್ಯಾಗಪೂರ್ವಕವಾಗಿ ಸತ್ಕರ್ಮಾನುಷ್ಠಾನವೇ ಧರ್ಮವೆಂಬುದಾಗಿ ಧರ್ಮಲಕ್ಷಣವನ್ನು ಹೇಳಿರುತ್ತಾರೆ.

೫೬. ಈಗ ನಿಮಗೆ ಮನ್ವಂತರಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯಗಳ ಸಾಮಾನ್ಯಧರ್ಮಗಳನ್ನೂ, ಪ್ರತಿಯೊಂದು ವರ್ಣಗಳ ವಿಶೇಷಧರ್ಮಗಳನ್ನೂ ಪ್ರತ್ಯೇಕವಾಗಿ ವರ್ಣಿಸುವೆನು ಕೇಳಿರಿ. ಪ್ರತಿಮನ್ವಂತರಗಳಲ್ಲಿಯೂ ಬೇರೆಬೇರೆಯಾಗಿರುವುವು.

೫೭. ಋಗ್ವೇದ, ಯಜುರ್ವೇದ, ಸಾಮವೇದ ಇವುಗಳೂ ಆಯಾ ಭೂತಗಳ ಅಭಿಮಾನಿದೇವತೆಗಳೂ ಕೂಡ ಪ್ರಲಯಕಾಲದವರೆಗೂ ವಿಕಾರವಾಗದೆ ಒಂದೇ ಸಮನಾಗಿರುತ್ತಾರೆ. ಶತರುದ್ರಿಯವೊಂದು ಮಾತ್ರ ಏಕರೂಪವಾಗಿರದೇ ವಿಕಾರ ಹೊಂದುತ್ತದೆ.

ವಿಧಿಹೋರ್ತ್ರಂ ತಥಾ ಸ್ತೋತ್ರಂ ಪೂರ್ವವತ್ಸಂಪ್ರವರ್ತತೇ ।
ದ್ರವ್ಯಸ್ತೋತ್ರಂ ಗುಣಸ್ತೋತ್ರಂ ಕರ್ಮಸ್ತೋತ್ರಂ ತಥೈವ ಚ ॥
ಚತುರ್ಥಮಾಭಿಜನಿಕಂ ಸ್ತೋತ್ರಮೇತಶ್ಚತುರ್ವಿಧಂ ॥ ೫೮ ॥

ಮನ್ವಂತರೇಷು ಸರ್ವೇಷು ಯಥಾ ದೇವಾ ಭವಂತಿ ಯೇ ।
ಪ್ರವರ್ತಯತಿ ತೇಷಾಂ ವೈ ಬ್ರಹ್ಮಸ್ತೋತ್ರಂ ಚತುರ್ವಿಧಂ ॥
ಏವಂ ಮಂತ್ರಗುಣಾನಾಂ ಚ ಸಮುತ್ಪತ್ತಿಶ್ಚತುರ್ವಿಧಾ ॥ ೫೯ ॥

ಅಥರ್ವಯಜುಷಾಂ ಸಾಮ್ನಾಂ ವೇದೇಷ್ವಿಹ ಪೃಥಕ್ ಪೃಥಕ್ ।
ಋಷೀಣಾಂ ತಪ್ಯತಾಮುಗ್ರಂ ತಪಃ ಪರಮದುಶ್ಚರಂ ॥ ೬೦ ॥

ಮಂತ್ರಾಃ ಪ್ರಾದುರ್ಬಭೂವುರ್ಹಿ ಪೂರ್ವಮನ್ವಂತರೇಷ್ವಿಹ ।
ಪರಿತೋಷಾದ್ಭಯಾದುಃಖಾತ್ಸುಖಾಚ್ಛೋಕಾಂ ಚ ಪಂಚಧಾ ॥ ೬೧ ॥

---

೫೮. ಆಯಾ ಕಾರ್ಯವಿಧಾನ, ಹೋಮಗಳು, ಸ್ತೋತ್ರ ಇವು ಮೂರೂ ವಿಕಾರವಾಗದೇ ಪೂರ್ವದ ಹಾಗೆಯೇ ಇರುತ್ತವೆ. ದ್ರವ್ಯಸ್ತೋತ್ರ, ಗುಣಸ್ತೋತ್ರ, ಕರ್ಮಸ್ತೋತ್ರ, ಆಭಿಜನಕಸ್ತೋತ್ರವೆಂಬುದಾಗಿ ಸ್ತೋತ್ರಗಳು ನಾಲ್ಕುವಿಧಗಳಾಗಿರುತ್ತವೆ. ಈ ಸ್ತೋತ್ರಗಳು ಬದಲಾಯಿಸುತ್ತವೆ.

೫೯. ಸಮಸ್ತವಾದ ಮನ್ವಂತರಗಳಲ್ಲಿ ದೇವತೆಗಳು ಹೇಗೆ ಬೇರೆಬೇರೆಯಾಗಿರುತ್ತಾರೋ ಅದೇ ರೀತಿಯಲ್ಲಿಯೇ ಬ್ರಹ್ಮಸ್ತೋತ್ರವೂ ಸಹ ನಾಲ್ಕುಪ್ರಕಾರವಾಗಿರುತ್ತದೆ. ಹೀಗೆಯೇ ಮಂತ್ರಸ್ತೋತ್ರ, ಗುಣಸ್ತೋತ್ರಗಳು ಪ್ರತ್ಯೇಕವಾಗಿ ನಾಲ್ಕು ನಾಲ್ಕು ಭಾಗಗಳಾಗಿರುತ್ತವೆ.

೬೦. ಭಯಂಕರವಾಗಿ ತಪಸ್ಸುಮಾಡುವ ಮಹಾತ್ಮರಾದ ಮಹರ್ಷಿಗಳ ತಪಸ್ಸುಗಳು, ಅಥರ್ವವೇದ, ಯಜುರ್ವೇದ, ಸಾಮವೇದ ಇವುಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ವರ್ಣಿತವಾಗಿವೆ.

೬೧. ಮಂತ್ರಗಳು ಪೂರ್ವಮನ್ವಂತರಗಳಲ್ಲಿಯೂ ಈ ವರ್ತಮಾನಮನ್ವಂತರದಲ್ಲಿಯೂ ಕೂಡ ಸಂತೋಷ, ಭಯ, ದುಃಖ, ಸುಖ ಮತ್ತು ಶೋಕವೆಂಬ ಈ ಐದು ಕಾರಣಗಳಿಂದ ಐದು ವಿಧಗಳಾಗಿವೆ.

**ಋಷೀಣಾಂತಪಃ ಕಾರ್ತ್ಸ್ನ್ಯೇನ ದರ್ಶನೇನ ಯದೃಚ್ಛಯಾ |**
**ಋಷೀಣಾಂ ಯದೃಷಿತ್ವಂ ಹಿ ತದ್ವಕ್ಷ್ಯಾಮಿಹ ಲಕ್ಷಣೈಃ || ೬೨ ||**

**ಅತೀತಾನಾಗತಾನಾಂ ತು ಪಂಚಧಾ ಋಷಿರುಚ್ಯತೇ |**
**ಅತಸ್ತ್ವೃಷೀಣಾಂ ವಕ್ಷ್ಯಾಮಿ ಹ್ಯಾರ್ಷಸ್ಯ ಚ ಸಮುದ್ಭವಂ || ೬೩ ||**

**ಗುಣಸಾಮ್ಯೇ ವರ್ತಮಾನೇ ಸರ್ವಸಂಪ್ರಲಯೇ ತದಾ |**
**ಅತಿಚಾರೇ ತು ದೇವಾನಾಮತಿದೇಶೇ ತಯೋರ್ಯಥಾ || ೬೪ ||**

**ಅಬುದ್ಧಿಪೂರ್ವಕಂ ತದ್ವೈ ಚೇತನಾರ್ಥಂ ಪ್ರವರ್ತತೇ |**
**ತೇನ ಹ್ಯಾಬುದ್ಧಿಪೂರ್ವಂ ತಚ್ಚೇತನೇನ ಹ್ಯಧಿಷ್ಠಿತಂ || ೬೫ ||**

---

೬೨. ಮಹರ್ಷಿಗಳಲ್ಲಿರುವ ತಪಸ್ಸು ಮತ್ತು ಋಷಿತ್ವ ಎಂದರೆ ಜ್ಞಾನ ಇವುಗಳ ಸ್ವರೂಪವನ್ನು ಸಂಪೂರ್ಣವಾಗಿಯೂ, ಶಾಸ್ತ್ರಗಳಿಂದಲೂ, ಪ್ರತ್ಯಕ್ಷಾದಿಗಳಿಂದಲೂ ತಿಳಿದು, ಲಕ್ಷಣಗಳೊಡನೆ ತಿಳಿಸುವೆನು ಕೇಳಿರೆಂದನು.

೬೩. ಅತೀತಾನಾಗತರಾದ ಮಹರ್ಷಿಗಳು ಐದುವಿಧರಾಗಿರುವರು. ಆದುದರಿಂದ ಆ ಮಹರ್ಷಿಗಳ ಸ್ವರೂಪವನ್ನೂ, ಅವರ ಆರ್ಷತ್ವವನ್ನೂ ವಿವರಿಸುವೆನು ಕೇಳಿರೆಂದನು.

೬೪. ಸರ್ವಪ್ರಲಯವಾಗುವ ಮಹಾಪ್ರಲಯಕಾಲದಲ್ಲಿ ಗುಣಸಾಮ್ಯವಾಗುವುದು. ಆಗ ದೇವತೆಗಳೂ ಸಹ ತಮ್ಮ ನಡೆನುಡಿಗಳನ್ನು ಬದಲಾಯಿಸಿಕೊಳ್ಳುವರು. ಹೀಗೆ ಮನುಷ್ಯರು ದೇವತೆಗಳೆಂಬ ಉಭಯರಿಗೂ ದೇಶಾಚಾರಗಳು ವ್ಯತ್ಯಾಸವಾಗಿರುವುವು.

೬೫. ಆಗ ಯಾರ ಇಚ್ಛೆಯಿಲ್ಲದಿದ್ದರೂ ಆಕಸ್ಮಿಕವಾಗಿ ಅಚೇತನಗಳೆಲ್ಲವೂ ಚೇತನಗಳ ಹಿತಕ್ಕಾಗಿ ಪ್ರಯತ್ನವನ್ನು ಮಾಡುವವು. ಆಗ ಚೇತನಗಳು ಅನಿಚ್ಛೆಯಿಂದ ಅಚೇತನಗಳನ್ನು ಆಶ್ರಯಿಸಿ, ತನ್ಮೂಲಕ ಸ್ವಕಾರ್ಯಗಳನ್ನು ಸಾಧಿಸಿಕೊಳ್ಳುವುವು ಅಂದರೆ ಚೇತನಗಳ ಸುಖಕ್ಕಾಗಿಯೇ ಅಚೇತನಗಳು ಸೃಷ್ಟವಾಗಿವೆ.

**ವರ್ತತೇ ಚ ಯಥಾ ತೌತು ಯಥಾ ಮತ್ಸ್ಯೋದಕೇ ಉಭೇ |**
**ಚೇತನಾಧಿಷ್ಠಿತಂ ತತ್ತ್ವಂ ಪ್ರವರ್ತತಿ ಗುಣಾತ್ಮನಾ || ೬೬ ||**

**ಕರಣತ್ವಾತ್ತಥಾ ಕಾರ್ಯಂ ತದಾ ತಸ್ಯ ಪ್ರವರ್ತತೇ |**
**ವಿಷಯೋ ವಿಷಯತ್ವಾಚ್ಚ ಹ್ಯರ್ಥೋಽರ್ಥಿತ್ವಾತ್ತಥೈವ ಚ || ೬೭ ||**

**ಕಾಲೇನ ಪ್ರಾಪಣೀಯೇನ ಭೇದಾಸ್ತು ಕಾರಣಾತ್ಮಕಾಃ |**
**ಸಂಸಿಧ್ಯಂತಿ ತದಾ ವ್ಯಕ್ತಾಃ ಕ್ರಮೇಣ ಮಹದಾದಯಃ || ೬೮ ||**

**ಮಹತಶ್ಚಾಪ್ಯಹಂಕಾರಸ್ತಸ್ಮಾದ್ಭೂತೇಂದ್ರಿಯಾಣಿ ಚ |**
**ಭೂತಭೇದಾಸ್ತು ಭೇದೇಭ್ಯೋ ಜಜ್ಞಿರೇ ತೇ ಪರಸ್ಪರಂ ||**
**ಸಂಸಿದ್ಧಿಕಾರಣಂ ಕಾರ್ಯಂ ಸದ್ಯ ಏವ ವಿವರ್ತತೇ || ೬೯ ||**

---

೬೬. ಹೇಗೆ ಚೇತನವಾದ ಮೀನು ಅಚೇತನವಾದ ಜಲವನ್ನು ಆಶ್ರಯಿಸಿ ಕೊಂಡು ಮತ್ಸ್ಯೋದಕಗಳೆರಡೂ ಇರುತ್ತವೆಯೋ, ಹಾಗೆಯೇ ಅಚೇತನವಾದ ವಸ್ತುವು ಚೇತನವನ್ನು ಆಶ್ರಯಿಸಿ, ಗುಣರೂಪವಾಗಿ ಪರಿಣಮಿಸಿ ಕಾರ್ಯಕಾರಿ ಯಾಗುತ್ತದೆ. ಹೇಗೆಂದರೆ, ಅಂಧಪಂಗು ನ್ಯಾಯದಂತೆ ಚೇತನಾಚೇತನಗಳಿಂದ ಕಾರ್ಯವು ಉಂಟಾಗುವುದು.

೬೭. ಕಾರಣದಿಂದ ಕಾರ್ಯವು ಉಂಟಾಗುವುದು ಸಹಜವಾಗಿದೆ. ಇದ ರಂತೆಯೇ ವಿಷಯ ವಿಷಯಿಭಾವವೂ, ಅರ್ಥಾರ್ಥಿಭಾವವೂ ಸಿದ್ಧವಾಗುವುವು.

೬೮. ಕಾಲವಶದಿಂದ ಕಾರ್ಯಕಾರಣಗಳಿಗೆ ಭೇದವು ಸಂಭವಿಸುವುದು. ಆದುದರಿಂದ ಅವ್ಯಕ್ತವಾದ ಪ್ರಕೃತಿಯಿಂದ ಕ್ರಮವಾಗಿ ಮಹತ್ತತ್ತ್ವಾದಿಗಳು ವ್ಯಕ್ತಗಳಾಗುವುವು. ಗುಣತ್ರಯಾತ್ಮಕವೂ ಅವ್ಯಕ್ತತತ್ತ್ವರೂಪವೂ ಆದ ಪ್ರಕೃತಿಯಿಂದ ಮಹತ್ತತ್ತ್ವಾದಿಗಳು ಉತ್ಪನ್ನಗಳಾಗುವುವು.

೬೯. ಆ ಮಹತ್ತತ್ತ್ವದಿಂದ ಅಹಂಕಾರತತ್ತ್ವವೂ, ವೈಕಾರಿಕ, ತೇಜಸ, ತಾಮಸ ರೂಪವಾದ ಆ ಅಹಂಕಾರ ತತ್ತ್ವದಿಂದ ಪಂಚತನ್ಮಾತ್ರೆಗಳೂ, ಪಂಚಭೂತಗಳೂ, ದಶೇಂದ್ರಿಯಗಳೂ ಉತ್ಪನ್ನವಾದುವು. ಆ ಪಂಚಭೂತಗಳಿಂದ ಭೌತಿಕಗಳಾದ ಚರಾಚರರೂಪ ಪ್ರಾಣಿಗಳೂ ಉತ್ಪನ್ನವಾಗುವುವು.

ಯಥೋಲ್ಮುಕಸ್ಫುಟನ್ನೂರ್ಧ್ವಮೇಕಕಾಲಂ ಪ್ರವರ್ತತೇ ।
ತಥಾ ವಿವೃತ್ತಃ ಕ್ಷೇತ್ರಜ್ಞಃ ಕಾಲೇನೈಕೇನ ಕರ್ಮಣಾ ॥ ೭೦ ॥

ಯಥಾಂಧಕಾರೇ ಖದ್ಯೋತಃ ಸಹಸಾಸಂಪ್ರದೃಶ್ಯತೇ ।
ತಥಾ ವಿವೃತ್ತೋ ಹವ್ಯಕ್ತಾತ್ ಖದ್ಯೋತ ಇವ ಚೋಲ್ಬಣಂ ॥ ೭೧ ॥

ಸ ಮಹಾನ್ ಸಶರೀರಸ್ತು ಯತ್ರೈವಾಗ್ರೇ ವ್ಯವಸ್ಥಿತಃ ।
ತತ್ರೈವ ಸಂಸ್ಥಿತೋ ವಿದ್ವಾನ್ ದ್ವಾರಶಾಲಮುಖೇ ಸ್ಥಿತಃ ॥ ೭೨ ॥

ಮಹಾಂಸ್ತು ತಮಸಃ ಪಾರೇ ವೈಲಕ್ಷಣ್ಯಾದ್ವಿಭಾವ್ಯತೇ ।
ತತ್ರೈವ ಸಂಸ್ಥಿತೋ ವಿದ್ವಾಂಸ್ತಮಸೋಂತ ಇತಿ ಶ್ರುತಿಃ ॥ ೭೩ ॥

---

೭೦. ಕೊಳ್ಳಿಯ ಕಿಡಿಗಳು ಅಂದರೆ ಅಗ್ನಿಕಣಗಳು ಕಾಲಾನುಗುಣವಾಗಿ ಹೇಗೆ ಮೇಲಕ್ಕೆ ಹಾರಿಹೋಗುತ್ತವೆಯೋ, ಹಾಗೆಯೇ ಕ್ಷೇತ್ರಜ್ಞನಾದ ಪುರುಷನು ಕಾಲಕರ್ಮವಶದಿಂದ ಸೃಷ್ಟಿರೂಪ ಕಾರ್ಯವನ್ನು ಮಾಡುವನು.

೭೧. ಅಂಧಕಾರದಲ್ಲಿ ಮಿಂಚಿನ ಹುಳುಗಳು ಹೇಗೆ ಸ್ಪಷ್ಟವಾಗಿ ಕಾಣಿಸುತ್ತವೆಯೋ, ಅದರಂತೆಯೇ ಅವ್ಯಕ್ತತತ್ವವೂ ಗುಣತ್ರಯಾತ್ಮಕವೂ ಆದ ಪ್ರಕೃತಿಯಿಂದ ವ್ಯಕ್ತವಾದ ಮಹತ್ತತ್ವಾದಿಗಳು ಉದ್ಭವಿಸುವುವು. ಅತ್ಯುಲ್ಬಣವಾದ ಮಿಂಚಿನ ಹುಳದಂತೆ ಸ್ಪಷ್ಟವಾಗಿ ಭಾಸಮಾನವಾಗುವುದು.

೭೨. ಶರೀರಸಹಿತವಾದ ಆ ಮಹತ್ತತ್ವವು ಯಾವಸ್ಥಳದಲ್ಲಿ ವ್ಯವಸ್ಥಿತವಾಗಿರುವುದೋ, ಅದೇ ಪ್ರದೇಶದಲ್ಲಿಯೇ ಜ್ಞಾನಿಯಾದ ಪುರುಷನು ಅರಮನೆಯ ದ್ವಾರದಲ್ಲಿ ದ್ವಾರಪಾಲಕನಂತೆ ಸದಾ ಸಿದ್ಧನಾಗಿರುವನು.

೭೩. ಮಹತ್ತತ್ವವಾದರೋ ಅಂಧಕಾರದ ಕೊನೆಯಲ್ಲಿ ವಿಲಕ್ಷಣವಾಗಿಯೂ ಸ್ಪಷ್ಟವಾಗಿಯೂ ಕಾಣುವುದು. ಅದೇ ಅಂಧಕಾರದ ಕೊನೆಯಲ್ಲಿಯೇ ಜ್ಞಾನಿಯಾದ ಪುರುಷನೂ ಕೂಡ ಸದಾ ಸನ್ನಿಹಿತನಾಗಿರುವನು.

ಬುದ್ಧಿರ್ವಿವರ್ತಮಾನಸ್ಯ ಪ್ರಾದುರ್ಭೂತಾ ಚತುರ್ವಿಧಾ ।
ಜ್ಞಾನಂ ವೈರಾಗ್ಯಮೈಶ್ವರ್ಯಂ ಧರ್ಮಶ್ಚೇತಿ ಚತುಷ್ಟಯಂ ॥ ೭೪ ॥

ಸಾಸಿದ್ಧಿಕಾನ್ಯಥೈತಾನಿ ಸುಪ್ರತೀಕಾನಿ ತಸ್ಯ ವೈ ।
ಮಹತಃ ಸಶರೀರಸ್ಯ ವೈವರ್ತ್ಯಾತ್ ಸಿದ್ಧಿರುಚ್ಯತೇ ॥ ೭೫ ॥

ಅತ್ರ ಶೇತೇ ಚ ಯತ್ಪೂರ್ಯಾಂ ಕ್ಷೇತ್ರಜ್ಞಾನಮಥಾಪಿ ವಾ ।
ಪುರೀಶಯತ್ವಾತ್ಪುರುಷಃ ಕ್ಷೇತ್ರಜ್ಞಾನಾತ್ ಸಮುಚ್ಯತೇ ॥ ೭೬ ॥

ಕ್ಷೇತ್ರಜ್ಞಃ ಕ್ಷೇತ್ರವಿಜ್ಞಾನಾತ್ ಭಗವಾನ್ ಮತಿರುಚ್ಯತೇ ।
ಯಸ್ಮಾದ್ಬುಧ್ಯಾ ತು ಶೇತೇ ಹ ತಸ್ಮಾದ್ಬೋಧಾತ್ಮಕಃ ಸ ವೈ ॥
ಸಂಸಿದ್ಧಯೋ ಪರಿಗತಂ ವ್ಯಕ್ತಾವ್ಯಕ್ತಮಚೇತನಂ ॥ ೭೭ ॥

---

೭೪ ಬುದ್ಧಿಯು ಪರಿಣಾಮವನ್ನು ಹೊಂದಿ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮವೆಂಬುದಾಗಿ ನಾಲ್ಕು ವಿಧವಾಗಿ ವಿಕಾರಿಯಾಗುವುದು.

೭೫. ಸಹಜಸಿದ್ಧವಾದ ಪಂಚಭೂತಾದಿಸರ್ವವೂ ಆ ಮಹಾಪುರುಷನ ಪ್ರತಿರೂಪಕಗಳಾಗಿವೆ. ಆ ಮಹಾಪುರುಷನ ಮಹಿಮೆಯಿಂದಲೇ ಶರೀರರೂಪವಾದ ಮಹತ್ತತ್ವಾದಿ ಮಹಾಕಾರ್ಯಸಿದ್ಧಿಯುಂಟಾಗಿದೆ.

೭೬. ಆ ಮಹಾಪುರುಷನಿಗೆ ಮಹತ್ತತ್ವಾದಿಸರ್ವವೂ ಅಧಿಷ್ಠಾನವು. ಅಂದರೆ ಆಶ್ರಯವು ಆಗಿರುತ್ತವೆ. ಆದುದರಿಂದ ಅವುಗಳಿಗೆ ಶರೀರವೆಂಬ ಸಂಜ್ಞೆಯೂ ಕ್ಷೇತ್ರವೆಂಬನಾಮವೂ ಪ್ರಾಪ್ತವಾಗಿವೆ. ಆ ಕ್ಷೇತ್ರರೂಪವಾದ ಶರೀರವೆಂಬಪುರದಲ್ಲಿ ಇರುವುದರಿಂದ ಪರಮಪುರುಷನಿಗೆ ಕ್ಷೇತ್ರಜ್ಞನೆಂಬ ನಾಮವು ಲೋಕಪ್ರಸಿದ್ಧವಾಗಿದೆ. ಇಂತಹ ಕ್ಷೇತ್ರ, ಕ್ಷೇತ್ರಜ್ಞನಾದ ಭಗವಂತ ಇವರ ಸಂಪೂರ್ಣವಾದ ಜ್ಞಾನದಿಂದ ಪುರುಷನು ಈ ಸಂಸಾರದಿಂದ ಮುಕ್ತನಾಗಿ ಪರಮಪದವಿಯನ್ನು ಹೊಂದುವನು.

೭೭. ಕ್ಷೇತ್ರವಾದ ಮಹದಾದಿಗಳಿಗೆ ನಿಯಾಮಕನೂ, ಕ್ಷೇತ್ರಜ್ಞನೂ ಆದ ಭಗವಂತನು ಜ್ಞಾನಿಯಾಗಿರುವನೆಂದು ಶಾಸ್ತ್ರಜ್ಞರು ಹೇಳುವರು. ಆ ಭಗವಂತನು ಕ್ಷೇತ್ರದಲ್ಲಿ ವಿವೇಕತೆಯಿಂದ ಇದ್ದರೂ ಕ್ಷೇತ್ರಕೃತ, ಸುಕೃತ, ದುಷ್ಕೃತಗಳಿಗೆ ಭಾಗಿಯಾಗದೇ ಜಾಗರೂಕನಾಗಿರುವುದರಿಂದ ಜ್ಞಾನಿಯಾಗಿರುವನು. ಮತ್ತು ಭಗವಂತನು ಅವತಾರಾದಿಗಳಿಂದ ವ್ಯಕ್ತನೂ, ಮೂಲರೂಪದಿಂದ ಅವ್ಯಕ್ತನೂ, ನಿಯಾಮಕನಾಗಿರುವುದರಿಂದ ಅಚೇತನನೂ, ನಿತ್ಯವಾದ ವಸ್ತುಗಳಿಂದ ಪರಿವೃತನೂ ಆಗಿರುವನು.

ಏವಂ ನಿವೃತ್ತಿಃ ಕ್ಷೇತ್ರಜ್ಞಾ ಕ್ಷೇತ್ರಜ್ಞೇನಾಭಿಸಂಹಿತಾ ।
ಕ್ಷೇತ್ರಜ್ಞೇನ ಪರಿಜ್ಞಾತೋ ಭೋಗ್ಯೋಽಯಂ ವಿಷಯಸ್ತ್ವಿತಿ ॥ ೭೮ ॥

ಋಷೀತ್ಯೇಷ ಗತೌ ಧಾತುಃ ಶ್ರುತೌ ಸತ್ಯೇ ತಪಸ್ಯಥ ।
ಏತತ್ಸನ್ನಿಯತೇ ತಸ್ಮಿನ್ ಬ್ರಹ್ಮಣಾ ಸ ಋಷಿಃ ಸ್ಮೃತಃ ॥ ೭೯ ॥

ನಿವೃತ್ತಿಸಮಕಾಲಂ ತು ಬುದ್ಧ್ಯಾಽವ್ಯಕ್ತಮೃಷಿಃ ಸ್ವಯಂ ।
ಪರಂ ಹಿ ಋಷತೇ ಯಸ್ಮಾತ್ಪರಮರ್ಷಿಸ್ತತಃ ಸ್ಮೃತಃ ॥ ೮೦ ॥

ಗತ್ಯರ್ಥಾದೃಷತೇರ್ಧಾತೋರ್ನಾಮನಿರ್ವೃತ್ತಿರಾದಿತಃ ।
ಯಸ್ಮಾದೇಷ ಸ್ವಯಂಭೂತಸ್ತಸ್ಮಾಚ್ಚಾತ್ಮರ್ಷಿತಾ ಸ್ಮೃತಾ ॥
ಈಶ್ವರಾಃ ಸ್ವಯಮುದ್ಭೂತಾ ಮಾನಸಾ ಬ್ರಹ್ಮಣಃ ಸುತಾಃ ॥ ೮೧ ॥

---

೭೮. ಕ್ಷೇತ್ರಜ್ಞನಾದ ಭಗವಂತನೇ ಸೃಷ್ಟವಾದ ಸಮಸ್ತ ವಸ್ತುಗಳನ್ನೂ ನಿವೃತ್ತಿಮಾಡುವನು. ಮತ್ತು ಸಂಹಾರಮಾಡುವನು. ಕ್ಷೇತ್ರಜ್ಞನಾದ ಪುರುಷನೇ ಈ ಸಮಸ್ತ ವಿಷಯಗಳನ್ನೂ ಭೋಗಿಸುವವನು. ಸಮಸ್ತ ವಿಷಯಗಳೂ ಭೋಗ್ಯಗಳಾಗಿವೆ.

೭೯. ಋಷಿ ಎಂಬ ಧಾತುವು ಗತ್ಯರ್ಥಕವಾಗಿದ್ದರೂ ಜ್ಞಾನಾರ್ಥಕವಾಗಿದೆ. ಋಷಿಯೆಂಬ ಧಾತುವು ಶಾಸ್ತ್ರಜ್ಞಾನ, ಸತ್ಯ, ತಪಸ್ಸು ಎಂಬ ಈ ಅರ್ಥಗಳನ್ನು ಕೊಡುತ್ತದೆ. ಹೀಗೆ ಜ್ಞಾನ, ಸತ್ಯ, ತಪಸ್ಸು ಇವು ಯಾರಲ್ಲಿವೆಯೋ ಅವರನ್ನು ಬ್ರಹ್ಮದೇವನು ಋಷಿಯೆಂದು ಕರೆಯುವನು. ಅವರೇ ಋಷಿಗಳಾಗಿರುವರು.

೭೯. ಇಂತಹ ಋಷಿಗಳು ತಮ್ಮ ಸ್ವಂತವಾದ ಬುದ್ಧಿಶಕ್ತಿಯಿಂದ ನಿವೃತ್ತಿ ಸಮಕಾಲದಲ್ಲಿಯೇ ಅವ್ಯಕ್ತನಾದ ಪರಮಪುರುಷನನ್ನು ತಿಳಿಯುವರು. ಹೀಗೆ ಈ ಋಷಿಗಳು ಪರಮಪುರುಷನನ್ನು ತಮ್ಮ ಜ್ಞಾನದೃಷ್ಟಿಯಿಂದ ತಿಳಿಯುವ ಕಾರಣ ದಿಂದ ಪರಮಮಹರ್ಷಿಗಳೆಂದು ಲೋಕಗಳಲ್ಲಿ ವಿಖ್ಯಾತರಾದರು. ಪರಮಪುರುಷನನ್ನು ಸಂಪೂರ್ಣವಾದ ಜ್ಞಾನದಿಂದ ನೋಡುವರೇ ಪರಮಮಹರ್ಷಿಗಳಾಗಿರುವರು.

೮೧. ಹೀಗೆ ಅನಾದಿಕಾಲದಿಂದಲೂ ಋಷಿಶಬ್ದವು ಗತ್ಯರ್ಥಕವಾದ ಋಷ್ ಧಾತುವಿನಿಂದ ಜನ್ಯವಾಗಿದೆಯೆಂದು ಜ್ಞಾನಿಗಳು ಹೇಳುವರು. ಇಂತಹ ಋಷಿಶಬ್ದ ವಾಚ್ಯರಾದ ಜ್ಞಾನಿಗಳು ತಾವೇ ಪರಾಧೀನರಾಗದೇ ಉದ್ಭೂತರಾದಕಾರಣ ಆತ್ಮರ್ಷಿ ಗಳೆಂದು ವಿಖ್ಯಾತರಾಗಿರುವರು. ಹೀಗೆ ಸ್ವತಂತ್ರರೂ ಸ್ವೇಚ್ಛಾಸಂಭೂತರೂ ಆದ ಈ ಪರಮ ಮಹರ್ಷಿಗಳು ಬ್ರಹ್ಮದೇವನ ಮಾನಸಪುತ್ರರಾಗಿರುವರು.

ಯಸ್ಮಾನ್ನ ಹನ್ಯತೇ ಮಾನ್ಯೈರ್ಮಹಾನ್ ಪರಿಗತಃ ಪುರಃ ।
ಯಸ್ಮಾದೃಷಂತಿ ಯೇ ಧೀರಾ ಮಹಾಂತಂ ಸರ್ವತೋ ಗುಣೈಃ ॥
ಯಸ್ಮಾನ್ಮಹರ್ಷಯಃ ಪ್ರೋಕ್ತಾ ಬುದ್ಧೇಃ ಪರಮದರ್ಶಿನಃ ॥ ೮೨ ॥

ಈಶ್ವರಾಣಾಂ ಶುಭಾಸ್ತೇಷಾಂ ಮಾನಸಾಂತರಸಾಶ್ಚ ತೇ ।
ಅಹಂಕಾರಂ ತಮಶ್ಚೈವ ತ್ಯಕ್ತ್ವಾ ಚ ಋಷಿತಾಂಗತಾಃ ॥ ೮೩ ॥

ತಸ್ಮಾತ್ತು ಋಷಯಸ್ತೇ ವೈ ಭೂತಾದೌ ತತ್ವದರ್ಶನಾಃ ।
ಋಷಿಪುತ್ರಾ ಋಷೀಕಾಸ್ತು ಮೈಥುನಾದ್ಗರ್ಭಸಂಭವಾಃ ॥ ೮೪ ॥

ತನ್ಮಾತ್ರಾಣಿ ಚ ಸತ್ಯಂ ಚ ಋಷಂತೇ ತೇ ಮಹೌಜಸಃ ।
ಸತ್ಯರ್ಷಯಸ್ತತಸ್ತೇ ವೈ ಪರಮಾಃ ಸತ್ಯದರ್ಶನಾಃ ॥ ೮೫ ॥

---

೮೨. ಯಾರು ದಿವ್ಯಜ್ಞಾನದಿಂದ ಪೂರ್ಣರಾಗಿ ಮರ್ಯಾದಾತೀತರಾಗುವುದಿಲ್ಲವೋ, ಮತ್ತು ಯಾರು ಸಮಸ್ತ ಗುಣಪೂರ್ಣನೂ ಮಹಾತ್ಮನೂ ಆದ ಭಗವಂತನನ್ನು ತಿಳಿಯುತ್ತಾರೋ ಅವರು ತಮ್ಮ ಪರಮವೂ ದಿವ್ಯವೂ ಮಹತ್ತೂ ಆದ ಜ್ಞಾನದಿಂದ ದಿವ್ಯಮಹರ್ಷಿಗಳಾಗಿರುವರು.

೮೩. ಸ್ವತಂತ್ರರೂ, ಮಂಗಳಾಂಗರೂ, ಬ್ರಹ್ಮದೇವನ ಮಾನಸಪುತ್ರರೂ ಆದ ಮಹಾತ್ಮರು ಅಹಂಭಾವವನ್ನೂ ಅಜ್ಞಾನವನ್ನೂ ಬಿಟ್ಟು ಮಹರ್ಷಿಗಳಾಗಿರುವರು.

೮೪. ಇಂತಹ ಮಹರ್ಷಿಗಳು ಭೂತಾದಿಗಳ ತತ್ವಜ್ಞಾನಿಗಳಾದಕಾರಣ ಮಹಾತ್ಮರಾಗಿರುವರು. ಇಂತಹ ಮಹರ್ಷಿಗಳ ಪುತ್ರರು ಋಷೀಕನಾಮಕರೂ, ಸ್ತ್ರೀ ಪುರುಷ ಸಂಬಂಧಜನ್ಯರೂ, ಗರ್ಭಸಂಭೂತರೂ ಆಗಿರುವರು.

೮೫. ಮಹಾ ತೇಜಸ್ವಿಗಳಾದ ಮಹರ್ಷಿಗಳು ಪಂಚತನ್ಮಾತ್ರೆಗಳನ್ನೂ, ಸತ್ಯವನ್ನೂ ತಿಳಿಯುವವರಾಗಿರುವರು. ಅವರು ಉತ್ತಮರೂ ಸತ್ಯದರ್ಶಿಗಳೂ ಆಗಿರುವಕಾರಣ ಸತ್ಯರ್ಷಿಗಳೆಂದೂ ಲೋಕಸಮ್ಮತರಾಗಿರುವರು.

ಋಷೀಣಾಂ ಚ ಸುತಾಸ್ತೇ ತು ವಿಜ್ಞೇಯಾ ಋಷಿಪುತ್ರಕಾಃ ।
ಋಷಂತಿ ವೈ ಶ್ರುತಂ ಯಸ್ಮಾದ್ವಿಶೇಷಾಂಶ್ಚೈವ ತತ್ತ್ವತಃ ॥
ತಸ್ಮಾತ್ ಶ್ರುತರ್ಷಯಸ್ತೇಽಪಿ ಶ್ರುತಸ್ಯ ಪರಿದರ್ಶನಾಃ ॥ ೮೬ ॥

ಅವ್ಯಕ್ತಾತ್ಮಾ ಮಹಾತ್ಮಾ ಚಾಹಂಕಾರಾತ್ಮಾ ತಥೈವ ಚ ।
ಭೂತಾತ್ಮಾ ಚೇಂದ್ರಿಯಾತ್ಮಾ ಚ ತೇಷಾಂ ತಜ್ಞಾನಮುಚ್ಯತೇ ॥
ಇತ್ಯೇತಾ ಋಷಿಜಾತೀಸ್ತು ನಾಮಭಿಃ ಪಂಚ ವೈ ಶೃಣು ॥ ೮೭ ॥

ಭೃಗುರ್ಮರೀಚಿರತ್ರಿಶ್ಚ ಅಂಗಿರಾಃ ಪುಲಹಃ ಕ್ರತುಃ ।
ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚೇತಿ ತೇ ದಶ ॥
ಬ್ರಹ್ಮಣೋ ಮಾನಸಾ ಹ್ಯೇತೇ ಉದ್ಭೂತಾಃ ಸ್ವಯಮೀಶ್ವರಾಃ ॥ ೮೮ ॥

---

೮೬. ಇಂತಹ ಋಷಿಕುಮಾರರು ಋಷಿಪುತ್ರಕರೆಂದು ಪ್ರಖ್ಯಾತರಾಗಿರುವರು. ಅವರು ಶ್ರುತಿ ಸ್ಮೃತಿಗಳನ್ನೂ, ಅವುಗಳ ತತ್ತ್ವಗಳನ್ನೂ ವಿಶೇಷಾಕಾರವಾಗಿ ತಿಳಿದಿರುವುದರಿಂದ ಅವರಿಗೆ ಶ್ರುತರ್ಷಿಗಳೆಂದು ಹೆಸರು ಬಂದಿದೆ. ಇಂತಹ ಶ್ರುತರ್ಷಿಗಳು ಶ್ರುತಿಪಾರಂಗತರಾಗಿರುವರು.

೮೭. ಅವ್ಯಕ್ತತತಾಭಿಮಾನಿಯೂ, ಮಹಾಲಕ್ಷ್ಮಿಯೂ, ಬ್ರಹ್ಮದೇವನೂ, ಮಹಾತತ್ವಾಭಿಮಾನಿಗಳಾಗಿರುವರು. ರುದ್ರದೇವನು ಅಹಂಕಾರ ತತ್ವಾಭಿಮಾನಿಯಾಗಿರುವನು. ಇದರಂತೆ ಭೂತಾಭಿಮಾನಿಗಳೂ, ಇಂದ್ರಿಯಾಭಿಮಾನಿಗಳೂ ಆದ ದೇವತೆಗಳಿರುವರು. ಇಂತಹ ಅಭಿಮಾನಿ ದೇವತೆಗಳ ಜ್ಞಾನವನ್ನು ಬಲ್ಲವರೇ ಋಷಿಗಳು. ಈ ರೀತಿಯಾಗಿ ಋಷಿಜಾತಿಗಳಿರುವುವು. ಆ ಋಷಿಗಳ ಜಾತಿಗಳು ಐದೇ ಲೋಕದಲ್ಲಿ ಪ್ರಸಿದ್ಧವಾಗಿವೆ. ಅವುಗಳನ್ನು ನಾಮಸಹಿತವಾಗಿ ಹೇಳುವೆನು ಕೇಳೆಂದನು.

೮೮. ಭೃಗು, ಮರೀಚಿ, ಅತ್ರಿ, ಅಂಗಿರಸ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ, ಪುಲಸ್ತ್ಯ ಎಂಬುದಾಗಿ ಈ ಹತ್ತು ಜನ ಋಷಿಗಳು ಲೋಕವಿಖ್ಯಾತರಾಗಿರುವರು. ಈ ಹತ್ತು ಜನರೂ ಬ್ರಹ್ಮದೇವನ ಮಾನಸಪುತ್ರರೂ, ಸ್ವೇಚ್ಛಾಚಾರಿಗಳೂ, ಸ್ವತಂತ್ರರೂ ಆಗಿರುವರು.

ಪ್ರವರ್ತಂತೇ ಋಷೇರ್ಯಸ್ಮಾನ್ಮಹಾಂಸ್ತಸ್ಮಾನ್ಮಹರ್ಷಯಃ ।
ಈಶ್ವರಾಣಾಂ ಸುತಾಸ್ತ್ವೇತೇ ಋಷಯಸ್ತಾನ್ನಿಬೋಧತ ॥ ೮೯ ॥

ಕಾವ್ಯೋ ಬೃಹಸ್ಪತಿಶ್ಚೈವ ಕಶ್ಯಪಶ್ಚ್ಯೋಶನಾಸ್ತಥಾ ।
ಉತಥ್ಯೋ ವಾಮದೇವಶ್ಚ ಅಪೋಜ್ಯಶ್ಚೈಶಿಜಸ್ತಥಾ ॥ ೯೦ ॥

ಕರ್ದಮೋ ವಿಶ್ರವಾಃ ಶಕ್ತಿರ್ವಾಲಖಿಲ್ಯಸ್ತಥಾ ಧರಾಃ ।
ಇತ್ಯೇತೇ ಋಷಯಃ ಪ್ರೋಕ್ತಾ ಜ್ಞಾನತೋ ಋಷಿತಾಂಗತಾಃ ॥ ೯೧ ॥

ಋಷಿಪುತ್ರಾನೃಷಿಕಾಂಸ್ತು ಗರ್ಭೋತ್ಪನ್ನಾನ್ನಿಬೋಧತ ।
ವತ್ಸರೋ ನಗ್ರಹೂಶ್ಚೈವ ಭಾರದ್ವಾಜಸ್ತಥೈವ ಚ ॥ ೯೨ ॥

ಬೃಹದುತ್ಥಃ ಶರದ್ವಾಂಶ್ಚ ಅಗಸ್ತ್ಯ ಶ್ಚೌಶಿಜಸ್ತಥಾ ।
ಋಷಿರ್ದೀರ್ಘತಮಾಶ್ಚೈವ ಬೃಹದುಕ್ಥಃ ಶರದ್ವತಃ ॥ ೯೩ ॥

ವಾಜಶ್ರವಾಃ ಸುವಿತ್ತಶ್ಚ ಸುವಾಗ್ವೇಷಪರಾಯಣಃ ।
ದಧೀಚಃ ಶಂಖಮಾಂಶ್ಚೈವ ರಾಜಾ ವೈ ಶ್ರವಣಸ್ತಥಾ ॥
ಇತ್ಯೇತೇ ಋಷಿಕಾಃ ಪ್ರೋಕ್ತಾಸ್ತೇ ಸತ್ಯಾದೃಷಿತಾಂ ಗತಾಃ ॥ ೯೪ ॥

---

೮೯. ಋಷಿಗಳಿಂದ ಮಹತ್ತಾದ ಅನೇಕ ವಿಷಯಗಳು ಲೋಕಗಳಲ್ಲಿ ಪ್ರಖ್ಯಾತವಾಗಿರುವುದರಿಂದ ಅವರು ಮಹರ್ಷಿಗಳೆಂದು ಪ್ರಸಿದ್ಧರಾಗಿರುವರು. ಇವರು ಸ್ವತಂತ್ರರೂ, ಬ್ರಹ್ಮನ ಮಾನಸಕುಮಾರರೂ ಆಗಿರುವರು. ಅವರನ್ನು ತಿಳಿಸುವೆನು ಕೇಳಿರೆಂದನು.

೯೦-೯೧. ಅವರು ಶುಕ್ರ, ಬೃಹಸ್ಪತಿ, ಕಶ್ಯಪ, ಉಶನಸ. ಉತಥ್ಯ, ವಾಮದೇವ, ಅಪೋಜ್ಯ, ಐಶಿಜ, ಕರ್ದಮ, ವಿಶ್ರವಸ್ಸು, ಶಕ್ತಿ, ವಾಲಿಖಿಲ್ಯ, ಧರ ಇವರು ಮಹರ್ಷಿಗಳೆಂದು ಪ್ರಖ್ಯಾತರಾಗಿರುವರು. ಇವರು ಜ್ಞಾನದಿಂದ ಋಷಿಗಳಾಗಿರುವರು.

೯೨-೯೪. ಋಷಿಪುತ್ರರು ಋಷಿಕರಾಗಿರುವರು. ಅವರು ಗರ್ಭಸಂಭೂತರಾಗಿರುವರು. ಅವರನ್ನು ತಿಳಿಸುವೆನು ಕೇಳಿರೆಂದನು. ಅವರು ಯಾರೆಂದರೆ ವತ್ಸರ, ನಗ್ರಹೂ, ಭಾರದ್ವಾಜ, ಬೃಹದುತ್ಥ, ಶರದ್ವಂತ, ವಾಜಶ್ರವಸ, ಸುವಿತ್ತ, ಸುವಾಕ್ಕು, ವೇಷಪರಾಯಣ. ದಧೀಚಿ, ಶಂಖಮಂತ, ವೈಶ್ರವಣ ಇವರು ಋಷಿಕುಮಾರರೂ, ಋಷಿನಾಮಕರೂ ಆಗಿರುವರು. ಇವರು ತಮ್ಮ ಸತ್ಯತೆಯಿಂದ ಋಷಿತ್ವವನ್ನು ಹೊಂದಿರುವರು.

ಈಶ್ವರಾ ಋಷಿಕಾಶ್ಚೈವ ಯೇ ಚಾನ್ಯೇ ನೈ ತಥಾ ಸ್ಮೃತಾಃ ।
ಏತೇ ಮಂತ್ರಕೃತಃ ಸರ್ವೇ ಕೃತ್ಸ್ನಶಸ್ತಾನ್ನಿಬೋಧತ ॥ ೯೫ ॥

ಭೃಗುಃ ಕಾವ್ಯಃ ಪ್ರಚೇತಾಸ್ತು ದಧೀಚೋ ಹ್ಯಾತ್ಮವಾನಪಿ ।
ಔರ್ವೋಽಥ ಜಮದಗ್ನಿಶ್ಚ ವಿದಃ ಸಾರಸ್ವತಸ್ತಥಾ ॥ ೯೬ ॥

ಅಷ್ಟಿಷೇಣ ಹ್ಯರೂಪಶ್ಚ ವೀತಹವ್ಯಃ ಸುಮೇಧಸಃ ।
ವೈನ್ಯಃ ಪೃಥುರ್ದಿವೋದಾಸಃ ಪ್ರಶ್ವಾರೋ ಗೃತ್ಸಮಾನ್ನಭಃ ॥
ಏಕೋನವಿಂಶದಿತ್ಯೇತೇ ಋಷಯೋ ಮಂತ್ರವಾದಿನಃ ॥ ೯೭ ॥

ಅಂಗಿರಾ ವೇಧಸಶ್ಚೈವ ಭಾರದ್ವಾಜೋಽಥ ಬಾಷ್ಕಲಿಃ ।
ತಥಾ ಸ್ಮೃತಸ್ತಥಾ ಗಾರ್ಗ್ಯಃ ಶೇನೀ ಸಂದೃತಿರೇವ ಚ ॥ ೯೮ ॥

ಪುರುಕುತ್ಸೋಽಥ ಮಾಂಧಾತಾ ಅಂಬರೀಷಸ್ತಥೈವ ಚ ।
ಆಹಾರ್ಯೋಽಥಾ ಜಮೀಢಶ್ಚ ಋಷಭೋ ಬಲಿರೇವ ಚ ॥ ೯೯ ॥

ಪೃಷದಶ್ವೋ ವಿರೂಪಶ್ಚ ಕಣ್ವಶ್ಚೈವಾಥ ಮುದ್ಗಲಃ ।
ಯುವನಾಶ್ವಃ ಪೌರುಕುತ್ಸಸ್ತ್ರಸದ್ದಸ್ಯುಃ ಸದುಸ್ಯುರ್ಮಾ ॥ ೧೦೦ ॥

---

೯೫. ಸ್ವತಂತ್ರರಾದ ಋಷಿಗಳು, ಋಷೀಕರು ಮತ್ತು ಇತರರಾದ ಜ್ಞಾನಿಗಳು ಆದ ಯಾರು ಲೋಕಸಮ್ಮತರಾಗಿರುವರೋ ಇವರೆಲ್ಲರೂ ಮಂತ್ರದ್ರಷ್ಟೃಗಳಾಗಿರುವರು. ಸಂಪೂರ್ಣವಾಗಿ ಅವರನ್ನು ತಿಳಿಸುವೆನು ಕೇಳಿರೆಂದನು.

೯೬–೯೭. ಅವರು ಭೃಗು, ಕಾವ್ಯ, ಪ್ರಚೇತಸ, ದಧೀಚಿ, ಜ್ಞಾನಿಯಾದ ಔರ್ವ, ಜಮದಗ್ನಿ, ವಿದ, ಸಾರಸ್ವತ, ಅಷ್ಟಿಷೇಣ, ಅರೂಪ, ವೀತಹವ್ಯ, ಸುಮೇಧಸ, ವೈನ್ಯ, ಪೃಥು, ದಿವೋದಾಸ, ಪ್ರಶ್ವಾರ, ಗೃತ್ಸಮದ, ನಭ ಇವರು ಮಂತ್ರದ್ರಷ್ಟೃಗಳಾಗಿರುವರು. ಇವರು ಇಪ್ಪತ್ತೊಂದುಜನರಿರುವರು. ಇವರಿಂದಲೇ ಮಂತ್ರಗಳು ವ್ಯಕ್ತಗಳಾಗಿವೆ.

೯೮–೧೦೨. ಆಂಗಿರಸ, ವೇಧಸ, ಭಾರದ್ವಾಜ, ಬಾಷ್ಕಲಿ, ಅಮೃತ, ಗಾರ್ಗ್ಯ, ಶೇನೀ ಸಂಹೃತಿ, ಪುರು, ಕುತ್ಸ, ಮಾಂಧಾತ, ಅಂಬರೀಷ. ಆಹಾರ್ಯ, ಅಜಮಿಢ, ಋಷಭ, ಬಲಿಪೃಷದಶ್ವ, ವಿರೂಪ, ಕಣ್ವ, ಮುದ್ಗಲ, ಯುವನಾಶ್ವ. ಪೌರುಕುತ್ಸ, ತ್ರಸದಸ್ಯು, ದಸ್ಯುಮಂತ, ಉತಥ್ಯ, ಭರದ್ವಾಜ, ವಾಜಶ್ರವಸ್ಸು,

ಉತಥ್ಯಶ್ಚ ಭರದ್ವಾಜಸ್ತಥಾ ವಾಜಶ್ರವಾ ಅಪಿ ।
ಆಯಾಸ್ಯಶ್ಚ ಸುವಿತ್ತಿಶ್ಚ ವಾಮದೇವಸ್ತಥೈವ ಚ ॥ ೧೦೨ ॥

ಔಗಜೋ ಬೃಹದುಕ್ಥಶ್ಚ ಋಷಿರ್ದೀರ್ಘತಪಾಸ್ತಥಾ ।
ಕಕ್ಷೀವಾಂಶ್ಚ ತ್ರಯಸ್ತ್ರಿಂಶತ್ ಸ್ಮೃತಾ ಅಂಗಿರಸೋ ವರಾಃ ॥
ಏತೇ ಮಂತ್ರಕೃತಃ ಸರ್ವೇ ಕಾಶ್ಯಪಾಂಸ್ತು ನಿಬೋಧತ ॥ ೧೦೩ ॥

ಕಾಶ್ಯಪಶ್ಚೈವ ವತ್ಸಾರೋ ವಿಭ್ರವೋ ರೈಭ್ಯ ಏವ ಚ ।
ಅಸಿತೋ ದೇವಲಶ್ಚೈವ ಷಡೇತೇ ಬ್ರಹ್ಮವಾದಿನಃ ॥ ೧೦೪ ॥

ಅತ್ರಿರರ್ಚಿಸನಶ್ಚೈವ ಶ್ಯಾವಾವಾಂಶ್ಚಾಥ ನಿಷ್ಠುರಃ ।
ವಲ್ಗೂತಕೋ ಮುನಿರ್ಧೀಮಾಂಸ್ತಥಾ ಪೂರ್ವಾತಿಥಿಶ್ಚ ಯಃ ॥
ಇತ್ಯೇತೇ ಚಾತ್ರಯಃ ಪ್ರೋಕ್ತಾ ಮಂತ್ರಕಾರಾ ಮಹರ್ಷಯಃ ॥ ೧೦೫ ॥

ವಸಿಷ್ಠಶ್ಚೈವ ಶಕ್ತಿಶ್ಚ ತಥೈವ ಚ ಪರಾಶರಃ ।
ಚತುರ್ಥ ಇಂದ್ರಪ್ರಮತಿಃ ಪಂಚಮಸ್ತು ಭರದ್ವಸುಃ ॥ ೧೦೬ ॥

---

ಆಯಾಸ್ಯ, ಸುವಿತ್ತಿ, ವಾಮದೇವ, ಔಗಜ, ಬೃಹದುಕ್ಥ, ದೀರ್ಘತಪಸ್ಸು ಕಕ್ಷೀವಂತರೆಂಬ ಮೂವತ್ತಮೂರುಜನರು ಪ್ರಖ್ಯಾತರಾದ ಅಂಗಿರಸರ ವಂಶದವರಾಗಿರುವರು. ಈ ಮೂವತ್ತುಮೂರು ಮಹರ್ಷಿಗಳು ಮಂತ್ರದ್ರಷ್ಟೃಗಳಾಗಿರುವರು ಈಗ ಕಶ್ಯಪಗೋತ್ರದವರನ್ನು ಹೇಳುವೆನು ಕೇಳಿರೆಂದನು-

೧೦೪. ಕಾಶ್ಯಪ, ವತ್ಸಾರ, ಬಭ್ರುಮ, ರೈಭ್ಯ- ಅಸಿತ, ದೇವಲರೆಂಬ ಈ ಆರುಜನರೂ ಬ್ರಹ್ಮವಾದಿಗಳಾಗಿರುವರು.

೧೦೫. ಅತ್ರಿ, ಅರ್ಚಿಸನ, ಶ್ಯಾವಾವಂತ, ನಿಷ್ಠುರ, ವಲ್ಗೂತಕ, ಜ್ಞಾನಿಯಾದ ಮುನಿ, ಪೂರ್ವಾತಿಥಿ, ಈ ಮಹರ್ಷಿಗಳು ಅತ್ರಿಗೋತ್ರೋತ್ಪನ್ನರಾಗಿಯೂ, ಮಂತ್ರದ್ರಷ್ಟೃಗಳಾಗಿಯೂ, ಮಹಾಜ್ಞಾನಿಗಳಾಗಿಯೂ, ಇರುವರು.

೧೦೬-೧೦೭. ವಸಿಷ್ಠ, ಶಕ್ತಿ, ಪರಾಶರ, ನಾಲ್ಕನೆಯವನು ಇಂದ್ರಪ್ರಮಿತಿ ಐದನೆಯವನು ಭರದ್ವಸು, ಆರನೆಯವನು ಮೈತ್ರಾವರುಣ ಏಳನೆಯವನು ಕುಂಡಿನ

ಷಷ್ಠಸ್ತು ಮೈತ್ರಾವರುಣಃ ಕುಂಡಿನಃ ಸಪ್ತಮಸ್ತಥಾ ।
ಸುದ್ಯುಮ್ನಶ್ಚಾಷ್ಟಮಶ್ಚೈವ ನವಮೋಽಥ ಬೃಹಸ್ಪತಿಃ ॥
ದಶಮಸ್ತು ಭರದ್ವಾಜೋ ಮಂತ್ರಬ್ರಾಹ್ಮಣಕಾರಕಾಃ ॥ ೧೧೬ ॥

ಏತೇ ಚೈವ ಹಿ ಕರ್ತಾರೋ ವಿಧರ್ಮಧ್ವಂಸಕಾರಿಣಃ ।
ಲಕ್ಷಣಂ ಬ್ರಹ್ಮಣಶ್ಚೈತದ್ವಿಹಿತಂ ಸರ್ವಶಾಖಿನಾಂ ॥ ೧೧೭ ॥

ಹೇತುರ್ಹಿಂಸೇಃ ಸ್ಮೃತೋ ಧಾತೋರ್ಯನ್ನಿಹಂತ್ಯುದಿತಂ ಪರೈಃ ।
ಅಥವಾರ್ಥಪರಿಪ್ರಾಪ್ತೇರ್ಹಿನೋತೇರ್ಗತಿಕರ್ಮಣಃ ॥ ೧೧೮ ॥

ತಥಾ ನಿರ್ವಚನಂ ಬ್ರೂಯಾದ್ವಾಕ್ಯಾರ್ಥಸ್ಯಾವಧಾರಣಂ ।
ನಿಂದಾಂ ತಾಮಾಹುರಾಚಾರ್ಯಾ ಯದ್ದೋಷಾನ್ನಿದ್ಯತೇ ವಚಃ ॥ ೧೧೯ ॥

---

ಎಂಟನೆಯವನು ಸುದ್ಯುಮ್ನ ಒಂಭತ್ತನೆಯವನು ಬೃಹಸ್ಪತಿ ಹತ್ತನೆಯವನು ಭರದ್ವಾಜ ಇವರು ಮಂತ್ರಬ್ರಾಹ್ಮಣಕಾರಕರಾಗಿರುವರು.

೧೧೭. ಈ ಹತ್ತುಜನ ಮಹರ್ಷಿಗಳೂ ಸತ್ಯಧರ್ಮಸ್ಥಾಪಕರಾಗಿಯೂ, ಅಧರ್ಮವನ್ನು ಧ್ವಂಸಮಾಡುವವರಾಗಿಯೂ, ಬ್ರಹ್ಮಜ್ಞಾನೋಪದೇಶಕರಾಗಿಯೂ, ಸರ್ವಶಾಖಾಪ್ರವರ್ತಕರಾಗಿಯೂ, ಲೋಕಕಲ್ಯಾಣಕರ್ತರಾಗಿಯೂ ಇರುವರು.

೧೧೮. ಹೇತುಶಬ್ದವು ಹಿಂಸಾರ್ಥಕವಾದ 'ಹಿ' ಧಾತುವಿನಿಂದ ನಿಷ್ಪನ್ನವಾಗಿದೆ. ಏವಂಚ ಮಹರ್ಷಿಗಳು ಪರೋಕ್ತವಾದ ಅಧರ್ಮವನ್ನು ಹಿಂಸಕರಾದ ಕಾರಣ ಹೇತುಶಬ್ದವಾಚ್ಯರಾಗಿರುವರು. ಗತಿಕರ್ಮಕವಾದ ಹಿಧಾತುವಿನಿಂದ ಜನ್ಯವಾಗಿದೆ. ಮಾರ್ಗದರ್ಶಕರೂ, ಸತ್ಯಮಾರ್ಗಾನುಷ್ಠಾನಿಗಳೂ ಆದವರೇ ಪರಮಮಹರ್ಷಿಗಳಾಗಿರುವರು.

೧೧೯. ಯಾರು ವಾಕ್ಯಾರ್ಥಸ್ವರೂಪವನ್ನು ವಿವರಣೆ ಮಾಡುತ್ತಾರೆಯೋ, ದುಷ್ಟಮಾರ್ಗಾದಿಗಳನ್ನು ನಿಂದಿಸುತ್ತಾರೆಯೋ ಅವರೇ ಆಚಾರ್ಯಪುರುಷರಾಗಿರುವರು. ಯಾವ ದೋಷದಿಂದ ಮಾತು ದೂಷಿತವಾಗುತ್ತದೆಯೋ ಅಂತಹ ದೋಷಪರಿಹಾರಕರೂ ಆದವರೇ ಮಹಾತ್ಮರಾಗಿರುವರು.

ಪ್ರಪೂರ್ವಾಚ್ಛಂಸತೇರ್ಧಾತೋಃ ಪ್ರಶಂಸಾ ಗುಣವತ್ತ್ರಯಾ ।
ಇದಂ ತ್ವಿದಮಿದನ್ನೇದಮಿತ್ಯನಿಶ್ಚಿತ್ಯ ಸಂಶಯಃ ॥ ೧೧೦ ॥

ಇದಮೇವಂ ವಿಧಾತವ್ಯಮಿತ್ಯಯಂ ವಿಧಿರುಚ್ಯತೇ ।
ಅನ್ಯಸ್ಯಾನ್ಯಸ್ಯ ಚೋಕ್ತತ್ವಾದ್ಬುಧೈಃ ಪರಕೃತಿಃ ಸ್ಮೃತಾ ॥ ೧೧೧ ॥

ಯೋ ಹ್ಯತ್ಯಂತತರೋಕ್ತಶ್ಚ ಪುರಾಕಲ್ಪಃ ಸ ಉಚ್ಯತೇ ।
ಪುರಾವಿಕ್ರಾಂತವಾಚಿತ್ವಾತ್ ಪುರಾಕಲ್ಪಸ್ಯ ಕಲ್ಪನಾ ॥ ೧೧೨ ॥

ಮಂತ್ರಬ್ರಾಹ್ಮಣಕಲ್ಪೈಸ್ತು ನಿಗಮೈಃ ಶುದ್ಧವಿಸ್ತರೈಃ ।
ಅನಿಶ್ಚಿತ್ಯ ಕೃತಾಮಾಹುರ್ವ್ಯವಧಾರಣ ಕಲ್ಪನಾಂ ॥ ೧೧೩ ॥

---

೧೧೦. ಪ್ರಪೂರ್ವಕವಾದ ಶಂಸಧಾತುವಿನಿಂದ ಪ್ರಶಂಸಾಶಬ್ದವು ಉತ್ಪನ್ನವಾಗಿವೆ. ಪ್ರಶಂಸೆಯೆಂದರೆ ಗುಣಿಗಳಲ್ಲಿರುವ ಗುಣಗಳನ್ನು ಹೇಳುವುದೇ ಪ್ರಶಂಸೆಯಾಗಿರುವುದು. ಇದು ಹೀಗೆಯೇ ಸರಿ. ಇದು ಹೀಗೆ ಅಲ್ಲವೆಂದು ನಿಶ್ಚಯವನ್ನು ಹೇಳದೆ, ಹೀಗೋ ಹಾಗೋ ಎಂದು ಸಂದೇಹವಾಗಿ ಹೇಳುವುದಕ್ಕೆ ಸಂಶಯವೆಂಬ ಸಂಜ್ಞೆಯು ಪ್ರಾಪ್ತವಾಗಿದೆ.

೧೧೧. ಈ ಕಾರ್ಯವನ್ನು ಹೀಗೆ ಮಾಡಬೇಕೆಂದು ವಿಧಾನಮಾಡುವುದಕ್ಕೆ ವಿಧಿಯೆಂಬ ಸಂಜ್ಞೆಯು ಉಂಟಾಗಿರುವುದು. ಪರರು ಈ ವಿಷಯವನ್ನು ಹೀಗೆ ಹೇಳುತ್ತಾರೆಂದು ಹೇಳುವ ಅನ್ಯೋಕ್ತಿಗೆ ಬುಧರು ಪರಕೃತಿಯೆಂದು ಹೇಳುವರು.

೧೧೨. ಯಾವುದು ಕೇವಲ ಹಿಂದಿನ ಕಾಲದಲ್ಲಿ ನಡೆದಿರುತ್ತದೆಯೋ ಅದಕ್ಕೆ ಪುರಾಕಲ್ಪವೆಂದು ಹೆಸರುಬಂದಿದೆ. ಪೂರ್ವಕಾಲದ ಅತ್ಯಂತ ಪುರಾತನ ವೀರರ ಚರಿತೆಗೆ ಪುರಾಕಲ್ಪವೆಂಬ ನಾಮವು ಸಂಭವಿಸಿರುತ್ತದೆ.

೧೧೩. ಪುರಾತನವಾದ ಮಂತ್ರ, ಬ್ರಾಹ್ಮಣ, ಕಲ್ಪಗಳಿಂದಲೂ ಅತ್ಯಂತ ಶುದ್ಧವೂ, ವಿಸ್ತಾರವೂ ಆದ ವೇದಗಳಿಂದಲೂ ವಿಹಿತವಾಗದೇ ಅನಿಶ್ಚಿತವಾಗಿ ಮಾಡಿದ ಕಾರ್ಯಗಳಿಗೆ ವ್ಯವಧಾರಣಕಲ್ಪನವೆಂದು ಹೇಳುವರು.

ಯಥಾ ಹೀದಂ ತಥಾ ತದ್ವೈ ಇದಂ ವಾಪಿ ತಥೈವ ತತ್ ।
ಇತ್ಯೇಷ ಹ್ಯುಪದೇಶೋಽಯಂ ದಶಮೋ ಬ್ರಾಹ್ಮಣಸ್ಯ ತು ॥ ೧೧೪ ॥

ಇತ್ಯೇತದ್ಬ್ರಾಹ್ಮಣಸ್ಯಾದೌ ವಿಹಿತಂ ಲಕ್ಷಣಂ ಬುಧೈಃ ।
ತಸ್ಯ ತದ್ವೃತ್ತಿರುದ್ದಿಷ್ಟಾ ವ್ಯಾಖ್ಯಾಪ್ಯನುಪದಂ ದ್ವಿಜೈಃ ॥ ೧೧೫ ॥

ಮಂತ್ರಾಣಾಂ ಕಲ್ಪನಂ ಚೈವ ವಿಧಿದೃಷ್ಟೇಷು ಕರ್ಮಸು ।
ಮಂತ್ರೋ ಮಂತ್ರಯತೇರ್ಧಾತೋರ್ಬ್ರಾಹ್ಮಣೋ ಬ್ರಹ್ಮಣೋಽವನಾತ್ ॥

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥ ೧೧೭ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಋಷಿಲಕ್ಷಣಂ"
ನಾಮೋನಷಷ್ಟಿತಮೋಽಧ್ಯಾಯಃ

---

೧೧೪. ಇದು ಹೇಗೋ ಅದೂ ಹಾಗೆಯೇ ಆಗುವುದು. ಇದೂ ಅದೂ ಸಹ ಹೇಗೆಯೋ ಹಾಗೆಯೇ ಆಗುವುದೆಂಬ ಯಾವ ಉಪದೇಶವಿರುತ್ತದೆಯೋ ಅದು ದಶಮಬ್ರಾಹ್ಮಣದಲ್ಲಿ ಉಕ್ತವಾಗಿದೆ.

೧೧೫. ಈ ರೀತಿಯಾಗಿ ಬ್ರಾಹ್ಮಣಭಾಗದ ಆದಿಯಲ್ಲಿ ಋಷ್ಯಾದಿಗಳ ಲಕ್ಷಣಾದಿಗಳನ್ನು ಬ್ರಾಹ್ಮಣರು ಹೇಳಿರುವರು. ಅವರಿಗೆ ಆಯಾ ವೃತ್ತಿಗಳನ್ನೂ ಹೇಳಿರುವರು. ಬ್ರಾಹ್ಮಣರು ಅವಕ್ಕೆ ವ್ಯಾಖ್ಯಾನವನ್ನು ತಕ್ಷಣವೇ ಮಾಡಿರುವರು.

೧೧೬. ಮಹಾತ್ಮರು ವಿಧ್ಯುಕ್ತವಾದ ಕರ್ಮಗಳಲ್ಲಿ ಮಂತ್ರಗಳ ಕಲ್ಪನೆಯನ್ನೂ ಹೇಳಿರುವರು. ಮಂತ್ರ್ ಆಲೋಚನೆಯೆಂಬ ಧಾತುವಿನಿಂದ ಮಂತ್ರಪದವು ಸಿದ್ಧವಾಗಿದೆ. ಬ್ರಹ್ಮಜ್ಞಾನಿಗಳಿಗೆ ಬ್ರಾಹ್ಮಣರೆಂದೂ ಅವನಿಂದ ಬ್ರಹ್ಮನಿಂದ ರಕ್ಷಿಸಲ್ಪಡುವವರಿಗೆ ಬ್ರಾಹ್ಮಣರೆಂದು ನಾಮವೂ ಸಂಭವಿಸಿರುತ್ತದೆ.

೧೧೭. ಸೂತ್ರಸ್ವರೂಪವನ್ನರಿತ ಜ್ಞಾನಿಗಳು ಯಾವದು ಅಲ್ಪಾಕ್ಷರಗಳಿಂದ ಬಹ್ವರ್ಥಪ್ರತಿಪಾದವಾಗಿದೆಯೋ, ಸಂದೇಹವಿಲ್ಲದೆ ನಿರ್ಣಯವನ್ನು ಹೇಳುತ್ತದೆಯೋ, ಸಾರವತ್ತಾಗಿದೆಯೋ, ಬಹ್ವರ್ಥಪ್ರತಿಪಾದಕವಾಗಿಯೂ, ಅಸಂಕುಚಿತವಾಗಿಯೂ, ನಿರ್ದೋಷವಾಗಿಯೂ ಇರುತ್ತದೆಯೋ ಅದನ್ನು ಸೂತ್ರವೆಂದು ಹೇಳುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಋಷಿಸ್ವರೂಪನಿರೂಪಣೆ"ಯೆಂಬ ಐವತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.

## ಐವತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಚತುರ್ಯುಗಗಳಲ್ಲಿರುವ ಪುರುಷರು, ದೇವತೆಗಳು, ಪಶುಗಳು ಇವುಗಳ ಪ್ರಮಾಣಗಳೂ, ಶಿಷ್ಟಾಚಾರಗಳೂ, ಸತ್ಯಧರ್ಮಗಳೂ, ಜ್ಞಾನ, ಭಕ್ತಿ, ವೈರಾಗ್ಯಾದಿಗಳೂ ವರ್ಣಿತವಾಗಿವೆ. ಋಷಿಗಳು, ಮಹರ್ಷಿಗಳು, ಪರಮರ್ಷಿಗಳು, ಸತ್ಯರ್ಷಿಗಳು, ಋಷಿಪುತ್ರರು, ಮಂತ್ರದ್ರಷ್ಟ್ರುಗಳು, ಬ್ರಹ್ಮವಾದಿಗಳು, ಮಂತ್ರ, ಬ್ರಾಹ್ಮಣಕಾರರು, ಆಚಾರ್ಯರು ಇವರು ವರ್ಣಿತರಾಗಿರುವರು. ಮತ್ತು ನಿರ್ವಚನ, ನಿಂದಾ, ಪ್ರಶಂಸಾ, ಸಂಶಯ, ವಿಧಿ, ಪರಕೃತಿ, ಪುರಾಕಲ್ಪ, ಕಲ್ಪನಾ, ವ್ಯವಧಾರಣಕಲ್ಪನ, ಸೂತ್ರ ಇವುಗಳ ಸ್ವರೂಪಗಳೂ ನಿರೂಪಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಷಷ್ಠಿತಮೋಽಧ್ಯಾಯಃ

॥ ಋಷಯ ಊಚುಃ ॥

**ಋಷಯಸ್ತದ್ವಚಃ ಶ್ರುತ್ವಾ ಸೂತಮಾಹುಃ ಸುದುಸ್ತರಂ ।**
**ಕಥಂ ವೇದಾಃ ಪುರಾ ವ್ಯಸ್ತಾಸ್ತನ್ನೋ ಬ್ರೂಹಿ ಮಹಾಮತೇ ॥ ೧ ॥**

॥ ಸೂತ ಉವಾಚ ॥

**ದ್ವಾಪರೇ ತು ಪರಾವೃತ್ತೇ ಮನೋಃ ಸ್ವಾಯಂಭುವೇಽಂತರೇ ।**
**ಬ್ರಹ್ಮಾ ಮನುಮುವಾಚೇದಂ ತದ್ವದಿಷ್ಯೇ ಮಹಾಮತೇ ॥ ೨ ॥**

---

## ಅರವತ್ತನೆಯ ಅಧ್ಯಾಯವು

೧. ಮುನಿಗಳು ಹೇಳಿದರು :—ನೈಮಿಷಾರಣ್ಯವಾಸಿಗಳಾದ ಮುನಿಗಳು ಸೂತಮುನಿಯ ಅಮೋಘವಾದ ಆ ಭಾಷಣಗಳನ್ನು ಕೇಳಿ ಅತ್ಯಂತ ಸಂತುಷ್ಟರಾಗಿ ಎಲೈ ಸೂತಪುರಾಣಿಕನೇ, ಪೂರ್ವಯುಗಗಳಲ್ಲಿ ವೇದಗಳು ಹೇಗೆ ವಿಭಾಗಿಸಲ್ಪಟ್ಟವು. ಇದನ್ನು ತಿಳಿಸಬೇಕೆಂದು ಮಹಾಜ್ಞಾನಿಯಾದ-ಸೂತನನ್ನು ಪ್ರಾರ್ಥಿಸಿದರು.

೨ ಸೂತಮುನಿಯು ಹೇಳಿದನು :—ಮಹಾಜ್ಞಾನಿಗಳಾದ ಮುನಿಗಳೇ, ಸ್ವಾಯಂಭುವಮನ್ವಂತರದ ಪೂರ್ವದ ದ್ವಾಪರಯುಗವು ಪ್ರಾರಂಭವಾಗಲು ಬ್ರಹ್ಮದೇವನು ಮನುವಿಗೆ ಯಾವ ವಿಷಯಗಳನ್ನು ಹೇಳಿದ್ದನೋ ಆ ವಿಷಯಗಳನ್ನು ನಿಮಗಾಗಿ ತಿಳಿಸುವೆನು ಕೇಳಿರೆಂದನು.

ಪರಿವೃತ್ತೇ ಯುಗೇ ತಾತ ಸ್ವಲ್ಪವೀರ್ಯಾ ದ್ವಿಜಾತಯಃ |
ಸಂವೃತ್ತಾ ಯುಗದೋಷೇಣ ಸರ್ವೇ ಚೈವ ಯಥಾಕ್ರಮಂ || ೩ ||

ಭ್ರಶ್ಯಮಾನಂ ಯುಗವಶಾದಲ್ಪಶಿಷ್ಟಂ ಹಿ ದೃಶ್ಯತೇ |
ದಶಸಾಹಸ್ರಭಾಗೇನ ಹ್ಯವಶಿಷ್ಟಂ ಕೃತಾದಿದಂ || ೪ ||

ವೀರ್ಯಂ ತೇಜೋ ಬಲಂ ವಾಕ್ಯಂ ಸರ್ವಂ ಚೈವ ಪ್ರಣಶ್ಯತಿ |
ವೇದವೇದಾ ಹಿ ಕಾರ್ಯಾಃ ಸ್ಯುರ್ಮಾಭೂದ್ವೇದವಿನಾಶನಂ || ೫ ||

ವೇದೇ ನಾಶಮನುಪ್ರಾಪ್ತೇ ಯಜ್ಞೋ ನಾಶಂ ಗಮಿಷ್ಯತಿ |
ಯಜ್ಞೇ ನಷ್ಟೇ ದೇವನಾಶಸ್ತತಃ ಸರ್ವಂ ಪ್ರಣಶ್ಯತಿ || ೬ ||

---

೩. ಎಲೈ ಪ್ರಿಯಪುತ್ರನೇ, ಆ ದ್ವಾಪರಯುಗವು ಪ್ರಾರಂಭವಾಗಲು ಅಲ್ಪ ಶಕ್ತರಾದ ಬ್ರಾಹ್ಮಣಾದಿಗಳು ಯುಗಧರ್ಮದಿಂದ ಕ್ರಮವಾಗಿ ಬಲಹೀನರಾಗುವರು.

೪. ಆ ಯುಗದೋಷದಿಂದ ಕ್ರಮವಾಗಿ ಸತ್ಯಧರ್ಮಾದಿಗಳು ನಷ್ಟವಾಗಿ ಅಲ್ಪಾವಶಿಷ್ಟವಾಗುವುವು. ಕೃತಯುಗಾದಿಗಳಲ್ಲಿರತಕ್ಕ ವೀರ್ಯ, ಕಾಂತಿ, ಶಕ್ತಿ ಮೊದಲಾದುವು ಹತ್ತುಸಾವಿರಗಳಲ್ಲಿ ಒಂದು ಭಾಗದಷ್ಟುಮಾತ್ರ ಉಳಿದು ಮಿಕ್ಕ ಭಾಗಗಳು ನಷ್ಟವಾಗುವುವು.

೫. ಅದರಂತೆ ಆ ಯುಗದಲ್ಲಿ ಶಕ್ತಿ, ತೇಜಸ್ಸು, ಬಲ, ವಾಕ್ಯ ಇವೇ ಮೊದಲಾದ ಸರ್ವವೂ ನಾಶವಾಗುವುವು. ಯಜ್ಞಯಾಗಾದಿಸಮಸ್ತಕಾರ್ಯಗಳೂ ವೇದಗಳಿಂದಲೇ ಉಂಟಾಗುವುವು. ಆದುದರಿಂದ ವೇದಶಾಸ್ತ್ರಗಳು ನಾಶವಾಗದೇ ಯಾವಾಗಲೂ ಶಾಶ್ವತವಾಗಿಯೇ ಉಳಿಯಬೇಕು.

೬. ಲೋಕದಲ್ಲಿ ವೇದಗಳೇನಾದರೂ ನಾಶವಾದರೆ ಯಜ್ಞಯಾಗಾದಿ ಸಮಸ್ತ ಸತ್ಕರ್ಮಗಳೂ ನಾಶವಾಗುವುವು. ಹೀಗೆ ಯಜ್ಞ ನಾಶವಾದರೆ ದೇವತೆಗಳಿಗೆ ಅಶನ ವಸನಾದಿಗಳಿಲ್ಲದೇ ನಾಶವಾಗುವರು. ದೇವತೆಗಳಿಲ್ಲದಿದ್ದರೆ ಮಳೆ ಬೆಳೆಗಳಾಗದೆ, ಸರ್ವವೂ ನಷ್ಟವಾಗುವುವು.

ಆದ್ಯೋ ವೇದಶ್ಚತುಷ್ಪಾದಃ ಶತಸಾಹಸ್ರಸಂಜ್ಞಿತಃ ।
ಪುನರ್ದಶಗುಣಃ ಕೃತ್ಸ್ನೋ ಯಜ್ಞೋ ಸರ್ವಕಾಮಧೃಕ್ ॥ ೭ ॥

ಏವಮುಕ್ತಸ್ತಥೇತ್ಯುಕ್ತ್ವಾ ಮನುರ್ಲೋಕಹಿತೇ ರತಃ ।
ವೇದಮೇಕಂ ಚತುಷ್ಪಾದಂ ಚತುರ್ಧಾ ವ್ಯಭಜತ್ಪ್ರಭುಃ ॥ ೮ ॥

ಬ್ರಹ್ಮಣೋ ವಚನಾತ್ತಾತ ಲೋಕಾನಾಂ ಹಿತಕಾಮ್ಯಯಾ ।
ತದಿದಂ ವರ್ತಮಾನೇನ ಯುಷ್ಮಾಕಂ ವೇದಕಲ್ಪನಂ ॥ ೯ ॥

ಮನ್ವಂತರೇಣ ವಕ್ಷ್ಯಾಮಿ ವ್ಯತೀತಾನಾಂ ಪ್ರಕಲ್ಪನಂ ।
ಪ್ರತ್ಯಕ್ಷೇಣ ಪರೋಕ್ಷಂ ವೈ ತನ್ನಿಬೋಧತ ಸತ್ತಮಾಃ ॥ ೧೦ ॥

---

೭. ಹತ್ತು ಸಾವಿರ ಸಂಖ್ಯಾಕವಾದ ವೇದವು, ಮೊದಲು ನಾಲ್ಕು ಪಾದಗಳುಳ್ಳದ್ದಾಗಿ ವಿಭಾಗಿಸಲ್ಪಟ್ಟಿತು. ಅನಂತರ ಸಮಸ್ತ ವೇದವೂ ಹತ್ತರಷ್ಟು ಜಾಸ್ತಿಯಾಯಿತು. ಯಾಗವು ಸಕಲೇಷ್ಟಾರ್ಥಗಳನ್ನೂ ಕೊಡುತ್ತವೆ.

೮. ಬ್ರಹ್ಮದೇವನು ಹೀಗೆ ಮನುವಿಗೆ ಹೇಳಲಾಗಿ, ಆಗ ಮಹಾಮುನಿಯು ಬ್ರಹ್ಮದೇವನ ಮಾತನ್ನು ಅನುಮೋದಿಸಿ, ಲೋಕಕಲ್ಯಾಣಕ್ಕಾಗಿ ವೇದವನ್ನು ನಾಲ್ಕು ಪಾದಗಳಿಂದ ಸಹಿತವನ್ನಾಗಿ ಮಾಡಿದನು. ಅಂದರೆ ವೇದವನ್ನು ನಾಲು ಭಾಗಮಾಡಿದನು.

೯. ಎಲೈ ಮುನಿಗಳೇ, ಬ್ರಹ್ಮದೇವನ ವಚನಾನುಸಾರವಾಗಿ ಲೋಕಹಿತಾಕಾಂಕ್ಷೆಯಿಂದ ವೇದಗಳನ್ನು ನಾಲ್ಕು ಭಾಗ ಮಾಡಿದನು. ಆ ನಾಲ್ಕು ಭಾಗಗಳೇ ಈಗಲೂ ಇರುವುದು. ಅದನ್ನೇ ಈಗ ನೀವು ಕಲಿಯುವಿರೆಂದು ಹೇಳಿದನು.

೧೦. ಎಲೈ ಜ್ಞಾನಿಗಳಾದ ಮುನಿಗಳೇ, ಈ ವರ್ತಮಾನ ಮನ್ವಂತರದಲ್ಲಿ ಯಾವ ವೇದಗಳು ಇರುತ್ತವೆಯೋ, ಅದೇ ವೇದಗಳೇ ಅತೀತವಾದ ಮನ್ವಂತರಗಳಲ್ಲಿಯೂ ಇರುತ್ತವೆ. ಪ್ರತ್ಯಕ್ಷವಾದ ವಿಷಯಗಳಿಂದ ಅತೀತಾನಾಗತವಾದ ವಿಷಯಗಳನ್ನು ಊಹಿಸಬೇಕಾಗಿರುತ್ತದೆ. ವರ್ತಮಾನಕಾಲದಂತೆ ಭೂತ ಭವಿಷ್ಯತ್ಕಾಲಗಳಲ್ಲಿಯೂ ಕೂಡ ಸರ್ವವೂ ಇರುತ್ತವೆಯೆಂದು ತಿಳಿಯಬೇಕು.

ಅಸ್ಮಿನ್ ಯುಗೇ ಕೃತೋ ವ್ಯಾಸಃ ಪಾರಾಶರ್ಯಃ ಪರಂ ತಪಃ ।
ದ್ವೈಪಾಯನ ಇತಿ ಖ್ಯಾತೋ ವಿಷ್ಣೋರಂಶಃ ಪ್ರಕೀರ್ತಿತಃ ॥ ೧೧ ॥

ಬ್ರಹ್ಮಣಾ ಚೋದಿತಃ ಸೋಽಸ್ಮಿನ್ ವೇದಂ ವ್ಯಸ್ತುಂ ಪ್ರಚಕ್ರಮೇ ।
ಅಥ ಶಿಷ್ಯಾನ್ ಸ ಜಗ್ರಾಹ ಚತುರೋ ವೇದಕಾರಣಾತ್ ॥ ೧೨ ॥

ಜೈಮಿನಿಂ ಚ ಸುಮಂತುಂ ಚ ವೈಶಂಪಾಯನಮೇವ ಚ ।
ಪೈಲಂ ತೇಷಾಂ ಚತುರ್ಥಂ ತು ಪಂಚಮಂ ಲೋಮಹರ್ಷಣಂ ॥ ೧೩ ॥

ಋಗ್ವೇದಶ್ರಾವಕಂ ಪೈಲಂ ಜಗ್ರಾಹ ವಿಧಿವದ್ದ್ವಿಜಂ ।
ಯಜುರ್ವೇದಪ್ರವಕ್ತಾರಂ ವೈಶಂಪಾಯನಮೇವ ಚ ॥ ೧೪ ॥

ಜೈಮಿನಿಂ ಸಾಮವೇದಾರ್ಥಶ್ರಾವಕಂ ಸೋಽನ್ವಪದ್ಯತ ।
ತಥೈವಾಥರ್ವವೇದಸ್ಯ ಸುಮಂತುಮೃಷಿಸತ್ತಮಂ ॥ ೧೫ ॥

---

೧೧. ಈ ಯುಗದಲ್ಲಿ ಪರಾಶರರಪುತ್ರರೂ, ಪರಂತಪರೂ, ವಿಷ್ಣುವಿನ ಅಂಶ ದಿಂದ ಸಂಭೂತರೂ ಆದ ವೇದವ್ಯಾಸಮಹರ್ಷಿಗಳು ಕೃಷ್ಣದ್ವೈಪಾಯನನಾಮದಿಂದ ಪ್ರಸಿದ್ಧರಾಗಿ ವೇದವನ್ನು ವಿಭಾಗಮಾಡಿ ಶಿಷ್ಯರಿಗೆ ಉಪದೇಶಿಸಿದರು.

೧೨. ಹೀಗೆ ವೇದವ್ಯಾಸರು ಬ್ರಹ್ಮದೇವನಿಂದ ಪ್ರೇರಿತರಾಗಿ, ವೇದವನ್ನು ವಿಭಾಗಮಾಡಿ, ನಾಲ್ಕು ಜನ ಶಿಷ್ಯರಿಗೆ ನಾಲ್ಕು ವೇದಗಳನ್ನು ಉಪದೇಶಮಾಡಿದರು.

೧೩. ಆ ನಾಲ್ಕುಜನ ಶಿಷ್ಯರಾರೆಂದರೆ—ಜೈಮಿನಿ, ಸುಮಂತು, ವೈಶಂಪಾಯನ, ನಾಲ್ಕನೆಯವನು ಪೈಲ, ಐದನೆಯವನು ಲೋಮಹರ್ಷಣ ಇವರಿಗೆ ನಾಲ್ಕು ವೇದಗಳನ್ನೂ ವಿಶ್ವಾಸದಿಂದ ಅನುಗ್ರಹಿಸಿದರು.

೧೪. ಅವರಲ್ಲಿ ಭಕ್ತಿಯುಕ್ತನಾದ ಪೈಲನಿಗೆ ಋಗ್ವೇದವನ್ನು ಶಾಸ್ತ್ರೋಕ್ತ ರೀತಿಯಲ್ಲಿ ಉಪದೇಶಮಾಡಿದರು. ವಿಧೇಯನಾದ ವೈಶಂಪಾಯನನಿಗೆ ಯಜುರ್ವೇದ ವನ್ನು ವಿದ್ಯುಕ್ತಪ್ರಕಾರವಾಗಿ ಉಪದೇಶಿಸಿದರು.

೧೫–೧೬. ತರುವಾಯ ವ್ಯಾಸರು ಸಾಮವೇದಾರ್ಥವನ್ನು ಜೈಮಿನಿಮುನಿಗಾಗಿ ಉಪದೇಶಮಾಡಿದರು. ಋಷಿವರ್ಯರಾದ ಸುಮಂತ ಮಹರ್ಷಿಗೆ ಅಥರ್ವವೇದಾರ್ಥ ಗಳನ್ನು ಉಪದೇಶಮಾಡಿದರು. ಷಡ್ಗುಣೈಶ್ವರ್ಯಸಂಪನ್ನನೂ, ಸರ್ವೇಶ್ವರನೂ,

ಇತಿಹಾಸ ಪುರಾಣಸ್ಯ ವಕ್ತಾರಂ ಸಮ್ಯಗೇವ ಹಿ ।
ಮಾಂ ಚೈವ ಪ್ರತಿಜಗ್ರಾಹ ಭಗವಾನೀಶ್ವರಃ ಪ್ರಭುಃ ॥ ೧೬ ॥

ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯತ್ ।
ಚತುರ್ಹೋತ್ರಮಭೂತ್ತಸ್ಮಿಂಸ್ತೇನ ಯಜ್ಞಮಕಲ್ಪಯತ್ ॥ ೧೭ ॥

ಆಧ್ವರ್ಯವಂ ಯಜುರ್ಭಿಸ್ತು ಋಗ್ಭಿರ್ಹೋತ್ರಂ ತಥೈವ ಚ ।
ಉದ್ಗಾತ್ರಂ ಸಾಮಭಿಶ್ಚಕ್ರೇ ಬ್ರಹ್ಮತ್ವಂ ಚಾಪ್ಯಥರ್ವಭಿಃ ॥
ಬ್ರಹ್ಮತ್ವಮಕರೋದ್ಯಜ್ಞೇ ವೇದೇನಾಥರ್ವಣೇನ ತು ॥ ೧೮ ॥

ತತಃ ಸ ಋಚಮುದ್ಧೃತ್ಯ ಋಗ್ವೇದಂ ಸಮಕಲ್ಪಯತ್ ।
ಹೋತೃಕಂ ಕಲ್ಪ್ಯತೇ ತೇನ ಯಜ್ಞವಾಹಂ ಜಗದ್ಧಿತಂ ॥ ೧೯ ॥

---

ಪ್ರಭುವೂ ಆದ ವೇದವ್ಯಾಸದೇವನು ಇತಿಹಾಸ ಪುರಾಣಗಳನ್ನು ಕ್ರಮವಾಗಿ ತಿಳಿಸುವುದಕ್ಕೋಸ್ಕರ ನನ್ನನ್ನು ನಿಯಮಿಸಿ, ಪಂಚಮ ವೇದವಾದ ಇತಿಹಾಸಾದಿಗಳನ್ನು ನನಗೆ ಉಪದೇಶಿಸಿದನು.

೧೭. ಆದಿಯಲ್ಲಿ ಯಜುರ್ವೇದವು ಒಂದೇ ವಿಧವಾಗಿತ್ತು. ತರುವಾಯ ವ್ಯಾಸರು ಅದನ್ನು ನಾಲ್ಕು ಭಾಗಗಳನ್ನಾಗಿ ಮಾಡಿದರು. ಅದರಲ್ಲಿ ನಾಲ್ಕು ಹೋಮ ಪ್ರಕರಣವಿತ್ತು. ಇದರಿಂದ ಯಾಗವನ್ನು ಕಲ್ಪನೆಮಾಡಿದರು. ಏರ್ಪಡಿಸಿದರು.

೧೮. ಅಂತಹ ಯಾಗದಲ್ಲಿ ಯಜುರ್ವೇದದಿಂದ ಅಧ್ವರ್ಯು ವ್ಯಾಪಾರವು ನಡೆಯಬೇಕು. ಋಗ್ವೇದದಿಂದ ಹೋತೃವ್ಯಾಪಾರವೂ, ಸಾಮವೇದದಿಂದ ಉದ್ಗಾತೃ ವ್ಯಾಪಾರವೂ, ಅಥರ್ವಣವೇದದಿಂದ ಬ್ರಹ್ಮತ್ವವೂ ಸಿದ್ಧವಾಗುವುವು. ಅಥರ್ವಣ ವೇದದಿಂದ ದೇವತೆಗಳನ್ನೂ, ಬ್ರಹ್ಮತ್ವವನ್ನೂ ಕಲ್ಪಿಸಿದನು. ಹೀಗೆ ನಾಲ್ಕು ವೇದಗಳೂ ಯಾಗಕ್ಕೆ ಉಪಯೋಗವಾಗಿವೆ.

೧೯. ಅನಂತರ ಭಗವಂತನಾದ ವೇದವ್ಯಾಸದೇವನು ವೇದರಾಶಿಯಲ್ಲಿ ಒಂದು ಋಕ್ಕನ್ನು ತೆಗೆದುಕೊಂಡು ಋಗ್ವೇದವನ್ನು ಏರ್ಪಡಿಸಿದನು. ಅಂತಹ ಋಗ್ವೇದದಿಂದ ಹೋತೃವನ್ನು ಏರ್ಪಡಿಸಿದನು. ಇಂತಹ ಯಜ್ಞದಿಂದ ಲೋಕಕಲ್ಯಾಣವಾಗುವುದು.

**ಸಾಮಭಿಃ ಸಾಮವೇದಂ ಚ ತೇನೋದ್ಗಾತ್ರಮರೋಚಯತ್ ।**
**ರಾಜ್ಞಸ್ತ್ವಥರ್ವವೇದೇನ ಸರ್ವಕರ್ಮಾಣ್ಯಕಾರಯತ್ ॥ ೨೦ ॥**

**ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಭಿಃ ಕುಲಕರ್ಮಭಿಃ ।**
**ಪುರಾಣಸಂಹಿತಾಶ್ಚಕ್ರೇ ಪುರಾಣಾರ್ಥವಿಶಾರದಃ ॥ ೨೧ ॥**

**ಯಚ್ಛಿಷ್ಟಂತು ಯಜುರ್ವೇದೇ ತೇನ ಯಜ್ಞಮಥಾಯುಜತ್ ।**
**ಯುಂಜಾನಃ ಸ ಯಜುರ್ವೇದೇ ಇತಿ ಶಾಸ್ತ್ರವಿನಿಶ್ಚಯಃ ॥ ೨೨ ॥**

**ಪದಾನಾಮುದ್ಧೃತತ್ವಾಚ್ಚ ಯಜೂಂಷಿ ವಿಷಮಾಣಿ ವೈ ।**
**ಸ ತೇನೋದ್ಧೃತವೀರ್ಯಸ್ತು ಋತ್ವಿಗ್ಭಿರ್ವೇದಪಾರಗೈಃ ॥**
**ಪ್ರಯುಜ್ಯತೇ ಹ್ಯಶ್ವಮೇಧಸ್ತೇನ ವಾ ಯುಜ್ಯತೇ ತು ಸಃ ॥ ೨೩ ॥**

---

೨೦. ಸಾಮಭಾಗಗಳಿಂದ ಸಾಮವೇದವನ್ನು ಏರ್ಪಡಿಸಿದನು. ಅಂತಹ ಸಾಮವೇದದಿಂದ ಉದ್ಗಾತೃತ್ವವೂ, ಅದರಿಂದ ಯಾಗದ ಪೂರ್ಣತೆಯೂ ಉಂಟಾಗುವುದು. ಆ ದ್ವೈಪಾಯನ ಮಹರ್ಷಿಗಳು ಅಥರ್ವವೇದದಿಂದ ರಾಜಕಾರ್ಯೋಪಯುಕ್ತಗಳಾದ ಶಸ್ತ್ರನಿರ್ವಹಣವೇ ಮೊದಲಾದ ಸಕಲ ಕಾರ್ಯಗಳನ್ನೂ ಏರ್ಪಡಿಸಿದರು.

೨೧. ಪುರಾಣ ನಿರೂಪಣೆಯಲ್ಲಿ ಸಮರ್ಥರಾದ ವೇದವ್ಯಾಸರು ಪೌರಾಣಿಕ ಚರಿತ್ರೆಗಳಿಂದಲೂ, ಸಣ್ಣ ಕಥೆಗಳಿಂದಲೂ, ಒಗಟುಗಳಿಂದಲೂ, ವರ್ಣಾಶ್ರಮಧರ್ಮಗಳಿಂದಲೂ ಸಹಿತವಾದ ಪುರಾಣಗಳನ್ನೂ ಸಂಹಿತೆಗಳನ್ನೂ ಮಾಡಿದರು.

೨೨. ಅನಂತರ ಯಜುರ್ವೇದದಲ್ಲಿ ಉಳಿದಿರುವ ಭಾಗಗಳಿಂದ ಯಜ್ಞ ಕಾರ್ಯಗಳನ್ನೂ ನಿಯಮಿಸಿದರು. ಯಾಗದಲ್ಲಿ ಯಜುರ್ವೇದೋಕ್ತಕಾರ್ಯಗಳೇ ವಿಶೇಷವಾಗಿರುವುವು. ಎಂದು ಶಾಸ್ತ್ರವಿಶಾರದರು ಹೇಳಿರುವರು.

೨೩. ಯಜುರ್ವೇದದಲ್ಲಿ ಅನೇಕ ಪದಗಳು ಉದ್ಧೃತವಾಗಿರುವುದರಿಂದ ಯಜುರ್ವೇದವು ವಿಷಮವಾಗಿರುವುದು. ವೇದಪಾರಂಗತರಾದ ಋತ್ವಿಕ್ಕುಗಳು ಉದ್ಧೃತವಾದ ಯಜುರ್ವೇದದ ಪದಗಳಿಂದ ಅಶ್ವಮೇಧಭಾಗವು ಕೃತವಾಗಿದೆ. ಆ ಭಾಗವು ಅಶ್ವಮೇಧಯಾಗದಲ್ಲಿ ಉಪಯುಕ್ತವಾಗಿರುವುದು.

**ಋಚೋ ಗೃಹೀತ್ವಾ ಪೈಲಸ್ತು ವ್ಯಭಜತ್ತ್ರಿಧಾ ಪುನಃ ।**
**ದ್ವಿಷ್ಕೃತ್ವಾ ಸಂಯುಗೇ ಚೈವ ಶಿಷ್ಯಾಭ್ಯಾಮದದತ್ಪ್ರಭುಃ ॥ ೨೪ ॥**

**ಇಂದ್ರಪ್ರಮಥತಯೇ ಚೈಕಾಂ ದ್ವಿತೀಯಾಂ ಬಾಷ್ಕಲಾಯ ಚ ।**
**ಚತಸ್ರಃ ಸಂಹಿತಾಃ ಕೃತ್ವಾ ಬಾಷ್ಕಲಿರ್ದ್ವಿಜಸತ್ತಮಃ ॥**
**ಶಿಷ್ಯಾನಧ್ಯಾಪಯಾಮಾಸ ಶುಶ್ರೂಷಾಭಿರತಾನ್ ಹಿತಾನ್ ॥ ೨೫ ॥**

**ಬೋಧಂ ತು ಪ್ರಥಮಾಂ ಶಾಖಾಂ ದ್ವಿತೀಯಾಮಗ್ನಿಮಾಠರಂ ।**
**ಪಾರಾಶರಂ ತೃತೀಯಂ ತು ಯಾಜ್ಞವಲ್ಕ್ಯಮಥಾಪರಾಂ ॥ ೨೬ ॥**

**ಇಂದ್ರಪ್ರಮತಿರೇಕಾಂ ತು ಸಂಹಿತಾಂ ದ್ವಿಜಸತ್ತಮಃ ।**
**ಅಧ್ಯಾಪಯನ್ಮಹಾಭಾಗಂ ಮಾರ್ಕಂಡೇಯಂ ಯಶಸ್ವಿನಂ ॥ ೨೭ ॥**

---

೨೪. ಮಹಾಜ್ಞಾನಿಯಾದ ಪೈಲಮುನಿಯು ಋಗ್ವೇದವನ್ನು ಗುರುಗಳಿಂದ ಸ್ವೀಕರಿಸಿ, ಅವನ್ನು ಎರಡು ಭಾಗವಮಾಡಿ, ಯುದ್ಧಕಾಲದಲ್ಲಿ ಇಬ್ಬರು ಶಿಷ್ಯರಿಗೆ ಉಪದೇಶಮಾಡಿದರು.

೨೫. ಹೀಗೆ ಪ್ರಭುವಾದ ಪೈಲಮಹರ್ಷಿಯು ಆ ಋಗ್ವೇದದಲ್ಲಿ ಒಂದು ಭಾಗವನ್ನು ಇಂದ್ರಪ್ರಮತಿಯೆಂಬ ಶಿಷ್ಯನಿಗೂ, ಎರಡನೆಯ ಭಾಗವನ್ನು ಬಾಷ್ಕಲನೆಂಬವನಿಗೂ ಉಪದೇಶಮಾಡಿದನು. ಅವರಿಬ್ಬರಲ್ಲಿ ಬ್ರಾಹ್ಮಣೋತ್ತಮನಾದ ಬಾಷ್ಕಲಮುನಿಯು ತಾನು ತಿಳಿದಿರುವ ಋಗ್ವೇದದ ಭಾಗವನ್ನು ನಾಲ್ಕು ಸಂಹಿತೆಗಳನ್ನಾಗಿಮಾಡಿ, ಹಿತಚಿಂತಕರೂ ಗುರುಸೇವಾನಿರತರೂ ಆದ ನಾಲ್ವರು ಶಿಷ್ಯರಿಗೆ ಉಪದೇಶಮಾಡಿದನು.

೨೬. ದ್ವಿಜೋತ್ತಮನಾದ ಬಾಷ್ಕಲಿಯು ಪ್ರಥಮ ಸಂಹಿತೆಯನ್ನು ಬೋಧಮುನಿಗೂ, ದ್ವಿತೀಯ ಶಾಖೆಯನ್ನು ಅಗ್ನಿಮಾಠರನಿಗೂ, ಮೂರನೆಯ ಶಾಖೆಯನ್ನು ಪಾರಾಶರರಿಗೂ, ನಾಲ್ಕನೆಯಭಾಗವನ್ನು ಯಾಜ್ಞವಲ್ಕ್ಯರಿಗೂ ಉಪದೇಶಮಾಡಿದನು.

೨೭. ಬ್ರಾಹ್ಮಣೋತ್ತಮನಾದ ಇಂದ್ರಪ್ರಮಿತಿಯು ಒಂದು ಸಂಹಿತೆಯನ್ನು ಮಹಾಭಾಗ್ಯಶಾಲಿಯೂ, ಕೀರ್ತಿವಂತನೂ ಆದ ಮಾರ್ಕಂಡೇಯನಿಗೆ ಉಪದೇಶಮಾಡಿದನು.

ಸತ್ಯಶ್ರವಸಮುಗ್ರ್ಯಂ ತು ಪುತ್ರಂ ಸ ತು ಮಹಾಯಶಾಃ ।
ಸತ್ಯಶ್ರವಾಃ ಸತ್ಯಹಿತಂ ಪುನರಧ್ಯಾಪಯದ್ದ್ವಿಜಃ ॥ ೨೮ ॥

ಸೋಽಪಿ ಸತ್ಯತರಂ ಪುತ್ರಂ ಪುನರಧ್ಯಾಪಯದ್ವಿಭುಃ ।
ಸತ್ಯಶ್ರಿಯಂ ಮಹಾತ್ಮಾನಂ ಸತ್ಯಧರ್ಮಪರಾಯಣಂ ॥ ೨೯ ॥

ಅಭವಂಸ್ತಸ್ಯ ಶಿಷ್ಯಾ ವೈ ತ್ರಯಸ್ತು ಸುಮಹೌಜಸಃ ।
ಸತ್ಯಶ್ರಿಯಸ್ತು ವಿದ್ವಾಂಸಃ ಶಾಸ್ತ್ರಗ್ರಹಣತತ್ಪರಾಃ ॥ ೩೦ ॥

ಶಾಕಲ್ಯಃ ಪ್ರಥಮಸ್ತೇಷಾಂ ತಸ್ಮಾದನ್ಯೋ ರಥಂತರಃ ।
ಬಾಷ್ಕಲಿಶ್ಚ ಭರದ್ವಾಜ ಇತಿ ಶಾಖಾಪ್ರವರ್ತಕಾಃ ॥ ೩೧ ॥

---

೨೮ ಆ ಮಾರ್ಕಂಡೇಯನೂ ಕೂಡ ಕೀರ್ತಿವಂತನಾಗಿ ಅತ್ಯುತ್ತಮನಾದ ಸತ್ಯಶ್ರವಸನಿಗೆ ಉಪದೇಶಮಾಡಿದನು. ಆ ಬ್ರಾಹ್ಮಣೋತ್ತಮನಾದ ಸತ್ಯಶ್ರವಸ್ಸು, ಸತ್ಯಹಿತನಿಗೆ ಉಪದೇಶಿಸಿದನು.

೨೯. ಸಮರ್ಥನಾದ ಆ ಸತ್ಯಹಿತನು ಪುತ್ರನಾದ ಸತ್ಯತರನಿಗೆ ಉಪದೇಶಿಸಿದನು. ಅವನೂ ಕೂಡ ಮಹಾತ್ಮನೂ, ಸತ್ಯಧರ್ಮಪರಾಯಣನೂ ಆದ ಸತ್ಯಶ್ರಿಯನಿಗೆ ಉಪದೇಶಮಾಡಿದನು.

೩೦. ಮಹಾತೇಜಸ್ವಿಯೂ, ಜ್ಞಾನಿಯೂ ಆದ ಸತ್ಯಶ್ರಿಯನಿಗೆ ಮಹಾತೇಜಸ್ವಿಗಳೂ, ಶಾಸ್ತ್ರಗ್ರಹಣಪರಾಯಣರೂ, ವಿದ್ವಾಂಸರೂ ಆದ ಮೂವರು ಶಿಷ್ಯರಿದ್ದರು.

೩೧. ಅವರಲ್ಲಿ ಮೊದಲನೆಯವನು ಶಾಕಲ್ಯನು, ಎರಡನೆಯವನು ರಥಂತರನು ಬಾಷ್ಕಲಿವಂಶೋದ್ಭೂತನಾದ ಭರದ್ವಾಜನು ಮೂರನೆಯವನು. ಈ ಮೂವರು ಶಿಷ್ಯರೂ ಶಾಖಾಪ್ರವರ್ತಕರೂ, ಲೋಕವಿಖ್ಯಾತರೂ ಆಗಿರುವರು.

**ದೇವಮಿತ್ರಸ್ತು ಶಾಕಲ್ಯೋ ಜ್ಞಾನಾಹಂಕಾರಗರ್ವಿತಃ ।**
**ಜನಕಸ್ಯ ಸ ಯಜ್ಞೇ ವೈ ವಿನಾಶಮುಗಮದ್ದ್ವಿಜಾಃ ॥ ೩೨ ॥**

**॥ ಶಾಂಶಪಾಯನ ಉವಾಚ ॥**

**ಕಥಂ ವಿನಾಶಮಗಮತ್ಸ ಮುನಿರ್ಜ್ಞಾನಗರ್ವಿತಃ ।**
**ಜನಕಸ್ಯಾಶ್ವಮೇಧೇನ ಕಥಂ ವಾದೋ ಬಭೂವ ಹ ॥ ೩೩ ॥**

**ಕಿಮರ್ಥಂ ಚಾಭವದ್ವಾದಃ ಕೇನ ಸಾರ್ಧ ಮಥಾಪಿ ವಾ ।**
**ಸರ್ವಮೇತದ್ಯಥಾವೃತ್ತಮಾಚಕ್ಷ್ವ ವಿಧಿತಂ ತವ ॥**
**ಋಷೀಣಾಂ ತು ವಚಃ ಶ್ರುತ್ವಾ ತದುತ್ತರಮಥಾಬ್ರವೀತ್ ॥ ೩೪ ॥**

---

೩೨. ಶಾಕಲ್ಯಗೋತ್ರೋತ್ಪನ್ನನಾದ ದೇವಮಿತ್ರನೆಂಬ ಬ್ರಾಹ್ಮಣನು ಜ್ಞಾನಾಹಂಕಾರಗಳಿಂದ ಗರ್ವಿಷ್ಟನಾಗಿ ಸತ್ಯಪರಾಯಣನಾದ ಜನಕರಾಜನ ಯಾಗದಲ್ಲಿ ವಿನಾಶವನ್ನು ಹೊಂದಿದನು.

೩೩. ಶಾಂಶಪಾಯನಮುನಿಯು ಹೇಳಿದನು:-ಎಲೈ ಸೂತಮಹಾಮುನಿಯೇ, ಜ್ಞಾನಗರ್ವಿಷ್ಟನಾದ ಆ ದೇವಮಿತ್ರನು ಜನಕಮಹಾರಾಜನ ಅಶ್ವಮೇಧಯಾಗದಲ್ಲಿ ಹೇಗೆ ವಿನಾಶವನ್ನು ಹೊಂದಿದನು. ಆ ಯಾಗದಲ್ಲಿ ವಿವಾದವು ಉಂಟಾಗಲು ಕಾರಣವೇನು. ಈ ವಿಷಯವನ್ನು ತಿಳಿಸಬೇಕೆಂದು ಕೇಳಿದರು

೩೪. ಎಲೈ ಮುನಿಯೇ, ಜನಕರಾಜನ ಯಾಗದಲ್ಲಿ ವಿವಾದವಾಗಲು ಕಾರಣವೇನು ? ಯಾರ ಸಂಗಡ ವಿವಾದವಾಯಿತು ? ವಿವಾದದ ಮುಖ್ಯ ವಿಷಯವು ಆವುದು ? ಈ ವೃತ್ತಾಂತವನ್ನೆಲ್ಲವನ್ನೂ ಯಥಾಸ್ಥಿತವಾಗಿ ತಾವು ಹೇಳಬೇಕು. ತಾವು ಮಹಾಜ್ಞಾನಿಗಳಾಗಿರುವಿರಿ, ಎಲ್ಲವನ್ನೂ ತಿಳಿದಿರುತ್ತೀರಿ ಎಂದು ಹೇಳಿದರು. ಹೀಗೆ ಮಹರ್ಷಿಗಳ ಮಾತನ್ನು ಕೇಳಿ ಸೂತಮಹಾಮುನಿಯು ಆ ಮಹರ್ಷಿಗಳಿಗೆ ವಕ್ಷ್ಯಮಾಣರೀತಿಯಾಗಿ ಉತ್ತರವನ್ನು ಕೊಟ್ಟನು.

॥ ಸೂತ ಉವಾಚ ॥

ಜನಕಸ್ಯಾಶ್ವಮೇಧೇ ತು ಮಹಾನಾಸೀತ್ಸಮಾಗಮಃ ।
ಋಷೀಣಾಂ ತು ಸಹಸ್ರಾಣಿ ತತ್ರ ಜಗ್ಮುರನೇಕಶಃ ॥
ರಾಜರ್ಷೇರ್ಜನಕಸ್ಯಾಥ ತಂ ಯಜ್ಞಂ ಹಿ ದಿದೃಕ್ಷವಃ ॥ ೩೫ ॥

ಆಗತಾನ್ ಬ್ರಾಹ್ಮಣಾನ್ ದೃಷ್ಟ್ವಾ ಜಿಜ್ಞಾಸಾಸ್ಯಾಭವತ್ತತಃ ।
ಕೋ ನ್ವೇಷಾಂ ಬ್ರಾಹ್ಮಣಃ ಶ್ರೇಷ್ಠಃ ಕಥಂ ಮೇ ನಿಶ್ಚಯೋ ಭವೇತ್ ॥
ಇತಿ ನಿಶ್ಚಿತ್ಯ ಮನಸಾ ಬುದ್ಧಿಂ ಚಕ್ರೇ ಜನಾಧಿಪಃ ॥ ೩೬ ॥

ಗವಾಂ ಸಹಸ್ರಮಾದಾಯ ಸುವರ್ಣಮಧಿಕಂ ತತಃ ।
ಗ್ರಾಮಾನ್ ರತ್ನಾನಿ ದಾಸಾಂಶ್ಚ ಮುನೀನ್ ಪ್ರಾಹ ನರಾಧಿಪಃ ॥
ಸರ್ವಾನಹಂ ಪ್ರಪನ್ನೋಽಸ್ಮಿ ಶಿರಸಾ ಶ್ರೇಷ್ಠಭಾಗಿನಃ ॥ ೩೭ ॥

---

೩೫. ಸೂತಮುನಿಯು ಹೇಳಿದನು:–ರಾಜರ್ಷಿಯಾದ ಜನಕಮಹಾರಾಜನ ಅಶ್ವಮೇಧಯಾಗದಲ್ಲಿ ಮಹಾಕೋಲಾಹಲವಾಯಿತು. ಆ ಅಶ್ವಮೇಧಯಾಗವನ್ನು ನೋಡುವುದಕ್ಕಾಗಿ ಅನೇಕ ಸಹಸ್ರಸಂಖ್ಯಾಕರಾದ ಮಹರ್ಷಿಗಳು ಬಂದಿದ್ದರು. ಜನಕನ ಅಶ್ವಮೇಧಯಾಗಕ್ಕೆ ಅನೇಕ ಸಹಸ್ರಜನಗಳು ಬಂದಿದ್ದರಿಂದ ಮಹಾ ಕೋಲಾಹಲವಾಯಿತು.

೩೬. ಆಗ ಜನಕಮಹಾರಾಜನು ಬಂದಿರುವ ಅಸಂಖ್ಯಾಕರಾದ ಬ್ರಾಹ್ಮಣರನ್ನು ನೋಡಿ ತನ್ನ ಮನಸ್ಸಿನಲ್ಲಿ ಹೀಗೆ ಆಲೋಚನೆಮಾಡಿದನು. ಇವರಲ್ಲಿ ಉತ್ತಮರಾದ ಬ್ರಾಹ್ಮಣರು ಯಾರು. ಇವರಲ್ಲಿ ಯಾರು ಶ್ರೇಷ್ಠರು ಎಂಬುದಾಗಿ ಜನಕಮಹಾರಾಜನು ಆಲೋಚನೆಮಾಡಿದನು.

೩೭ ಆಗ ಜನಕರಾಜನು ಸಹಸ್ರಾರು ಗೋವುಗಳನ್ನೂ, ಅತ್ಯಧಿಕವಾದ ಸುವರ್ಣರಾಶಿಯನ್ನೂ, ಗ್ರಾಮಗಳು, ರತ್ನಗಳು, ದಾಸರು, ಇವೇ ಮೊದಲಾದ ಸರ್ವವನ್ನೂ ತೆಗೆದುಕೊಂಡು ಬಂದು ಮಹರ್ಷಿಗಳಿಗೆ ಶಿರಸಾ ವಂದನೆಮಾಡಿ ಇಂತೆಂದನು.

ಯದೇತದಾಹೃತಂ ವಿತ್ತಂ ಯೋ ವಃ ಶ್ರೇಷ್ಠತಮೋ ಭವೇತ್ ।
ತಸ್ಮೈ ತದುಪನೀತಂ ಹಿ ವಿದ್ಯಾವಿತ್ತಂ ದ್ವಿಜೋತ್ತಮಾಃ ॥ ೩೮ ॥

ಜನಕಸ್ಯ ವಚಃ ಶ್ರುತ್ವಾ ಮುನಯಸ್ತೇ ಶ್ರುತಿಕ್ಷಮಾಃ ।
ದೃಷ್ಟ್ವಾ ಧನಂ ಮಹಾಸಾರಂ ಧನವೃದ್ಧ್ಯಾ ಜಿಘೃಕ್ಷವಃ ॥
ಶ್ರದ್ಧಯಾಂಚಕ್ರುರನ್ಯೋನ್ಯಂ ವೇದಜ್ಞಾನಮದೋಲ್ಬಣಾಃ ॥ ೩೯ ॥

ಮನಸಾ ಗತವಿತ್ತಾಸ್ತೇ ಮಮೇದಂ ಧನಮಿತ್ಯುತ ।
ಮಮ್ಯೈವೈತನ್ನ ವೇತ್ಯನ್ಯೋ ಬ್ರೂಹಿ ಕಿಂ ವಾ ವಿಕಲ್ಪ್ಯತೇ ॥
ಇತ್ಯೇವಂ ಧನದೋಷೇಣ ವಾದಾಂಶ್ಚಕ್ರುರನೇಕಶಃ ॥ ೪೦ ॥

ತಥಾನ್ಯಸ್ತತ್ರ ವೈ ವಿದ್ವಾನ್ ಬ್ರಹ್ಮವಾಹಸುತಃ ಕವಿಃ ।
ಯಾಜ್ಞವಲ್ಕ್ಯೋ ಮಹಾತೇಜಾಸ್ತಪಸ್ವೀ ಬ್ರಹ್ಮವಿತ್ತಮಃ ॥ ೪೧ ॥

---

೩೮. ಎಲೈ ಮಹರ್ಷಿಗಳಿರಾ, ಈಗ ನಾನು ಯಾವ ದ್ರವ್ಯರಾಶಿಯನ್ನು ನಿಮ್ಮ ಮುಂದೆ ಇರಿಸಿರುತ್ತೇನೆಯೋ ಇವೆಲ್ಲವನ್ನೂ ನಿಮ್ಮಲ್ಲಿ ಯಾರು ಜ್ಞಾನದಲ್ಲಿ ಶ್ರೇಷ್ಠರೋ ಅವರಿಗೆ ಕೊಡಬೇಕೆಂದು ಸಂಕಲ್ಪಿಸಿರುತ್ತೇನೆ. ವಿದ್ಯೆಯಿಂದಲೇ ಉತ್ತಮಾಧಮ ಭಾವವು ವ್ಯಕ್ತವಾಗುವುದು. ಆದುದರಿಂದ ನಿಮ್ಮಲ್ಲಿ ಯಾರು ಜ್ಞಾನೋತ್ತಮರೋ ಅವರು ಇವೆಲ್ಲವನ್ನೂ ಸ್ವೀಕರಿಸಬಹುದು ಎಂದು ಹೇಳಿದನು.

೩೯. ಶಾಸ್ತ್ರಜ್ಞರಾದ ಮುನಿಗಳು, ಜನಕರಾಜನ ಮಾತನ್ನು ಕೇಳಿದ ತರುವಾಯ ಆ ಧನರಾಶಿಯನ್ನು ನೋಡಿ ಆಶೆಗೊಂಡು, ಅದನ್ನು ಸ್ವೀಕರಿಸಲಿಚ್ಛೆಯಿಂದ ವೇದಜ್ಞಾನದಿಂದ ಗರ್ವಿಷ್ಠರಾಗಿ ಪರಸ್ಪರ ವಿವಾದದಲ್ಲಿ ಉದ್ಯುಕ್ತರಾದರು.

೪೦. ಆ ಮಹರ್ಷಿಗಳೆಲ್ಲರೂ ಮನಸ್ಸಿನಲ್ಲಿ ಈ ಹಣರಾಶಿಯೆಲ್ಲವೂ ತಮ್ಮದೆಂದು ಆಲೋಚಿಸಿ, ಎಲೈ ಮುನಿಗಳೇ, ಈ ಧನರಾಶಿಗಳೆಲ್ಲವೂ ನನ್ನದಾಗಿದೆ. ಇದನ್ನು ಇತರರು ಹೊಂದಲು ಅರ್ಹರಲ್ಲ. ಈ ವಿಷಯದಲ್ಲಿ ನೀವೇನು ಹೇಳುವಿರಿ ಎಂದು ಧನಲೋಭದಿಂದ ಅನ್ಯೋನ್ಯವಾಗಿ ವಿವಾದವನ್ನು ಮಾಡಲುದ್ಯುಕ್ತರಾದರು.

೪೧-೪೩. ಹೀಗೆ ಆ ಮಹರ್ಷಿಗಳು ಹೇಳಲು, ಅವರಲ್ಲೊಬ್ಬನೂ, ವಿದ್ವಾಂಸನೂ ಬ್ರಹ್ಮವಾಹನಪುತ್ರನೂ, ಕವಿಯೂ, ಮಹಾತೇಜಸ್ವಿಯೂ, ತಪಸ್ವಿಯೂ, ಬ್ರಹ್ಮಜ್ಞಾನಿಗಳಲ್ಲಿ ಉತ್ತಮನೂ, ಬ್ರಹ್ಮದೇವನ ಅಂಗಸಂಭೂತನೂ ಆದ ಯಾಜ್ಞವಲ್ಕ್ಯನು

ಬ್ರಹ್ಮಣೋಂಗಾತ್ ಸಮುತ್ಪನ್ನೋ ವಾಕ್ಯಂ ಪ್ರೋವಾಚ ಸುಸ್ವರಂ।
ಶಿಷ್ಯಂ ಬ್ರಹ್ಮವಿದಾಂ ಶ್ರೇಷ್ಠೋ ಧನಮೇತದ್ಗ್ರಹಾಣ ಭೋ ॥ ೪೨ ॥

ನಯಸ್ವ ಚ ಗೃಹಂ ವತ್ಸ ಮನ್ಯೈತನ್ನಾತ್ರ ಸಂಶಯಃ।
ಸರ್ವವೇದೇಷ್ವಹಂ ವಕ್ತಾ ನಾನ್ಯಃ ಕಶ್ಚಿತ್ತು ಮತ್ಸಮಃ ॥
ಯೋ ವಾ ನ ಪ್ರೀಯತೇ ವಿಪ್ರಃ ಸ ಮೇ ಹ್ವಯ ತು ಮಾಚಿರಂ ॥ ೪೩ ॥

ತತೋ ಬ್ರಹ್ಮಾರ್ಣವಃ ಕ್ಷುಬ್ಧಃ ಸಮುದ್ರ ಇವ ಸಂಪ್ಲವೇ।
ತಾನುವಾಚ ತತಃ ಸ್ವಸ್ಥೋ ಯಾಜ್ಞವಲ್ಕ್ಯೋ ಹಸನ್ನಿವ ॥ ೪೪ ॥

ಕ್ರೋಧಂ ಮಾಕಾರ್ಷುರ್ವಿದ್ವಾಂಸೋ ಭವಂತಃ ಸತ್ಯವಾದಿನಃ।
ವದಾಮಹೇ ಯಥಾಯುಕ್ತಂ ಜಿಜ್ಞಾಸಂತಃ ಪರಸ್ಪರಂ ॥ ೪೫ ॥

---

ತನ್ನ ಶಿಷ್ಯನನ್ನು ಕುರಿತು ಎಲೈ ಶಿಷ್ಯನೇ, ಈ ಧನರಾಶಿಯು ನನ್ನದಾಗಿದೆ. ಇದನ್ನು ನೀನು ತೆಗೆದುಕೋ. ನಮ್ಮ ಮನೆಗೆ ತೆಗೆದುಕೊಂಡುಹೋಗು ಈ ವಿಷಯದಲ್ಲಿ ಸಂದೇಹ ಬೇಡ. ನಾನು ಸರ್ವ ವೇದಶಾಸ್ತ್ರಗಳಲ್ಲಿ ಪಾರಂಗತನಾಗಿರುವೆನು. ನನಗೆ ಸಮರು ಇಲ್ಲಿ ಯಾರೂ ಇರುವುದಿಲ್ಲ. ಈ ವಿಷಯವನ್ನು ಯಾರು ಒಪ್ಪುವುದಿಲ್ಲವೋ ಅವರನ್ನು ವಿವಾದಕ್ಕೆ ಬೇಗನೇ ಕರೆ ಎಂದು ಗಟ್ಟಿಯಾಗಿ ಘರ್ಜಿಸಿ, ನನಗೆ ಈ ಮಹಾಸಭೆಯಲ್ಲಿ ಜಯವಾಗುವುದು ಸಂದೇಹವಿಲ್ಲವೆಂದು ಘೋಷಿಸಿದನು.

೪೪. ಅನಂತರ ಯಾಜ್ಞವಲ್ಕ್ಯರ ಆ ಮಾತನ್ನು ಕೇಳಿದ ಕೂಡಲೇ ಬ್ರಾಹ್ಮಣ ಸಂಘವೇ ಪ್ರಳಯಕಾಲದ ಸಮುದ್ರದಂತೆ ಅಲ್ಲೋಲಕಲ್ಲೋಲವಾಯಿತು. ಹೀಗೆ ಕುಪಿತರಾದ ವಿಪ್ರರನ್ನು ನೋಡಿ ಯಾಜ್ಞವಲ್ಕ್ಯರು ನಗುತ್ತಾ ಸ್ವಸ್ಥಚಿತ್ತರಾಗಿ ಇಂತೆಂದರು.

೪೫. ಎಲೈ ವಿಪ್ರವರ್ಯರೇ, ನೀವು ವಿದ್ವಾಂಸರೂ ಸತ್ಯವಾದಿಗಳೂ ಆಗಿರುವುದರಿಂದ ಕೋಪಮಾಡುವುದು ಉಚಿತವಲ್ಲ. ನಾನು ಯಥಾರ್ಥವಾದ ಮಾತನ್ನು ಹೇಳುತ್ತೇನೆ. ನೀವು ಅನ್ಯೋನ್ಯವಾಗಿ ವಿಚಾರಮಾಡಿರಿ ಎಂದರು.

ತತೋಭ್ಯುಪಾಗಮಂಸ್ತೇಷಾಂ ವಾದಾ ಜಗ್ಮುರನೇಕಶಃ ।
ಸಹಸ್ರಧಾ ಶುಭೈರರ್ಥೈಃ ಸೂಕ್ಷ್ಮದರ್ಶನಸಂಭವೈಃ ॥ ೪೬ ॥

ಲೋಕೇ ವೇದೇ ತಥಾಧ್ಯಾತ್ಮೇ ವಿದ್ಯಾಸ್ಥಾನೈರಲಂಕೃತಾಃ ।
ಶಾಪೋತ್ತಮಗುಣೈರ್ಯುಕ್ತಾ ನೃಪೌಘಪರಿವರ್ಜನಾಃ ॥
ವಾದಾಃ ಸಮಭವಂಸ್ತತ್ರ ಧನಹೇತೋರ್ಮಹಾತ್ಮನಾಂ ॥ ೪೭ ॥

ಋಷಯಸ್ತ್ವೇಕತಃ ಸರ್ವೇ ಯಾಜ್ಞವಲ್ಕ್ಯೇನ ಧೀಮತಾ ।
ಏಕೈಕಶಸ್ತತಃ ಪೃಷ್ಟ್ವಾ ನೈವೋತ್ತರಮಥಾಬ್ರುವನ್ ॥ ೪೮ ॥

---

೪೬. ಅನಂತರ ಆ ವಿಪ್ರವರ್ಯರೆಲ್ಲರೂ ಆ ಮಾತನ್ನು ಒಪ್ಪಿದರು. ತರುವಾಯ ಅವರಿಗೆ ಅನೇಕ ವಿಧಗಳಲ್ಲಿ ವಾದವಿವಾದಗಳು ಉಂಟಾದುವು. ಅತ್ಯಂತ ಸೂಕ್ಷ್ಮವಿಷಯಕವೂ ಅನೇಕವಿಧವೂ ಶುಭಾರ್ಥರೂಪವೂ ಆದ ತತ್ತ್ವಗಳ ವಿಷಯ ದಲ್ಲಿಯೂ, ಲೌಕಿಕ ವ್ಯವಹಾರದಲ್ಲಿಯೂ, ವೇದಗಳಲ್ಲಿಯೂ, ಅಧ್ಯಾತ್ಮವಿಚಾರ ದಲ್ಲಿಯೂ ಬಹಳವಾಗಿ ಚರ್ಚೆಗಳುಂಟಾದುವು.

೪೭. ಅನೇಕ ವಿದ್ಯಾಪೀಠಗಳಲ್ಲಿ ಅಲಂಕೃತರೂ, ಶಾಪಾನುಗ್ರಹಶಕ್ತರೂ, ಗುಣೋತ್ತಮರೂ, ಮಹಾತ್ಮರೂ ಆದ ಮಹರ್ಷಿಗಳಿಗೆ ಯಾಜ್ಞವಲ್ಕ್ಯರ ಸಂಗಡ ವಿವಾದವು ಉಂಟಾಯಿತು. ಆ ವಿವಾದವಲ್ಲಿ ರಾಜರು ಭಾಗಿಯಾಗಿರದೇ ಕೇವಲ ಪ್ರೇಕ್ಷಕರಾಗಿದ್ದರು. ಹೀಗೆ ಆ ಧನನಿಮಿತ್ತವಾಗಿ ಮಹರ್ಷಿಗಳಿಗೆ ತತ್ವಾದಿಗಳಲ್ಲಿ ಜಿಜ್ಞಾಸೆಯುಂಟಾಯಿತು.

೪೮. ಅನಂತರ ಸಮಸ್ತರಾದ ಮುನಿಗಳು ಒಂದು ಭಾಗದಲ್ಲಿಯೂ ಯಾಜ್ಞ ವಲ್ಕ್ಯರು ಮತ್ತೊಂದು ಭಾಗದಲ್ಲಿಯೂ, ವಿವಾದಕ್ಕಾಗಿ ಕೂತುಕೊಂಡರು. ತರುವಾಯ ಆ ಮುನಿಗಳಿಗೂ ಜ್ಞಾನಿಯಾದ ಯಾಜ್ಞವಲ್ಕ್ಯರಿಗೂ ವಿಚಾರಗಳು ಸಂಭವಿಸಿ ಪ್ರತಿಯೊಬ್ಬ ಮುನಿಯೂ ಯಾಜ್ಞವಲ್ಕ್ಯರನ್ನು ಆಗ್ರಹದಿಂದ ಪ್ರಶ್ನೆಮಾಡಿದರು. ಆಗ ಯಾಜ್ಞವಲ್ಕ್ಯರು ಅವರಿಗೆ ಪ್ರತ್ಯೇಕವಾಗಿ ಉತ್ತರವನ್ನು ಕೊಡಲು ಮುನಿಗಳು ಶಾಂತರಾದರು.

ತಾನ್ವಿಜಿತ್ಯ ಮುನೀನ್ ಸರ್ವಾನ್ ಬ್ರಹ್ಮರಾಶಿರ್ಮಹಾದ್ಯುತಿಃ ।
ಶಾಕಲ್ಯಮಿತಿ ಹೋವಾಚ ವಾದಕರ್ತಾರಮಂಜಸಾ ॥ ೪೯ ॥

ಶಾಕಲ್ಯ ವದ ವಕ್ತವ್ಯಂ ಕಿಂ ಧ್ಯಾಯನ್ನವತಿಷ್ಠಸೇ ।
ಪೂರ್ಣಸ್ತ್ವಂ ಜಡಮಾನೇನ ವಾತಾಧ್ಮಾತೋ ಯಥಾ ಧೃತಿಃ ॥ ೫೦ ॥

ಏವಂ ಸ ಧರ್ಷಿತಸ್ತೇನ ರೋಷಾತ್ತಾಮ್ರಾಸ್ಯಲೋಚನಃ ।
ಪ್ರೋವಾಚ ಯಾಜ್ಞವಲ್ಕ್ಯಂ ತಂ ಪುರುಷಂ ಮುನಿಸನ್ನಿಧೌ ॥ ೫೧ ॥

ತ್ವಮಸ್ಮಾಂಸ್ತೃಣವತ್ಯಕ್ತ್ವಾ ತಥೈವೇಮಾನ್ ದ್ವಿಜೋತ್ತಮಾನ್ ।
ವಿದ್ಯಾಧನಂ ಮಹಾಸಾರಂ ಸ್ವಯಂ ಗ್ರಾಹಂ ಜಿಘೃಕ್ಷಸಿ ॥ ೫೨ ॥

ಶಾಕಲ್ಯೇನೈವಮುಕ್ತಃ ಸ್ಯಾದ್ಯಾಜ್ಞವಲ್ಕ್ಯಃ ಸಮಬ್ರವೀತ್ ।
ಬ್ರಹ್ಮಿಷ್ಠಾನಾಂ ಬಲಂ ವಿದ್ಧಿ ವಿದ್ಯಾ ತತ್ತ್ವಾರ್ಥದರ್ಶನಂ ॥ ೫೩ ॥

---

೪೯. ಹೀಗೆ ಬ್ರಹ್ಮಜ್ಞಾನಿಗಳೂ, ತೇಜೋರಾಶಿಗಳೂ ಆದ ಯಾಜ್ಞವಲ್ಕ್ಯರು ಆ ವಿವಾದದಲ್ಲಿ ಸಮಸ್ತ ಮುನಿಗಳನ್ನೂ ಜಯಿಸಿ, ಬಹಳವಾಗಿ ವಿಚಾರವಾಡ ್ತ ಶಾಕಲ್ಯಮುನಿಯನ್ನು ಕುರಿತು ಇಂತೆಂದರು.

೫೦. ಅನಂತರ ಯಾಜ್ಞವಲ್ಕ್ಯನು ವಾದಶೂರನಾದ ಶಾಕಲ್ಯನನ್ನು ಕುರಿತು ಎಲೈ ವಿಪ್ರೋತ್ತಮನೇ, ನೀನು ನನ್ನ ಪ್ರಶ್ನೆಗೆ ಉತ್ತರವನ್ನು ಹೇಳದೆ ಏನನ್ನೋ ಯೋಚಿಸುತ್ತಾ ಖಸೂಚಿಯಾಗಿರುತ್ತೀಯೆ. ನೀನೀ ಗಾಳಿಯಿಂದ ತುಂಬಿದ ತಿದಿಯಂತೆ ಅಜ್ಞಾನಮಯನಾಗಿರುತ್ತೀಯೆ. ನ್ಯಾಯವಾದ ಉತ್ತರವನ್ನು ಕೊಡು ಎಂದು ಕೇಳಿದನು.

೫೧. ಹೀಗೆ ಯಾಜ್ಞವಲ್ಕ್ಯನಿಂದ ತಿರಸ್ಕೃತನೂ, ಕೆಂಪಾದ ಕಣ್ಣುಗಳುಳ್ಳವನೂ ಆದ ಶಾಕಲ್ಯಮುನಿಯು ಆ ಮಹರ್ಷಿಗಳ ಸಭೆಯಲ್ಲಿ ಯಾಜ್ಞವಲ್ಕ್ಯರನ್ನು ಕುರಿತು ಕಠಿಣ ಭಾಷೆಗಳಿಂದ ದೂಷಿಸಿದನು.

೫೨-೫೩. ಎಲೈ ವಿಪ್ರೋತ್ತಮನೇ, ನೀನು ಈ ಸಭೆಯಲ್ಲಿ ನೆರದಿರುವ ಬ್ರಹ್ಮಜ್ಞಾನಿಗಳಾದ ಮುನಿಗಳೆಲ್ಲರನ್ನೂ ತೃಣಪ್ರಾಯರನ್ನಾಗಿ ಭಾವಿಸಿ, ತಿರಸ್ಕಾರಮಾಡಿ, ವಿದ್ಯಾಶುಲ್ಕವಾದ ಈ ದ್ರವ್ಯರಾಶಿಯನ್ನು ನೀನೊಬ್ಬನೇ ಸ್ವೀಕರಿಸಲಿಚ್ಛಿಸುತ್ತೀಯೆ ಇದು ನ್ಯಾಯವಲ್ಲವೆಂದು ಶಾಕಲ್ಯನು ಹೇಳಿದನು.

ಕಾಮಶ್ಚಾರ್ಥೇನ ಸಂಬದ್ಧಸ್ತೇನಾರ್ಥಂ ಕಾಮಯಾಮಹೇ ।
ಕಾಮಪ್ರಶ್ನಧನಾ ವಿಪ್ರಾಃ ಕಾಮಪ್ರಶ್ನಾನ್ವದಾಮಹೇ ॥ ೫೪ ॥

ಪಣಶ್ಚೈಷೋಽಸ್ಯ ರಾಜರ್ಷೇಸ್ತಸ್ಮಾನ್ನೀತಂ ಧನಂ ಮಯಾ ।
ಏತಚ್ಛ್ರುತ್ವಾ ವಚಸ್ತಸ್ಯ ಶಾಕಲ್ಯಃ ಕ್ರೋಧಮೂರ್ಛಿತಃ ॥
ಯಾಜ್ಞವಲ್ಕ್ಯಮಥೋವಾಚ ಕಾಮಪ್ರಶ್ನಾರ್ಥಮುದ್ವಚಃ ॥ ೫೫ ॥

ಬ್ರೂಹೀದಾನೀಂ ಮಯೋದ್ದಿಷ್ಟಾನ್ ಕಾಮಪ್ರಶ್ನಾನ್ ಯಥಾರ್ಥತಃ ।
ತತಃ ಸಮಭವದ್ವಾದಸ್ತಯೋರ್ಬ್ರಹ್ಮವಿದೋರ್ಮಹಾನ್ ॥ ೫೬ ॥

---

೫೪. ಹೀಗೆ ಹೇಳಿದ ಶಾಕಲ್ಯನ ಮಾತುಗಳನ್ನು ಕೇಳಿದ ಯಾಜ್ಞವಲ್ಕ್ಯನು ಈ ದ್ರವ್ಯರಾಶಿಯು ಪಂಡಿತರ ಜ್ಞಾನದ ಬಲಾಬಲವನ್ನು ಸೂಚಿಸುತ್ತದೆ. ವಿದ್ಯಾ ಶುಲ್ಕವನ್ನು ಜ್ಞಾನಾಧಿಕ್ಯದಿಂದಲೇ ಪಡೆಯಬೇಕು. ಅರ್ಥಕಾಮಗಳಿಗೆ ಪರಸ್ಪರ ಸಂಬಂಧವಿರುತ್ತದೆ. ಆದುದರಿಂದ ನಾನು ಈ ರಾಜಶುಲ್ಕವನ್ನು ಬಯಸುತ್ತೇನೆ. ಸ್ವೇಚ್ಛೆಯಾಗಿ ಪ್ರಶ್ನೆಮಾಡತಕ್ಕ ಅಧಿಕಾರ ನಿಮಗಿದೆ. ಆದುದರಿಂದ ನೀವು ಸ್ವೇಚ್ಛೆ ಯಾಗಿ ಪ್ರಶ್ನೆಗಳನ್ನು ಕೇಳಬಹುದೆಂದನು.

೫೫. ಆಗ ಯಾಜ್ಞವಲ್ಕ್ಯನು ಈ ದ್ರವ್ಯರಾಶಿಯು ಜ್ಞಾನಪಣವಾಗಿದೆ. ಜ್ಞಾನಾಧಿಕರಿಗೆ ಈ ದ್ರವ್ಯವು ಸೇರತಕ್ಕುದೆಂದು ರಾಜಾನುಮತಿಯಿರುತ್ತದೆ. ಆದುದ ರಿಂದ ಈ ಧನವೆಲ್ಲವೂ ನನ್ನದಾಗಿದೆ. ಇದರಿಂದ ನಾನು ಒಯ್ಯುತ್ತೇನೆಂದನು. ಈ ಮಾತುಗಳನ್ನು ಕೇಳಿದ ಶಾಕಲ್ಯನು ಕೋಪಾವಿಷ್ಟನಾಗಿ ಕಾಮಾರ್ಥವಿಷಯಕವಾದ ಸಾವಿರಾರು ಪ್ರಶ್ನೆಗಳನ್ನು ಯಾಜ್ಞವಲ್ಕ್ಯನಿಗೆ ಹಾಕಿದನು.

೫೬. ಎಲೈ ಯಾಜ್ಞವಲ್ಕ್ಯಮುನಿಯೇ, ನಾನು ಹೇಳಿದ ಕಾಮವಿಷಯವಾದ ಪ್ರಶ್ನೆಗೆ ನಿಜವಾದ ಅರ್ಥವನ್ನು ಹೇಳುವನಾಗೆಂದು ಕೇಳಿದನು. ಅನಂತರ ಮಹಾ ತ್ಮರೂ, ಬ್ರಹ್ಮವಾದಿಗಳೂ ಆದ ಯಾಜ್ಞವಲ್ಕ್ಯ, ಶಾಕಲ್ಯರಿಗೆ ಮಹಾವಿವಾದವು ಪುನಃ ಪ್ರಾರಂಭವಾಯಿತು.

**ಸಾಗ್ರಂ ಪ್ರಶ್ನಸಹಸ್ರಂ ತು ಶಾಕಲ್ಯಸ್ತಮುಚೋಚುದತ್ ।**
**ಯಾಜ್ಞವಲ್ಕ್ಯೋಽಬ್ರವೀತ್ಸರ್ವಾನ್ ಋಷೀಣಾಂ ಶೃಣ್ವತಾಂ ತದಾ ॥ ೫೭ ॥**

**ಶಾಕಲ್ಯೋ ಚಾಪಿ ನಿರ್ವ್ಯಾದೇ ಯಾಜ್ಞವಲ್ಕ್ಯಸ್ತಮಬ್ರವೀತ್ ।**
**ಪ್ರಶ್ನಮೇಕಂ ಮಮಾಪಿ ತ್ವಂ ವರ ಶಾಕಲ್ಯ ಕಾಮಿಕಂ ॥**
**ಶಾಪಃ ಪಣೋಽಸ್ಯ ವಾದಸ್ಯ ಅಬ್ರುವನ್ ಮೃತ್ಯುಮಾವ್ರಜೇತ್ ॥ ೫೮ ॥**

**ಅಥ ಸನ್ನೋದಿತಂ ಪ್ರಶ್ನಂ ಯಾಜ್ಞವಲ್ಕ್ಯೇನ ಧೀಮತಾ ।**
**ಶಾಕಲ್ಯಸ್ತಮವಿಜ್ಞಾಯ ಸದ್ಯೋ ಮೃತ್ಯುಮುಪಾಪ್ನುಯಾತ್ ॥ ೫೯ ॥**

---

೫೭. ತರುವಾಯ ಶಾಕಲ್ಯನು ಸಾವಿರಾರು ಪ್ರಶ್ನೆಗಳ ಪರಂಪರೆಯನ್ನೇ ಆ ಸಭೆಯಲ್ಲಿ ಹಾಕಿದನು. ಆಗ ಯಾಜ್ಞವಲ್ಕ್ಯನು ಸಾವಿರಾರು ಮಹರ್ಷಿಗಳಿಗೆ ತಿಳಿಯುವ ಹಾಗೆಯೇ ಆ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟನು.

೫೮. ಯಾಜ್ಞವಲ್ಕ್ಯನು ಹೀಗೆ ಶಾಕಲ್ಯನ ಪ್ರಶ್ನೆಗೆ ಉತ್ತರವನ್ನು ಕೊಟ್ಟು ಎಲೈ ಶಾಕಲ್ಯಮುನಿಯೇ, ನಿನ್ನ ಸಾವಿರಾರು ಪ್ರಶ್ನೆಗಳಿಗೆ ನಾನು ಉತ್ತರವನ್ನು ಹೇಳಿರುತ್ತೇನೆ. ನಾನು ಕೇಳುವ ಒಂದು ಪ್ರಶ್ನೆಗಾದರೂ ನೀನು ಉತ್ತರವನ್ನು ಕೊಡು. ಈ ನನ್ನ ಪ್ರಶ್ನೆಗೆ ಪಣವೇನಂದರೆ—ನೀನು ಉತ್ತರವನ್ನು ಕೊಟ್ಟರೆ ನಾನು ಮೃತನಾಗುವೆನು. ನೀನು ಸಮಂಜಸವಾದ ಉತ್ತರವನ್ನು ಕೊಡದಿದ್ದರೆ ನೀನೇ ಮೃತನಾಗುವಿ. ಈ ಪ್ರಶ್ನೆಗೆ ಮರಣವೇ ಪಣವೆಂಬುದಾಗಿ ಹೇಳಿದನು.

೫೯. ಯಾಜ್ಞವಲ್ಕ್ಯನು ಹೀಗೆ ಹೇಳಿ ಒಂದು ಪ್ರಶ್ನೆಯನ್ನು ಮಾಡಿದನು. ಯಾಜ್ಞವಲ್ಕ್ಯನ ಆ ಪ್ರಶ್ನೆಗೆ ಸಮಂಜಸವಾದ ಉತ್ತರವು ಶಾಕಲ್ಯನಿಗೆ ತೋರದೇನೇ ಆ ಋಷಿವಾಕ್ಯದಂತೆ ಮರಣವನ್ನು ಕೂಡಲೇ ಹೊಂದಿದನು.

ಏವಂ ವೃತಃ ಸ ಶಾಕಲ್ಯಃ ಪ್ರಶ್ನವ್ಯಾಖ್ಯಾನಪೀಡಿತಃ ।
ಏವಂ ವಾದಶ್ಚ ಸುಮಹಾನಾಸೀತ್ತೇಷಾಂ ಧನಾರ್ಥಿಭಿಃ ॥
ಋಷೀಣಾಂ ಮುನಿಭಿಃ ಸಾರ್ಧಂ ಯಾಜ್ಞವಲ್ಕ್ಯಸ್ಯ ಚೈವ ಹಿ ॥ ೬೦ ॥

ಸರ್ವೈಃ ಪೃಷ್ಟಾಂಸ್ತು ಸಂಪ್ರಶ್ನಾನ್ ಶತಶೋಽಥ ಸಹಸ್ರಶಃ ।
ವ್ಯಾಖ್ಯಾಯ ವೈ ಮುನೇ ತೇಷಾಂ ಪ್ರಶ್ನಸಾರಂ ಮಹಾಗತಿಃ ॥ ೬೧ ॥

ಯಾಜ್ಞವಲ್ಕ್ಯೋ ಧನಂ ಗೃಹ್ಯ ಯಶೋ ವಿಖ್ಯಾಪ್ಯ ಚಾತ್ಮನಃ ।
ಜಗಾಮ ವೈ ಗೃಹಂ ಸ್ವಸ್ಥಃ ಶಿಷ್ಯೈಃ ಪರಿವೃತೋ ವಶೀ ॥ ೬೨ ॥

ದೇವಮಿತ್ರಸ್ತು ಶಾಕಲ್ಯೋ ಮಹಾತ್ಮಾ ದ್ವಿಜಸತ್ತಮಃ ।
ಚಕಾರ ಸಂಹಿತಾಃ ಪಂಚ ಬುದ್ಧಿಮಾನ್ ಪದವಿತ್ತಮಃ ॥ ೬೩ ॥

---

೬೦. ಹೀಗೆ ಮಹರ್ಷಿಗಳ ಸಭೆಯಲ್ಲಿ ಯಾಜ್ಞವಲ್ಕ್ಯನ ಪ್ರಶ್ನೆಗೆ ಉತ್ತರವನ್ನರಿಯದೇ ಶಾಕಲ್ಯಮುನಿಗೆ ಮರಣವು ಸಂಭವಿಸಿತು. ಈ ರೀತಿಯಲ್ಲಿ ಧನಾರ್ಥಿಗಳಾದ ಮಹರ್ಷಿಗಳಿಗೂ ಕೂಡ ವಿವಾದವು ಉದ್ಭವಿಸಿತು. ಸಾವಿರಾರು ಮುನಿಗಳು ಯಾಜ್ಞವಲ್ಕ್ಯನನ್ನು ಅನೇಕ ಪ್ರಶ್ನೆಗಳನ್ನು ಕೇಳಿದರು. ಅವನು ಅವುಗಳೆಲ್ಲಕ್ಕೂ ಉತ್ತರವನ್ನು ಕೊಟ್ಟನು. ಹೀಗೆ ಮುನಿಗಳಿಗೆ ಧನನಿಮಿತ್ತವಾಗಿ ಮಹಾವಿವಾದವು ಸಂಭವಿಸಿತೆಂದನು.

೬೧. ಯಾಜ್ಞವಲ್ಕ್ಯನು ಮುನಿಗಳ ಸಭೆಯಲ್ಲಿ ಸಾವಿರಾರು ಮುನಿಗಳು ಕೇಳಿದ ಪ್ರಶ್ನೆಗಳಿಗೆಲ್ಲಾ ಸದುತ್ತರವನ್ನು ಕೊಟ್ಟು, ವ್ಯಾಖ್ಯಾನವನ್ನು ಮಾಡಿ ಜಯಶಾಲಿಯಾದನು.

೬೨. ಹೀಗೆ ಜಯಶೀಲನಾದ ಯಾಜ್ಞವಲ್ಕ್ಯನು ಆ ಋಷಿಮಂಡಲದಲ್ಲಿ ಕೀರ್ತಿಯನ್ನು ಪಡೆದು ಧನರಾಶಿಯನ್ನು ಶಿಷ್ಯರಿಂದ ತೆಗೆಸಿಕೊಂಡು ಕೀರ್ತಿವಂತನಾಗಿ ಶಿಷ್ಯರ ಸಂಗಡ ತನ್ನ ಮನೆಗೆ ಹೋದನು. ಅಪವಾದವು ಮಾತ್ರ ಯಾಜ್ಞವಲ್ಕ್ಯನಿಗೆ ಲೋಕವಲ್ಲಿ ಉಂಟಾಗಿದೆಯೆಂದನು.

೬೩. ಪದಜ್ಞಾನಿಯೂ, ಧೀಮಂತನೂ, ವಿಪ್ರೋತ್ತಮನೂ, ಮಹಾತ್ಮನೂ, ದೇವಮಿತ್ರನಾಮಕನೂ ಆದ ಶಾಕಲ್ಯಮುನಿಯು ಐದು ಸಂಹಿತೆಗಳನ್ನು ಮಾಡಿರುವನು. ಅವನ ಅನೇಕಜನ ಶಿಷ್ಯಂದರು ಲೋಕದಲ್ಲಿ ಪ್ರಖ್ಯಾತರಾದರು.

ತಚ್ಛಿಷ್ಯಾ ಅಭವನ್ ಪಂಚ ಮುದ್ಗಲೋ ಗೋಲಕಸ್ತಥಾ ।
ಖಾಲೀಯಶ್ಚ ತಥಾ ಮತ್ಸ್ಯಃ ಶೈಶಿರೇಯಸ್ತು ಪಂಚಮಃ ॥ ೬೪ ॥

ಪ್ರೋವಾಚ ಸಂಹಿತಾಸ್ತಿಸ್ರಃ ಶಾಕಪೂರ್ಣರಥೀತರಃ ।
ನಿರುಕ್ತಂ ಚ ಪುನಶ್ಚಕ್ರೇ ಚತುರ್ಥಂ ದ್ವಿಜಸತ್ತಮಃ ॥ ೬೫ ॥

ತಸ್ಯ ಶಿಷ್ಯಾಸ್ತು ಚತ್ವಾರಃ ಕೇತವೋ ದಾಲಕಿಸ್ತಥಾ ।
ಧರ್ಮಶರ್ಮಾ ದೇವಶರ್ಮಾ ಸರ್ವೇ ವ್ರತಧರಾ ದ್ವಿಜಾಃ ॥ ೬೬ ॥

ಶಾಕಲ್ಯೇ ತು ಮೃತೇ ಸರ್ವೇ ಬ್ರಹ್ಮಘ್ನಾಸ್ತೇ ಬಭೂವಿರೇ ।
ತದಾ ಚಿಂತಾಂ ಪರಾಂ ಪ್ರಾಪ್ಯ ಗತಾಸ್ತೇ ಬ್ರಹ್ಮಣೋಽಂತಿಕಂ ॥ ೬೭ ॥

---

೬೪. ಆ ಶಾಕಲ್ಯಮುನಿವರ್ಯನಿಗೆ ಮುದ್ಗಲ, ಗೋಲಕ, ಬಾಲೀಯ, ಮಾತ್ಸ್ಯ ಮತ್ತು ಶೈಶೇಯರೆಂಬ ಪ್ರಖ್ಯಾತರಾದ ಐವರು ಶಿಷ್ಯರು ಸುಪ್ರಸಿದ್ಧರಾಗಿದ್ದರು.

೬೫. ವಿಪ್ರೋತ್ತಮನಾದ ಶಾಕಲ್ಯನು ಶಾಕಪೂರ್ಣ ಮನೋರಥನಾಮಕವಾದ ಮೂರು ಸಂಹಿತೆಗಳನ್ನೂ ಮತ್ತು ನಾಲ್ಕನೆಯದಾದ ನಿರುಕ್ತವೆಂಬ ಗ್ರಂಥವನ್ನೂ ರಚಿಸಿರುವನು.

೬೬. ಆ ಶಾಕಲ್ಯನಿಗೆ ಮತ್ತು ಕೇತವ, ದಾಲಕಿ, ಧರ್ಮಶರ್ಮಾ, ದೇವಶರ್ಮಾರೆಂಬ ನಾಲ್ವರು ಪ್ರಖ್ಯಾತರಾದ ಶಿಷ್ಯರಿದ್ದರು. ಅವರೆಲ್ಲರೂ ನಿಯಮವುಳ್ಳವರೂ ಜ್ಞಾನಿಗಳೂ ಆಗಿರುವರು.

೬೭. ಹೀಗೆ ಆ ಮಹರ್ಷಿಗಳ ಸಭೆಯಲ್ಲಿ ಶಾಕಲ್ಯನು ಸೋತು ಮರಣವನ್ನು ಹೊಂದಲು, ಆ ಬ್ರಹ್ಮಹತ್ಯಾದೋಷವು ಯಾಜ್ಞವಲ್ಕ್ಯನಿಗೆ ಮಾತ್ರವಲ್ಲದೆ ಸಭಿಕರೆಲ್ಲರಿಗೂ ಪ್ರಾಪ್ತವಾಯಿತು. ಆಗ ಆ ಮುನಿಗಳೆಲ್ಲರೂ ಚಿಂತಾಕ್ರಾಂತರಾಗಿ ದೋಷಪರಿಹಾರಕ್ಕಾಗಿ ಬ್ರಹ್ಮನ ಬಳಿಗೆ ಹೋದರು.

ತಾನ್ ಜ್ಞಾತ್ವಾ ಚೇತಸಾ ಬ್ರಹ್ಮಾ ಪ್ರೇಷಿತಃ ಪವನೇ ಪುರೇ ।
ತತ್ರ ಗಚ್ಛತ ಯೂಯಂ ವಃ ಸದ್ಯಃ ಪಾಪಂ ಪ್ರಣಶ್ಯತಿ ॥ ೬೮ ॥

ದ್ವಾದಶಾರ್ಕಂ ನಮಸ್ಕೃತ್ಯ ತಥಾ ವೈ ವಾಲುಕೇಶ್ವರಂ ।
ಏಕಾದಶ ತಥಾ ರುದ್ರಾನ್ ವಾಯುಪುತ್ರಂ ವಿಶೇಷತಃ ॥
ಕುಂಡೇ ಚತುಷ್ಟಯೇ ಸ್ನಾತ್ವಾ ಬ್ರಹ್ಮಹತ್ಯಾಂ ತರಿಷ್ಯಥ ॥ ೬೯ ॥

ಸರ್ವೇ ಶೀಘ್ರತರಾ ಭೂತ್ವಾ ತತ್ಪುರಂ ಸಮುಪಾಗತಾಃ ।
ಸ್ನಾನಂ ಕೃತಂ ವಿಧಾನೇನ ದೇವಾನಾಂ ದರ್ಶನಂ ಕೃತಂ ॥ ೭೦ ॥

ಉತ್ತರೇಶ್ವರಂ ಸಮಸ್ಕೃತ್ಯ ವಾಡವಾನಂ ಪ್ರಸಾದತಃ ।
ಸರ್ವೇ ಪಾಪವಿನಿರ್ಮುಕ್ತಾ ಗತಾಸ್ತೇ ಸೂರ್ಯಮಂಡಲಂ ॥ ೭೧ ॥

---

೬೮. ಅನಂತರ ಬ್ರಹ್ಮದೇವನು ಆ ಮುನಿಗಳು ಬಂದ ಕಾರಣವನ್ನರಿತು ಆಲೋಚಿಸಿ, ಎಲೈ ಮುನಿವರ್ಯರೇ, ನೀವೆಲ್ಲರೂ ವಾಯುನಗರಿಗೆ ಹೋಗಿ ನಿಮ್ಮ ಪಾಪಗಳೆಲ್ಲವೂ ಕೂಡಲೇ ಪರಿಹಾರವಾಗುವುವೆಂದು ಹೇಳಿದನು

೬೯. ಆ ವಾಯುನಗರಿಯಲ್ಲಿರುವ ದ್ವಾದಶಾದಿತ್ಯರಿಗೂ, ವಾಲುಕೇಶ್ವರನಿಗೂ, ಏಕಾದಶರುದ್ರರಿಗೂ ವಾಯುಕುಮಾರನಾದ ಆಂಜನೇಯನಿಗೂ ನಮಸ್ಕಾರವನ್ನು ಮಾಡಿರಿ. ಮತ್ತು ಅಲ್ಲಿರುವ ನಾಲ್ಕು ಕೊಳಗಳಲ್ಲಿಯೂ ಸ್ನಾನವನ್ನು ಮಾಡಿ, ತಕ್ಷಣವೇ ನಿಮ್ಮ ಪಾಪಗಳೆಲ್ಲವೂ ಪರಿಹೃತವಾಗುವುವು ಎಂದು ಬ್ರಹ್ಮನು ಮುನಿಗಳಿಗೆ ಹೇಳಿದನು.

೭೦-೭೧. ಬಳಿಕ ಆ ಮುನಿಗಳೆಲ್ಲರೂ ಬೇಗನೆ ಆ ವಾಯುದೇವನ ನಗರಿಗೆ ಹೋಗಿ, ಅಲ್ಲಿರುವ ನಾಲ್ಕು ತೀರ್ಥಗಳಲ್ಲಿಯೂ ಶಾಸ್ತ್ರೋಕ್ತವಾಗಿ ಸ್ನಾನವನ್ನುಮಾಡಿ, ಅಲ್ಲಿರುವ ದೇವತೆಗಳ ದರ್ಶನವನ್ನೂ ಮಾಡಿದರು. ಹೀಗೆ ಮಹರ್ಷಿಗಳೆಲ್ಲರೂ ಅಲ್ಲಿ ಉತ್ತರಭಾಗದ ಪರಮೇಶ್ವರನಿಗೂ ನಮಸ್ಕಾರಮಾಡಿ, ಆ ದೇವತೆಗಳ ಅನುಗ್ರಹ ದಿಂದ ಅವರೆಲ್ಲರೂ ಪಾಪನಿರ್ಮುಕ್ತರಾಗಿ ಸೂರ್ಯಮಂಡಲದ ಮೂಲಕ ಪರಮ ಪದವಿಯನ್ನು ಹೊಂದಿ ಶಾಶ್ವತವಾದ ನಿತ್ಯಾನಂದವನ್ನು ಪಡೆದರು.

ತದಾ ಪ್ರಭೃತಿ ತತ್ತೀರ್ಥಂ ಜಾತಂ ಪಾತಕನಾಶನಂ ।
ವಾಯೋಃ ಪುರಃ ಪವಿತ್ರಂ ಚ ವಾಯುನಾ ನಿರ್ಮಿತಂ ಪುರಾ ॥ ೭೨ ॥

ಅಂಜನಾಗರ್ಭಸಂಭೂತಹನುಮಾನ್ಪವನಾತ್ಮಜಃ ।
ಯದಾ ಜಾತೋ ಮಹಾದೇವಹನುಮಾನ್ ಸತ್ಯವಿಕ್ರಮಃ ॥
ತದೇವಂ ನಿರ್ಮಿತಂ ತೀರ್ಥಂ ವಾಯುನಾ ಬ್ರಹ್ಮಯೋನಿನಾ ॥ ೭೩ ॥

ಉರ್ವ್ಯಾಂ ಜಾತಾಸ್ತು ಯೇ ಶೂದ್ರಾ ಬ್ರಾಹ್ಮಣಾನಾಂ ನಿವೇದಿತಾಃ ।
ವೃತ್ತ್ಯರ್ಥಂ ಬ್ರಹ್ಮಯಜ್ಞಾರ್ಥಂ ಕರಸ್ತೇಷು ಕೃತೋ ಮಹಾನ್ ॥ ೭೪ ॥

---

೭೨. ಅಂದಿನಿಂದಲೂ ವಾಯುದೇವನಿಂದ ನಿರ್ಮಿತವಾದ ಆ ವಾಯು ನಗರಿಯು ಅತ್ಯಂತ ಪ್ರಸಿದ್ಧವಾದ ಕ್ಷೇತ್ರವಾಗಿಯೂ, ಪಾಪನಾಶನಿಯಾಗಿಯೂ, ಲೋಕವಿಖ್ಯಾತವಾಗಿಯೂ ಆಯಿತು.

೭೩. ಆ ವಾಯುನಿರ್ಮಿತವಾದ ಕ್ಷೇತ್ರದಲ್ಲಿಯೇ ಅಂಜನಾಗರ್ಭಸಂಭೂತನೂ, ವಾಯುಕುಮಾರನೂ, ಸತ್ಯಪರಾಕ್ರಮಿಯೂ, ಮಹಾದೇವನೂ ಆದ ಹನಮಂತನು ಜನಿಸಿದನು. ಆ ಹನುಮಂತನು ಜನಿಸಿದಾಗಲೇ ಬ್ರಹ್ಮಪುತ್ರನಾದ ವಾಯುದೇವನು ಆ ಕ್ಷೇತ್ರವನ್ನು ನಿರ್ಮಿಸಿದನು.

೭೪. ಈ ಭೂಮಂಡಲದಲ್ಲಿ ಉತ್ಪನ್ನರಾದ ಶೂದ್ರರೇ ಮೊದಲಾದವರೂ ಕೂಡ ಬ್ರಾಹ್ಮಣರಿಂದ ಈ :ವಿಷಯಗಳನ್ನು ತಿಳಿದು, ಬ್ರಾಹ್ಮಣರ ಜೀವನಕ್ಕೂ, ಯಜ್ಞಯಾಗಾದಿ ಸತ್ಕರ್ಮಗಳಿಗೂ ಸಹಾಯವನ್ನು ಮಾಡಿದರೆ ಅವರಿಗೆ ಈ ಲೋಕದಲ್ಲಿ ಪರಮ ಕಲ್ಯಾಣವೂ, ಪರದಲ್ಲಿ ಪರಮಪದವಿಯೂ ದೊರೆಯುವುದು.

**ಅನೇನ ವಿಧಿನಾ ಜಾತಂ ವಿಪ್ರಾಣಾಂ ಶಾಸನಂ ಮಹತ್ ।**
**ಗೋಘ್ನೋ ವಾಪಿ ಕೃತಘ್ನೋ ವಾ ಸುರಾಪೀ ಗುರುತಲ್ಪಗಃ ॥**
**ವಾಡಾದಿತ್ಯಂ ನಮಸ್ಕೃತ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೭೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಮಹಾಸ್ಥಾನ ತೀರ್ಥವರ್ಣನಂ " ನಾಮ ಷಷ್ಟಿತಮೋಽಧ್ಯಾಯಃ**

---

೭೫. ಎಲೈ ವಿಪ್ರೋತ್ತಮರೇ, ಮೇಲೆ ನಿರೂಪಿಸಿರುವ ಕ್ರಮದಿಂದ ಬ್ರಾಹ್ಮಣಾದಿ ವರ್ಣಗಳ ಪಾಪಗಳೆಲ್ಲವೂ ಪರಿಹೃತವಾಗುವುದು. ವಾಯುದೇವನ ಕ್ಷೇತ್ರ ದರ್ಶನಾದಿಗಳಿಂದ ಗೋಹತ್ಯೆ, ಬ್ರಹ್ಮಹತ್ಯೆ, ಕೃತಘ್ನತೆ, ಸುರಾಪಾನ, ಗುರುಪತ್ನೀ ಗಮನ ಇವೇ ಮೊದಲಾದ ಪಂಚಮಹಾಪಾತಕಗಳೆಲ್ಲವೂ ಪರಿಹೃತವಾಗುವುವು. ಮತ್ತು ವಾಡಬಾದಿತ್ಯನಿಗೆ ನಮಸ್ಕಾರ ಮಾಡಿದರೆ ಸರ್ವಪಾಪಗಳೂ ಪರಿಹಾರವಾಗುವುವು ಎಂದು ಸೂತರು ಮುನಿಗಳಿಗೆ ಹೇಳಿದರು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಮಹಾತೀರ್ಥಕ್ಷೇತ್ರವರ್ಣನೆಯೆಂಬ ಅರವತ್ತನೆಯ ಅಧ್ಯಾಯವು ಸಮಾಪ್ತವಾದುದು.

# ಅರವತ್ತನೆಯ ಅಧ್ಯಾಯದ ಸಾರಾಂಶವು

ದ್ವಾಪರಯುಗದಲ್ಲಿ ವೇದವು ಅಖಂಡವಾಗಿತ್ತು. ತರುವಾಯ ಖಂಡಿತವಾಯಿತು. ಆಗಿನ ಜನರು ಅಲ್ಪಜ್ಞರೂ, ಶಾಪಗ್ರಸ್ಥರೂ ಆಗಿರುವುದರಿಂದ ಸಂಪೂರ್ಣ ವೇದಗಳನ್ನು ತಿಳಿಯಲು ಅಸಮರ್ಥರಾಗಿರುವರು ಎಂದು ಶ್ರೀಮನ್ನಾರಾಯಣನು ಭಾವಿಸಿ, ವ್ಯಾಸಾವತಾರವನ್ನು ಮಾಡಿ ವೇದಗಳನ್ನು ವಿಭಾಗಮಾಡಿದನು. ಹೀಗೆ ವೇದವ್ಯಾಸದೇವರು ವೇದಗಳನ್ನು ನಾಲ್ಕು ಭಾಗಮಾಡಿ ಜೈಮಿನಿ, ಸುಮಂತು, ವೈಶಂಪಾಯನ, ಪೈಲರೆಂಬ ನಾಲ್ವರು ಶಿಷ್ಯರಿಗೆ ನಾಲ್ಕು ಭಾಗಗಳನ್ನೂ ಉಪದೇಶಮಾಡಿದರು. ಐದನೆಯವನಾದ ಲೋಮಹರ್ಷಣನಿಗೆ ಇತಿಹಾಸ ಪುರಾಣಗಳೆಂಬ ಪಂಚಮ ವೇದವನ್ನು ಉಪದೇಶಿಸಿದನು. ಹೀಗೆ ವೇದವ್ಯಾಸದೇವನ ನಾಲ್ವರು ಶಿಷ್ಯರೂ ತಮ್ಮ ತಮ್ಮ ಶಿಷ್ಯಪ್ರಶಿಷ್ಯರಿಗೆ ಉಪದೇಶಮಾಡಿದರು. ಅವರಲ್ಲಿ ಪೈಲಮುನಿಯು ಋಗ್ವೇದವನ್ನು ಎರಡು ಭಾಗಮಾಡಿ, ಇಂದ್ರಪ್ರಮಿತಿಯೇ ಮೊದಲಾದವರಿಗೆ ತಿಳಿಸಿದನು. ಜನಕಮಹಾರಾಜನು ಪಣವಾಗಿಟ್ಟಿದ್ದ ದ್ರವ್ಯನಿಮಿತ್ತಿಕವಾಗಿ ಯಾಜ್ಞವಲ್ಕ್ಯನಿಗೂ, ಮುನಿಗಳಿಗೂ ವಿವಾದಗಳು ಸಂಭವಿಸಿತು. ಆಗ ಶಾಕಲ್ಯನು ಜಿತನಾಗಿ ಮೃತನಾದನು. ಇದರಿಂದ ಬ್ರಹ್ಮಹತ್ಯಾದೋಷಗ್ರಸ್ತರಾದ ಮುನಿಗಳು ಬ್ರಹ್ಮದೇವನ ವಚನದಂತೆ ವಾಯುನಗರಿಗೆ ಹೋಗಿ ಆ ತೀರ್ಥಕ್ಷೇತ್ರಗಳ ಮಾಹಾತ್ಮ್ಯಗಳಿಂದ ಸರ್ವಪಾಪದಿಂದ ಮುಕ್ತರಾಗಿ ಪರಮಪದವಿಯನ್ನು ಹೊಂದಿದರೆಂಬ ವಿಷಯವು ವರ್ಣಿತವಾಗಿವೆ.

—: ಹರಿಃ ಓಂ : —

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಏಕ ಷಷ್ಟಿತಮೋಽಧ್ಯಾಯಃ

**|| ಋಷಯ ಊಚುಃ ||**

**ಭಾರದ್ವಾಜೋ ಯಾಜ್ಞವಲ್ಕ್ಯೋ ಗಾಲಕಿಃ ಸಾಲಕಿಸ್ತಥಾ |**
**ಧೀಮಾ೯ ಶತಬಲಾಕಶ್ಚ ನೈಗಮಶ್ಚ ದ್ವಿಜೋತ್ತಮಃ || ೧ ||**

**ಬಾಷ್ಕಲಿಶ್ಚ ಭರದ್ವಾಜಸ್ತಿಸ್ರಃ ಪ್ರೋವಾಚ ಸಂಹಿತಾಃ |**
**ರಥೀತರೋ ನಿರುಕ್ತಂ ಚ ಪುನಶ್ಚಕ್ರೇ ಚತುರ್ಥಕಂ || ೨ ||**

**ತ್ರಯಸ್ತಸ್ಯಾಭವಚ್ಛಿಷ್ಯಾ ಮಹಾತ್ಮಾನೋ ಗುಣಾನ್ವಿತಾಃ |**
**ಧೀಮಾನ್ನಂದಾಯನೀಯಶ್ಚ ಪನ್ನಗಾರಿಶ್ಚ ಬುದ್ಧಿಮಾ೯ |**
**ತೃತೀಯಶ್ಚಾರ್ಯವಸ್ತೇ ಚ ತಪಸಾ ಶಂಸಿತವ್ರತಾಃ || ೩ ||**

---

## ಅರವತ್ತೊಂದನೆಯ ಅಧ್ಯಾಯವು

೧—೨. ಮುನಿಗಳು ಹೇಳಿದರು:—ಭಾರದ್ವಾಜ, ಯಾಜ್ಞವಲ್ಕ್ಯ, ಗಾಲಕಿ, ಸಾಕಲಿ, ಜ್ಞಾನಿಯಾದ ಶತಬಲಾಕ, ನೈಗಮ, ಬ್ರಾಹ್ಮಣೋತ್ತಮನಾದ ಬಾಷ್ಕಲಿ, ಮತ್ತು ಭರದ್ವಾಜ ಇವರು ಮೂರು ಮೂರು ಸಂಹಿತೆಗಳನ್ನು ಹೇಳಿದರು. ಧೀತರಸು ನಾಲ್ಕನೆಯದಾದ ನಿರುಕ್ತವನ್ನು ರಚಿಸಿದನು. ಹೀಗೆ ಸಂಹಿತೆಗಳೂ ನಿರುಕ್ತವೂ ಲೋಕವಿಖ್ಯಾತಗಳಾದುವು.

೩. ಆ ಭರದ್ವಾಜನಿಗೆ ಮಹಾತ್ಮರೂ, ಮಹಾಗುಣಸಪಂನ್ನರೂ, ಜ್ಞಾನಿಗಳೂ, ಮಹಾತಪಸ್ವಿಗಳೂ, ಪ್ರಖ್ಯಾತವ್ರತಿಗಳೂ ಆದ ನಂದಾಯನೀಯ, ಪನ್ನಗಾರಿ, ಅರ್ಯವರೆಂಬ ಮೂವರು ಶಿಷ್ಯರು ಪ್ರಖ್ಯಾತರಾಗಿದ್ದರು.

**ವೀತರಾಗಾ ಮಹಾತೇಜಾಃ ಸಂಹಿತಾಜ್ಞಾನಪಾರಗಾಃ ।**
**ಇತ್ಯೇತೇ ಬಹ್ವೃಚಾಃ ಪ್ರೋಕ್ತಾಃ ಸಂಹಿತಾ ಯೈಃ ಪ್ರವರ್ತಿತಾಃ ॥ ೪ ॥**

**ವೈಶಂಪಾಯನಗೋತ್ರೋ೭ಸೌ ಯಜುರ್ವೇದಂ ವ್ಯಕಲ್ಪಯತ್ ।**
**ಷಡಶೀತಿಸ್ತು ಯೇನೋಕ್ತಾಃ ಸಂಹಿತಾ ಯಜುಷಾಂ ಶುಭಾಃ ॥ ೫ ॥**

**ಶಿಷ್ಯೇಭ್ಯಃ ಪ್ರದದೌ ತಾಶ್ಚ ಜಗೃಹುಸ್ತೇ ವಿಧಾನತಃ ।**
**ಏಕಸ್ತತ್ರ ಪರಿತ್ಯಕ್ತೋ ಯಾಜ್ಞವಲ್ಕ್ಯೋ ಮಹಾತಪಾಃ ॥**
**ಷಡಶೀತಿಶ್ಚ ತಸ್ಯಾಪಿ ಸಂಹಿತಾನಾಂ ವಿಕಲ್ಪಕಾಃ ॥ ೬ ॥**

**ಸರ್ವೇಷಾಮೇವ ತೇಷಾಂ ವೈ ತ್ರಿಧಾ ಭೇದಾಃ ಪ್ರಕೀರ್ತಿತಾಃ ।**
**ತ್ರಿಧಾ ಭೇದಾಸ್ತು ತೇ ಪ್ರೋಕ್ತಾ ಭೇದೇಽಸ್ಮಿನ್ನವಮೇ ಶುಭೇ ॥ ೭ ॥**

---

೪. ವೀತರಾಗಿಗಳೂ, ಮಹಾತೇಜಸ್ವಿಗಳೂ, ಸಂಹಿತಾಜ್ಞಾನಸಂಪನ್ನರೂ ಆದ ಆ ಮುನಿಗಳು ಬಹ್ವೃಚರೆಂದೂ, ಸಂಹಿತಾಪ್ರವರ್ತಕರೆಂದೂ ಪ್ರಖ್ಯಾತರಾಗಿರುವರು.

೫. ವೈಶಂಪಾಯನ ಗೋತ್ರದಲ್ಲಿ ಉತ್ಪನ್ನರಾದ ಮುನಿಗಳು ಯಜುರ್ವೇದ ಪ್ರವರ್ತಕರಾಗಿರುವರು. ಆ ಮುನಿಗಳೇ ಯಜುರ್ವೇದದಲ್ಲಿ ಪ್ರಸಿದ್ಧವಾದ ಷಡಶೀತಿ ಯೆಂಬ ಭಾಗವೂ, ಮಂಗಳಕರಗಳಾದ ಅನೇಕ ಸಂಹಿತೆಗಳೂ ಇವುಗಳನ್ನು ರಚಿಸಿರುವರು.

೬. ಅವರು ತಮ್ಮ ತಮ್ಮ ಶಿಷ್ಯರಿಗೆ ವಿಧ್ಯುಕ್ತಕ್ರಮವಾಗಿ ಉಪದೇಶಮಾಡಿದರು. ಆ ಶಿಷ್ಯರು ನಮ್ರತೆಯಿಂದ ಅವನ್ನು ಸ್ವೀಕರಿಸಿದರು. ಆ ಶಿಷ್ಯರ ಮಧ್ಯದಲ್ಲಿ ಮಹಾತಪಸ್ವಿಯಾದ ಯಾಜ್ಞವಲ್ಕ್ಯರನ್ನು ಮಾತ್ರ ನಿರಾಕರಿಸಿದರು. ಸಂಹಿತೆಗಳಲ್ಲಿ ಒಂದಾನೊಂದಾದ ಷಡಶೀತಿಯೆಂಬ ಭಾಗವೂ ಕೂಡ ಉಪದೇಶಿಸಲ್ಪಟ್ಟಿತು.

೭. ಅವುಗಳೆಲ್ಲವನ್ನೂ ಪುನಃ ಮೂರು ಭಾಗಗಳನ್ನಾಗಿ ಮಾಡಿದ್ದರು. ಅವುಗಳನ್ನು ಮೂರು ಭಾಗಮಾಡುವುದರಿಂದ ಸಂಹಿತೆಯು ಮಂಗಳಕರವಾದ ಒಂಭತ್ತು ಭಾಗವಾಯಿತು.

ಉದೀಚ್ಯಾ ಮಧ್ಯದೇಶಾಶ್ಚ ಪ್ರಾಚ್ಯಾಶ್ಚೈವ ಪೃಥಗ್ವಿಧಾಃ ।
ಶ್ಯಾಮಾಯನಿರುದೀಚ್ಯಾನಾಂ ಪ್ರಧಾನಃ ಸಂಬಭೂವ ಹ ॥ ೮ ॥

ಮಧ್ಯದೇಶಪ್ರತಿಷ್ಠಾನಾಮಾರುಣಿಃ ಪ್ರಥಮಃ ಸ್ಮೃತಃ ।
ಆಲಂಬರಾದಿಃ ಪ್ರಾಚ್ಯಾನಾಂ ತ್ರಯೋದಶ್ಯಾದಯಸ್ತು ತೇ ॥ ೯ ॥

ಇತ್ಯೇತೇ ಚರಕಾಃ ಪ್ರೋಕ್ತಾಃ ಸಂಹಿತಾವಾದಿನೋ ದ್ವಿಜಾಃ ।
ಋಷಯಸ್ತದ್ವಚಃ ಶ್ರುತ್ವಾ ಸೂತಂ ಜಿಜ್ಞಾಸವೋಽಬ್ರುವನ್ ॥ ೧೦ ॥

ಚರಕಾಧ್ವರ್ಯವಃ ಕೇನ ಕಾರಣಂ ಬ್ರೂಹಿ ತತ್ತ್ವತಃ ।
ಕಿಂಚೀರ್ಣಂ ಕಸ್ಯ ಹೇತೋಶ್ಚ ವಾಚಕತ್ವಂ ಚ ಭೇಜಿರೇ ॥
ಇತ್ಯುಕ್ತಃ ಪ್ರಾಹ ತೇಷಾಂ ಸ ಚರಕತ್ವಮಭೂದ್ಯಥಾ ॥ ೧೧ ॥

---

೮. ಅವುಗಳಲ್ಲಿಯೂ ಕೂಡ ಉದೀಚ್ಯರು, ಮಧ್ಯದೇಶಿಯರು, ಪ್ರಾಚ್ಯರೆಂದು ಮೂರು ಪಂಗಡಗಳಿವೆ. ಅವರಲ್ಲಿ ಶ್ಯಾಮಾಯನಿಯೆಂಬುವನು ಉದೀಚ್ಯರಲ್ಲಿ ಪ್ರಮುಖಪುರುಷನಾಗಿರುವನು.

೯. ಮಧ್ಯದೇಶದಲ್ಲಿ ಪ್ರಸಿದ್ಧರಾದ ಪುರುಷರಲ್ಲಿ ಆರುಣಿಯೆಂಬುವನು ಪ್ರಮುಖಪುರುಷನಾಗಿರುವನು. ಪ್ರಾಚ್ಯರಲ್ಲಿ ಆಲಂಬಿಯೇ ಮೊದಲಾದ ಹದಿಮೂರು ಜನರು ಪ್ರಸಿದ್ಧರಾಗಿರುವರು.

೧೦. ಸಂಹಿತಾವಾದಿಗಳಾದ ಈ ಮುನಿವರ್ಯರು ಚರಕವಾದಿಗಳೆಂದು ಲೋಕದಲ್ಲಿ ವಿಖ್ಯಾತರಾದರು ಎಂದು ಸೂತಮುನಿಯು ಹೇಳಲು, ಆ ಮಾತನ್ನು ಕೇಳಿದ ಋಷಿಗಳು ಪುನಃ ಸೂತಪುರಾಣಿಕನಿಗೆ ಇಂತೆಂದರು.

೧೧. ಎಲೈ ಸೂತಮುನಿಯೇ, ಆ ಮಹರ್ಷಿಗಳಿಗೆ ಚರಕಾಧ್ಯೇತೃಗಳೂ ಅಥವಾ ಚರಕಾಧ್ವರ್ಯುಗಳೆಂದು ಹೆಸರು ಬರಲು ಕಾರಣವೇನು, ಅವರು ಯಾವ ಕಾರ್ಯಗಳನ್ನು ಮಾಡಿದರು. ಏತರಿಂದ ಅವರಿಗೆ ಈ ನಾಮವು ಪ್ರಾಪ್ತವಾಗಿರುತ್ತದೆ. ಎಂದು ಕೇಳಲು ಸೂತಮುನಿಯು ಅವರಿಗೆ ಚರಕಾಧ್ಯಾಯಿಗಳೆಂದು ನಾಮಧೇಯ ಬರಲು ಕಾರಣವನ್ನು ಇಂತೆಂದರು.

|| ಸೂತ ಉವಾಚ ||

ಕಾರ್ಯಮಾಸೀದೃಷೀಣಾಂ ಚ ಕಿಂಚಿದ್ಬ್ರಾಹ್ಮಣಸತ್ತಮಾಃ |
ಮೇರುಪೃಷ್ಟಂ ಸಮಾಸಾದ್ಯ ತೈಸ್ತದಾ ತ್ವಿತಿಮಂತ್ರಿತಂ || ೧೨ ||

ಯೋ ನೋತ್ರ ಸಪ್ತರಾತ್ರೇಣ ನಾಗಚ್ಛೇದ್ದ್ವಿಜಸತ್ತಮಾಃ |
ಸ ಕುರ್ಯಾದ್ಬ್ರಹ್ಮವಧ್ಯಾಂ ವೈ ಸಮಯೋ ನಃ ಪ್ರಕೀರ್ತಿತಃ || ೧೩ ||

ತತಸ್ತೇ ಸಗಣಾಃ ಸರ್ವೇ ವೈಶಂಪಾಯನವರ್ಜಿತಾಃ |
ಪ್ರಯಯುಃ ಸಪ್ತರಾತ್ರೇಣ ಯತ್ರ ಸಂಧಿಃ ಕೃತೋಽಭವತ್ || ೧೪ ||

ಬ್ರಾಹ್ಮಣಾನಾಂ ತು ವಚನಾದ್ಬ್ರಹ್ಮವಧ್ಯಾಂಚಕಾರ ಸಃ |
ಶಿಷ್ಯಾನಥ ಸಮಾನೀಯ ಸ ವೈಶಂಪಾಯನೋಽಬ್ರವೀತ್ || ೧೫ ||

---

೧೨. ಸೂತಮುನಿಯು ಹೇಳಿದನು:–ಎಲೈ ಮುನಿವರ್ಯರೇ, ಒಂದಾನೊಂದು ಕಾಲದಲ್ಲಿ ಋಷಿಗಳಿಗೆ ಒಂದು ಮಹತ್ಕಾರ್ಯವು ಸಂಭವಿಸಿತು. ಆಗ ಋಷಿಗಳೆಲ್ಲರೂ ಆ ಕಾರ್ಯಕ್ಕಾಗಿ ಮೇರುಗಿರಿಯ ಮಧ್ಯಭಾಗವನ್ನು ಹೊಂದಿ ಅಲ್ಲಿ ಮಂತ್ರಾಲೋಚನೆಯನ್ನು ಮಾಡಿದರು.

೧೩. ಯಾವ ಮಹರ್ಷಿಗಳು ಈ ನಮ್ಮ ಮಹಾಸಭೆಗೆ ಏಳು ದಿವಸಗಳೊಳಗೆ ಬರುವುದಿಲ್ಲವೋ ಅವರಿಗೆ ಬ್ರಹ್ಮಹತ್ಯಾದೋಷವು ಸಂಭವಿಸುವುದು ಎಂಬುದಾಗಿ ಒಂದು ನಿಯಮವನ್ನು ಮುನಿಗಳೆಲ್ಲರೂ ಸೇರಿ ಮಾಡಿಕೊಂಡರು.

೧೪. ಆ ಮುನಿಗಳು ಮಾಡಿಕೊಂಡಿದ್ದ ನಿಯಮಾನುಸಾರವಾಗಿ ಸಮಸ್ತರಾದ ಮಹರ್ಷಿಗಳೂ ಏಳು ದಿವಸಗಳೊಳಗೆ ಮೇರುಗಿರಿಯನ್ನು ಹೊಂದಿದರು. ಆದರೆ ವೈಶಂಪಾಯನಮುನಿಯೂ ಅವರ ಶಿಷ್ಯರೂ ಕೂಡ ಆ ಸಭೆಗೆ ಹೋಗಲಿಲ್ಲವೆಂದು ವ್ಯಕ್ತವಾಯಿತು.

೧೫. ಅನಂತರ ವೈಶಂಪಾಯನ ಮುನಿಯು ಬ್ರಾಹ್ಮಣರ ಪ್ರತಿಜ್ಞೆಯಂತೆ ಬ್ರಹ್ಮಹತ್ಯಾದೋಷವನ್ನು ಹೊಂದಬೇಕಾಯಿತು. ಆಗ ವೈಶಂಪಾಯನಮುನಿಯು ವಿಪ್ರವಚನಕ್ಕೆ ಕಟ್ಟುಬಿದ್ದು ದೋಷವನ್ನು ಹೊಂದಿ ತನ್ನ ಶಿಷ್ಯರನ್ನು ಕರೆದು ವಕ್ಷ್ಯಮಾಣಪ್ರಕಾರವಾಗಿ ಹೇಳಿದನು.

ಬ್ರಹ್ಮವಧ್ಯಾಂಚರಧ್ವಂ ವೈ ಮತ್ಕೃತೇ ದ್ವಿಜಸತ್ತಮಾಃ ।
ಸರ್ವೇ ಯೂಯಂ ಸಮಾಗಮ್ಯ ಬ್ರೂತ ಮೇ ತದ್ಧಿತಂ ವಚಃ ॥ ೧೬ ॥

॥ ಯಾಜ್ಞವಲ್ಕ್ಯ ಉವಾಚ ॥

ಅಹಮೇವ ಚರಿಷ್ಯಾಮಿ ತಿಷ್ಠಂತು ಮುನಯಸ್ತ್ವಿಮೇ ।
ಬಲಂ ಚೋತ್ಥಾಪಯಿಷ್ಯಾಮಿ ತಪಸಾ ಸ್ವೇನ ಭಾವಿತಃ ॥ ೧೭ ॥

ಏವಮುಕ್ತಸ್ತತಃ ಕ್ರುದ್ಧೋ ಯಾಜ್ಞವಲ್ಕ್ಯಮಥಾಬ್ರವೀತ್ ।
ಉವಾಚ ಯತ್ವಯಾಽಧೀತಂ ಸರ್ವಂ ಪ್ರತ್ಯರ್ಪಯಸ್ವಮೇ ॥ ೧೮ ॥

ಏವಮುಕ್ತಃ ಸ ರೂಪಾಣಿ ಯಜೂಂಷಿ ಪದದೌ ಗುರೋಃ ।
ರುಧಿರೇಣ ತಥಾಕ್ತಾನಿ ಛರ್ದಿತ್ವಾ ಬ್ರಹ್ಮವಿತ್ತಮಃ ॥ ೧೯ ॥

---

೧೬. ಎಲೈ ಶಿಷ್ಯವರ್ಯರೇ, ನೀವು ನನಗಾಗಿ ಈ ದೋಷವನ್ನು ಹೊತ್ತು ಕೊಳ್ಳಿರಿ. ನೀವೆಲ್ಲರೂ ಬಂದು ಯೋಚಿಸಿ ನನಗೆ ಏತರಿಂದ ಹಿತವು ಸಂಭವಿಸ ಬಹುದೆಂಬುವನ್ನು ಯೋಚಿಸಿ ತಿಳಿಸಿ ಎಂದು ವೈಶಂಪಾಯನನು ತನ್ನ ಶಿಷ್ಯರಿಗೆ ಹೇಳಿದನು.

೧೭. ಯಾಜ್ಞವಲ್ಕ್ಯನು ಹೇಳಿದನು:–ಎಲೈ ಗುರುವರ್ಯರೇ, ಈ ಬ್ರಹ್ಮಹತ್ಯಾ ದೋಷವು ನನಗೊಬ್ಬನಿಗೆ ಮಾತ್ರ ಸಂಭವಿಸಲಿ. ಇತರ ಮುನಿಗಳು ಈ ದೋಷದಿಂದ ವಿಮುಕ್ತರಾಗಲಿ. ನಾನು ನನ್ನ ತಪಃಪ್ರಭಾವದಿಂದ ಈ ದೋಷವನ್ನು ಪರಿಹರಿಸಿ ಕೊಳ್ಳುವೆನೆಂದು ಗುರುಗಳಿಗೆ ಯಾಜ್ಞವಲ್ಕ್ಯನು ಹೇಳಿದನು.

೧೮. ಈ ರೀತಿಯಾಗಿ ಹೇಳಿದ ಶಿಷ್ಯನಾದ ಯಾಜ್ಞವಲ್ಕ್ಯನ ಗರ್ವಿಷ್ಠವಾದ ಮಾತುಗಳನ್ನು ಕೇಳಿ, ಗುರುಗಳು ಕೋಪಗೊಂಡು ನೀನು ಗುರ್ವಾಜ್ಞೆಯನ್ನು ಮೀರಿ ಅಹಂಕಾರದಿಂದ ಮಾತನಾಡುತ್ತೀಯೇ, ಆದುದದರಿಂದ ನನ್ನ ವಿದ್ಯೆಯನ್ನು ನನಗೆ ಒಪ್ಪಿಸಿಬಿಡು ಎಂದು ಹೇಳಿದರು.

೧೯. ಗುರುಗಳು ಹೀಗೆ ಹೇಳಲಾಗಿ ಬ್ರಹ್ಮಜ್ಞಾನಿಯಾದ ಯಾಜ್ಞವಲ್ಕ್ಯನು ತಾನು ಕಲಿತ ಯಜುರ್ವೇದವು ರಕ್ತಗತವಾದುದರಿಂದ ರಕ್ತಸಹಿತವಾಗಿ ಛೇದಿಸಿ ಗುರುಗಳಿಗೆ ಅರ್ಪಿಸಿದನು.

ತತಃ ಸ ಧ್ಯಾನಮಾಸ್ಥಾಯ ಸೂರ್ಯಮಾರಾಧಯದ್ದ್ವಿಜಾಃ ।
ಸೂರ್ಯಬ್ರಹ್ಮ ಯದುಚ್ಛಿನ್ನಂ ಖಡ್ಗಂತ್ವಾ ಪ್ರತಿತಿಷ್ಠತಿ ॥ ೨೦ ॥

ತತೋ ಯಾನಿ ಗತಾನ್ಯೂರ್ಧ್ವಂ ಯಜೂಂಷ್ಯಾದಿತ್ಯಮಂಡಲಂ ।
ತಾನಿ ತಸ್ಮೈ ದದೌ ತುಷ್ಟಃ ಸೂರ್ಯೋ ವೈ ಬ್ರಹ್ಮರೀತಯೇ ॥
ಅಶ್ವರೂಪಾಯ ಮಾರ್ತಾಂಡೋ ಯಾಜ್ಞವಲ್ಕ್ಯಾಯ ಧೀಮತೇ ॥ ೨೧ ॥

ಯಜೂಂಷ್ಯಧೀಯಂತೇ ಯಾನಿ ಬ್ರಾಹ್ಮಣಾ ಯೇನ ಕೇನ ಚ ।
ಅಶ್ವರೂಪಾಯ ದತ್ತಾನಿ ತತಸ್ತೇ ವಾಜಿನೋಽಭವನ್ ॥ ೨೨ ॥

ಬ್ರಹ್ಮಹತ್ಯಾ ತು ಯೈಶ್ಚೀರ್ಣಾ ಚರಣಾಚ್ಚರಕಾಃ ಸ್ಮೃತಾಃ ।
ವೈಶಂಪಾಯನಶಿಷ್ಯಾಸ್ತೇ ಚರಕಾಃ ಸಮುದಾಹೃತಾಃ ॥ ೨೩ ॥

---

೨೦. ಅನಂತರ ಯಾಜ್ಞವಲ್ಕ್ಯನು ಯೋಗಾರೂಢನಾಗಿ ಸೂರ್ಯದೇವನನ್ನು ಆರಾಧಿಸಿದನು. ಹೀಗೆ ಧ್ಯಾನಮಾಡುವಾಗ ಯಾವ ಯಜುರ್ವೇದದ ಭಾಗಗಳು ಸೂರ್ಯಮಂಡಲಕ್ಕೆ ಹೋದುವೋ ಆ ಭಾಗಗಳು ಮಾತ್ರ ಉಳಿದವು. ಉಳಿದ ಭಾಗಗಳು ನಷ್ಟವಾದುವು.

೨೧. ಹೀಗೆ ಧ್ಯಾನಮಾಡುವಾಗ ಯಾವ ಯಜುರ್ವೇದದ ಭಾಗಗಳು ಸೂರ್ಯಮಂಡಲಕ್ಕೆ ಹೋದುವೋ, ಆ ಭಾಗಗಳನ್ನು ಸೂರ್ಯದೇವನು ಪ್ರೀತನಾಗಿ ಪುನಃ ಬ್ರಹ್ಮಜ್ಞಾನಿಯೂ, ಬುದ್ಧಿವಂತನೂ, ಅಶ್ವರೂಪಿಯೂ ಆದ ಯಾಜ್ಞವಲ್ಕ್ಯನಿಗೆ ಉಪದೇಶಮಾಡಿದನು.

೨೨. ಎಲೈ ಮುನಿವರ್ಯರೇ, ಈಗ ಈ ಲೋಕದಲ್ಲಿ ಬ್ರಾಹ್ಮಣರು ಯಜುರ್ವೇದದ ಯಾವ ಯಾವ ಭಾಗಗಳನ್ನು ಅಧ್ಯಯನಮಾಡುತ್ತಾರೆಯೋ ಆ ಭಾಗಗಳೆಲ್ಲವೂ ಸೂರ್ಯದೇವನ ಅಶ್ವರೂಪಿಯಾದ ಯಾಜ್ಞವಲ್ಕ್ಯನಿಗೆ ಉಪದೇಶ ಮಾಡಿದ ಭಾಗಗಳೇ ಆಗಿರುತ್ತವೆ.

೨೩. ಗುರುಗಳ ಆಜ್ಞಾನುಸಾರವಾಗಿ ಯಾವ ಯಾವ ಶಿಷ್ಯರು ಬ್ರಹ್ಮಹತ್ಯವನ್ನು ಅಂಗೀಕರಿಸಿ ಆಚರಿಸಿದರೋ ಅವರೇ ಚರಕರೆಂದು ಲೋಕದಲ್ಲಿ ವಿಖ್ಯಾತರಾಗಿರುವರು. ಚರಕಾಧ್ಯಾಯನಿಗಳೆಲ್ಲರೂ ವೈಶಂಪಾಯನನ ಶಿಷ್ಯರೇ ಆಗಿರುವರು

**ಇತ್ಯೇತೇ ಚರಕಾಃ ಪ್ರೋಕ್ತಾ ವಾಜಿನಸ್ತಾನ್ನಿಬೋಧತ**
**ಯಾಜ್ಞವಲ್ಕ್ಯಸ್ಯ ಶಿಷ್ಯಾಸ್ತೇ ಕಣ್ವ ವೈಧೇಯಶಾಲಿನಃ ॥ ೨೪ ॥**

**ಮಧ್ಯಂದಿನಶ್ಚ ಶಾಪೇಯಿಾ ವಿದಿಗ್ಧಶ್ಚಾಪ್ಯ ಉದ್ದಲಃ ।**
**ತಾಮ್ರಾಯಣಶ್ಚ ವಾತ್ಸ್ಯಶ್ಚ ತಥಾ ಗಾಲವಶೈಶಿರೀ ॥**
**ಆಟವೀ ಚ ತಥಾ ಪರ್ಣೀ ವೀರಣೀ ಸಪರಾಯಣಃ ॥ ೨೫ ॥**

**ಇತ್ಯೇತೇ ವಾಜಿನಃ ಪ್ರೋಕ್ತಾ ದಶ ಪಂಚ ಚ ಸಂಸ್ಕೃತಾಃ ।**
**ಶತಮೇಕಾಧಿಕಂ ಕೃತ್ಸ್ನಂ ಯಜುಷಾಂ ವೈ ವಿಕಲ್ಪಕಾಃ ॥ ೨೬ ॥**

**ಪುತ್ರಮಧ್ಯಾಪಯಾಮಾಸ ಸುಮಂತುಮಥ ಜೈಮಿನಿಃ ।**
**ಸುಮಂತುಶ್ಚಾಪಿ ಸುತ್ವಾನಂ ಪುತ್ರಮಧ್ಯಾಪಯತ್ಪ್ರಭುಃ ॥**
**ಸುಕರ್ಮಾಣಂ ಸುತಂ ಸುತ್ವಾ ಪುತ್ರಮಧ್ಯಾಪಯತ್ಪ್ರಭುಃ ॥ ೨೭ ॥**

---

೨೪. ಎಲೈ ಮುನಿವರ್ಯರೇ, ಚರಕರ ವಿಷಯವಾಗಿ ಅವರ ಚರಿತ್ರೆಯನ್ನು ಇದುವರೆಗೂ ತಿಳಿಸಿರುತ್ತೇನೆ. ಈಗ ವಾಜಿಗಳು ಯಾರು ? ಅವರು ಎಷ್ಟು ಜನರು ? ಯಾರ ಶಿಷ್ಯರು ? ಇವೇ ಮೊದಲಾದ ವಿಷಯವನ್ನು ತಿಳಿಸುವೆನು ಕೇಳಿರೆಂದನು. ಯಾಜ್ಞವಲ್ಕ್ಯರ ಶಿಷ್ಯರೂ, ಕಣ್ವಶಾಖಾಧ್ಯಯನಮಾಡಿದವರೂ ವಾಜಿಗಳಾಗಿರುವರು.

೨೫–೨೬. ಮಾಧ್ಯಂದಿನ, ಶಾಪೇಯಿನಾ, ವಿದಗ್ಧ, ಉದ್ದಲ, ತಾಮ್ರಾಯಣ, ವಾತ್ಸ್ಯ, ಗಾಲವ, ಶೈಶಿರಿ, ಆಟವೀ, ಪರ್ಣೀ, ವಾರಣೀ, ಸಪರಾಯಣ ಇವರೇ ಪ್ರಮುಖರಾದ ಹದಿನೈದು ಜನರು ವಾಜಿಗಳಾಗಿರುವರು. ಯಜುರ್ವೇದ ಪ್ರವರ್ತಕರು ಒಟ್ಟು ನೂರೊಂದು ಜನರಿರುವರೆಂದು ಲೋಕವಿಖ್ಯಾತವಾದ ವಿಷಯವಾಗಿದೆಯೆಂದು ಸೂತಮುನಿಯು ಹೇಳಿದನು.

೨೭. ಜೈಮಿನಿಮಹರ್ಷಿಯು ಸುಮಂತನಾಮಕನಾದ ತನ್ನ ಸುತನಿಗೆ ವೇದಾಧ್ಯಯನವನ್ನು ಮಾಡಿಸಿದರು. ಸಮರ್ಥನಾದ ಸುಮಂತನೂ ಸಹ ತನ್ನ ಪುತ್ರನಾದ ಸುತ್ವಾನನಿಗೆ ಉಪದೇಶಿಸಿದನು. ಶಕ್ತನಾದ ಆ ಸುತ್ವಾನನೂ ಕೂಡ ತನ್ನ ಮಗನಾದ ಸುಕರ್ಮಾಣನಿಗೆ ಅಧ್ಯಾಪನೆ ಮಾಡಿದನು.

ಸ ಸಹಸ್ರಮಧೀತ್ಯಾಶು ಸುಕರ್ಮಾಸ್ಯಥ ಸಂಹಿತಾಃ ।
ಪ್ರೋವಾಚಾಥ ಸಹಸ್ರಸ್ಯ ಸುಕರ್ಮಾ ಸೂರ್ಯವರ್ಚಸಃ ॥ ೨೮ ॥

ಅನಧ್ಯಾಯೇಷ್ವಧೀಯಾನಾಂಸ್ತಾಂ ಜಘಾನ ಶತಕ್ರತುಃ ।
ಪ್ರಾಯೋಪವೇಶಮಕರೋತ್ತತೋಽಸೌ ಶಿಷ್ಯಕಾರಣಾತ್ ॥ ೨೯ ॥

ಕ್ರುದ್ಧಂ ದೃಷ್ಟ್ವಾ ತತಃ ಶಕ್ರೋ ವರಮಸ್ಮೈ ದದೌ ಪುನಃ ।
ಭಾವಿನೌ ತೇ ಮಹಾವೀರ್ಯೌ ಶಿಷ್ಯಾವನಲವರ್ಚಸೌ ॥ ೩೦ ॥

ಅಧೀಯಾಸೌ ಮಹಾಪ್ರಾಜ್ಞೌ ಸಹಸ್ರಂ ಸಹಿತಾವುಭೌ ।
ಏತೌ ಸುತೌ ಮಹಾಭಾಗೌ ಮಾ ಕ್ರುಧ್ಯ ದ್ವಿಜಸತ್ತಮ ॥ ೩೧ ॥

---

೨೮. ಆ ಸುಕರ್ಮಾಣನೂ ಸಹ ಸಂಹಿತೆಗಳನ್ನು ಸಹಸ್ರನಿಗೆ ಕಲಿಸಿದನು. ಸುಕರ್ಮಾಣನು ಸೂರ್ಯನಿಗೆ ಸಮಾನ ತೇಜಸ್ವಿಯಾದ ಸಹಸ್ರನಿಗೆ ಉಪ ದೇಶಿಸಿದನು

೨೯. ದೇವೇಂದ್ರನು ಅನಧ್ಯಯನ ದಿವಸಗಳಲ್ಲಿ ವೇದಗಳನ್ನು ಅಧ್ಯಯನ ಮಾಡಿದ ವಿಪ್ರರನ್ನು ಸಂಹಾರಮಾಡಿದನು. ಸುಕರ್ಮನು ಶಿಷ್ಯವಾತ್ಸಲ್ಯಕ್ಕಾಗಿ ಪ್ರಾಯೋಪವೇಶಮಾಡಿದನು.

೩೦. ಅನಂತರ ಕೋಪಮಾಡಿದ ಸುಕರ್ಮಾಣನನ್ನು ನೋಡಿದ ಇಂದ್ರನು ಅವನಿಗೆ ವರವನ್ನು ಕೊಟ್ಟನು. ಎಲೈ ಸುಕರ್ಮಾಣನೇ, ನಿನಗೆ ಮಹಾಶೂರರೂ, ಅಗ್ನಿಗೆ ಸಮಾನ ತೇಜಸ್ವಿಗಳೂ ಆದ ಇಬ್ಬರು ಶಿಷ್ಯರು ಸಿಕ್ಕುವರು. ಅವರಿಂದ ನಿನ್ನ ಕೀರ್ತಿಯು ಲೋಕವಿಖ್ಯಾತವಾಗುವುದೆಂದನು.

೩೧. ಅವರಿಬ್ಬರು ಶಿಷ್ಯರೂ, ಅಧ್ಯಯನಶೀಲರೂ, ಮಹಾಜ್ಞಾನಿಗಳೂ, ಸಹಸ್ರಸಹಿತರೂ, ದೇವೋಪಮರೂ, ಮಹಾಭಾಗ್ಯಶಾಲಿಗಳೂ ಆಗಿರುವರು. ಆದುದ ರಿಂದ ಕೋಪಮಾಡಬೇಕಾಗಿಲ್ಲವೆಂದು ಇಂದ್ರನು ಸಮಾಧಾನಮಾಡಿದನು.

ಇತ್ಯುಕ್ತ್ವಾ ವಾಸವಃ ಶ್ರೀಮಾನ್ ಸುಕರ್ಮಾಣಂ ಯಶಸ್ವಿನಂ ।
ಶಾಂತಕ್ರೋಧಂ ದ್ವಿಜಂ ದೃಷ್ಟ್ವಾ ತತ್ರೈವಾಂತರಧೀಯತ || ೩೨ ||

ತಸ್ಯ ಶಿಷ್ಯೋ ಭವೇದ್ಧೀಮಾನ್ ಪೌಷ್ಯಂಜೀ ದ್ವಿಜಸತ್ತಮಾಃ ।
ಹಿರಣ್ಯನಾಭಃ ಕೌಶಿಕ್ಯೋ ದ್ವಿತೀಯೋಽಭೂನ್ನರಾಧಿಪಃ || ೩೩ ||

ಅಧ್ಯಾಪಯತ್ತು ಪೌಷ್ಯಂಜೀ ಸಹಸ್ರಾರ್ಧ್ಧಂ ತು ಸಂಹಿತಾಃ ।
ತೇನಾನ್ಯೋದೀಚ್ಯಸಾಮಾನ್ಯಾಃ ಶಿಷ್ಯಾಃ ಪೌಷ್ಯಂಜಿನಃ ಶುಭಾಃ || ೩೪ ||

ಶತಾನಿ ಪಂಚ ಕೌಶಿಕ್ಯಃ ಸಂಹಿತಾನಾಂ ಚ ವೀರ್ಯವಾನ್ ।
ಶಿಷ್ಯಾ ಹಿರಣ್ಯನಾಭಸ್ಯ ಸ್ಮೃತಾಸ್ತೇ ಪ್ರಾಚ್ಯಸಾಮಗಾಃ || ೩೫ ||

---

೩೨. ಸಕಲೈಶ್ವರ್ಯಸಂಪನ್ನನಾದ ದೇವೇಂದ್ರನು ಈ ರೀತಿಯಾಗಿ ಪ್ರಾಜ್ಞನಾದ ಸುಕರ್ಮಣನನ್ನು ಸಮಾಧಾನಮಾಡಿದನು, ಅವನು ತನ್ನ ಸಮುಪದೇಶದಿಂದ ಶಾಂತನಾದನೆಂದು ಭಾವಿಸಿ, ಅವನು ಪ್ರತ್ಯಕ್ಷವಾಗುತ್ತಿರುವಾಗಲೇ ಮಾಯವಾದನು.

೩೩. ಎಲೈ ವಿಪ್ರವರ್ಯರೇ, ಆ ಸುಕರ್ಮಣನಿಗೆ ಬುದ್ಧಿವಂತನೂ, ಪೌಷ್ಯಂಜೀನಾಮಕನೂ ಆದ ಶಿಷ್ಯನು ಇದ್ದನು. ಮತ್ತು ಕುಶಿಕಗೋತ್ರೋತ್ಪನ್ನನೂ ನರಾಧಿಪನೂ ಆದ ಹಿರಣ್ಯನಾಭನೆಂಬುವನು ಎರಡನೆಯ ಶಿಷ್ಯನಾಗಿ ಇದ್ದನು.

೩೪. ಆ ಪೌಷ್ಯಂಜನನೂ ಕೂಡ ತನ್ನ ಅನೇಕ ಶಿಷ್ಯರಿಗೆ ಐನೂರು ಸಂಹಿತೆಗಳನ್ನು ಉಪದೇಶಿಸಿದನು. ಇದರಿಂದ ಉತ್ತರದೇಶದ ಜನರೆಲ್ಲರೂ ಸಾಮಾನ್ಯವಾಗಿ ಪೌಷ್ಯಂಜಿನನ ಶಿಷ್ಯರಾಗಿಯೂ, ಶುಭಾಚಾರಿಗಳಾಗಿಯೂ ಇರುವರು.

೩೫. ಕುಶಿಕಸಂಬಂಧಿಯಾದ ಸಂಹಿತೆಗಳು ನೂರೈದು ಸಂಖ್ಯಾಕವಾಗಿಯೂ, ವೀರ್ಯವತ್ತಾಗಿಯೂ ಇರುತ್ತವೆ. ಪಶ್ಚಿಮದಿಕ್ಕಿನಲ್ಲಿರುವ ಸಾಮಗರೆಲ್ಲರೂ ಹಿರಣ್ಯನಾಭನ ಶಿಷ್ಯರಾಗಿಯೂ, ಸುಪ್ರಸಿದ್ಧರಾಗಿಯೂ ಇರುವರು.

**ಲೋಕಾಕ್ಷೀ ಕುಥುಮಿಶ್ಚೈವ ಕುಶೀತೀ ಲಾಂಗಲಿಸ್ತಥಾ ।**
**ಪೌಷ್ಯಂಜಿಶಿಷ್ಯಾಶ್ಚತ್ವಾರಸ್ತೇಷಾಂ ಭೇದಾನ್ನಿಬೋಧತ ॥ ೩೬ ॥**

**ರಾಣಾಯನೀಯಃ ಸಹಿಲಾಂಡಿ ಪುತ್ರ**
**ಸ್ತಸ್ಮಾದನ್ಯೋ ಮೂಲಚಾರೀ ಸುವಿದ್ವಾನ್ ।**
**ಸಕತಿಪುತ್ರಃ ಸಹಸಾತ್ಯಪುತ್ರ**
**ಏತಾನ್ ಭೇದಾನ್ ವಿತ್ತ ಲೋಕಾಕ್ಷಿಣಸ್ತು ॥ ೩೭ ॥**

**ತ್ರಯಸ್ತು ಕುಥುಮೇಃ ಪುತ್ರಾ ಔರಸೋ ರಸಪಾಸರಃ ।**
**ಭಾಗವಿತ್ತಿಶ್ಚ ತೇಜಸ್ವೀ ತ್ರಿವಿಧಾಃ ಕೌಥುಮಾಃ ಸ್ಮೃತಾಃ ॥ ೩೮ ॥**

**ಶೌರಿದ್ಯುಃ ಶೃಂಗಪುತ್ರಶ್ಚ ದ್ವಾವೇತೌ ಚರಿತೌ ವ್ರತೌ ।**
**ರಾಣಾಯನೀಯಃ ಸೌಮಿತ್ರಿಃ ಸಾಮವೇದವಿಶಾರದೌ ॥ ೩೯ ॥**

---

೩೬. ಪೌಷ್ಯಂಜಿನ ಮುನಿಗೆ ಲೋಕಾಕ್ಷಿ, ಕುಥುಮಿ, ಕುಶೀತಿ, ಲಾಂಗಲಿ ಎಂಬುದಾಗಿ ನಾಲ್ವರು ಶಿಷ್ಯರು ಪ್ರಸಿದ್ಧರಾಗಿರುವರು. ಅವರುಗಳಲ್ಲಿ ಆಂತರಂಗಿಕ ಭೇದಗಳನ್ನು ತಿಳಿಸುವೆನು ಕೇಳಿರೆಂದನು.

೩೭. ಲೋಕಾಕ್ಷಿಮುನಿಗೆ ನಾರಾಯಣೀಯ, ಸಹಿತಂಡಿ, ಪುತ್ರ ವಿದ್ವಾಂಸನಾದ ಮೂಲಚಾರಿಯು ಸಕತಿಪುತ್ರ, ಸಹಸಾತ್ಯಪುತ್ರ ಇವರು ಶಿಷ್ಯರಾಗಿರುವರು. ಈ ರೀತಿಯಾಗಿ ಶಿಷ್ಯಪ್ರಶಿಷ್ಯರ ಪರಂಪರೆಗಳಿಂದ ಲೋಕವೆಲ್ಲವೂ ವ್ಯಾಪ್ತವಾಗಿರುತ್ತದೆ.

೩೮. ಹೀಗೆಯೇ ಕುಥುಮಿಮುನಿಗೆ ಔರಸ, ರಸಪಾಸತ, ಭಾಗವಿತ್ತಿಗಳೆಂಬ ಮೂವರು ತೇಜಸ್ವಿಗಳಾದ ಶಿಷ್ಯರು ಲೋಕಪ್ರಸಿದ್ಧರಾಗಿರುವರು. ಇವರಿಗೆ ಕೌಥುಮರೆಂಬುದಾಗಿ ಶಿಷ್ಯರು ವಿಖ್ಯಾತರಾಗಿರುವರು.

೩೯. ಶೌರಿದ್ಯು, ಶೃಂಗಿಪುತ್ರನೆಂಬ ಇಬ್ಬರೂ ಸುಪ್ರಸಿದ್ಧವಾದ ವ್ರತಗಳುಳ್ಳವರಾಗಿರುವರು. ನಾರಾಯಣೀಯ, ಸೌಮಿತ್ರಿರೆಂಬ ಇವರಿಬ್ಬರೂ ಸಾಮವೇದದಲ್ಲಿ ನಿಪುಣರಾಗಿರುವರು.

ಪ್ರೋವಾಚ ಸಂಹಿತಾಸ್ತಿಸ್ರಃ ಶೃಂಗಿಪುತ್ರೋ ಮಹಾತಪಾಃ ।
ಚೈಲಃ ಪ್ರಾಚೀನಯೋಗಶ್ಚ ಸುರಾಲಶ್ಚ ದ್ವಿಜೋತ್ತಮಾಃ ॥ ೪೦ ॥

ಪ್ರೋವಾಚ ಸಂಹಿತಾಃ ಷಟ್ ತು ಪರಾಶರ್ಯಸ್ತು ಕೌಥುಮಃ ।
ಆಸುರಾಯಣವೈಶಾಖ್ಯೋ ವೇದವೃದ್ಧಪರಾಯಣಾ ॥ ೪೧ ॥

ಪ್ರಾಚೀನಯೋಗಪುತ್ರಶ್ಚ ಬುದ್ಧಿಮಾಂಶ್ಚ ಪತಂಜಲಿಃ ।
ಕೌಥುಮಸ್ಯ ತು ಭೇದಾಸ್ತೇ ಪಾರಾಶರ್ಯಸ್ಯ ಷಟ್ ಸ್ಮೃತಾಃ ॥
ಲಾಂಗಲಿಃ ಶಾಲಿಹೋತ್ರಶ್ಚ ಷಟ್ ಷಟ್ ಪ್ರೋವಾಚ ಸಂಹಿತಾಃ ॥ ೪೨ ॥

ಭಾಲುಕಿಃ ಕಾಮಹಾನಿಶ್ಚ ಜೈಮಿನಿರ್ಲೋಮಗಾಯಿನಃ ।
ಕಂಡಶ್ಚ ಕೋಲಹಶ್ಚೈವ ಷಡೈತೇ ಲಾಂಗಲಾಃ ಸ್ಮೃತಾಃ ॥
ಏತೇ ಲಾಂಗಲಿನಃ ಶಿಷ್ಯಾಃ ಸಂಹಿತಾ ಯೈಃ ಪ್ರಸಾಧಿತಾಃ ॥ ೪೩ ॥

---

೪೦. ಮಹಾ ತಪಸ್ವಿಯಾದ ಶೃಂಗಿಪುತ್ರನು ಮೂರು ಸಂಹಿತೆಗಳನ್ನು ರಚಿಸಿದನು. ಅವನಿಗೆ ಚೈಲ, ಪ್ರಾಚೀನಯೋಗ, ಸುರಾಲರೆಂಬ ಮೂವರು ವಿಪ್ರೋತ್ತಮರು ವಿಖ್ಯಾತರಾಗಿರುವರು.

೪೧-೪೨. ಪರಾಶರ ವಂಶದಲ್ಲಿ ಹುಟ್ಟಿದ ಕೌಥುಮನು ಆರು ಸಂಹಿತೆಗಳನ್ನು ಹೇಳಿದನು. ಮತ್ತು ವೇದಶಾಸ್ತ್ರಪಾರಂಗತರಾದ ಆಸುರಾಯಣಿ, ವೈಶಾಖ್ಯ, ಪ್ರಾಚೀನಯೋಗಪುತ್ರ, ಜ್ಞಾನಿಯಾದ ಪತಂಜಲಿ ಇವರೇ ಮೊದಲಾದವರಿಗೆ ಉಪದೇಶವಾಡಿದನು. ಇವರೆಲ್ಲರೂ ಪರಾಶರರ ವಂಶೀಕರೂ ಕುಥುಮನ ಶಿಷ್ಯರೂ ಆಗಿರುವರು. ಲಾಂಗಲಿ, ಶಾಲಿಹೋತ್ರರೆಂಬುವರು ಆರು ಆರು ಸಂಹಿತೆಗಳನ್ನು ಶಿಷ್ಯರಿಗೆ ಉಪದೇಶವಾಡಿದರು.

೪೩. ಭಾಲುಕಿ, ಕಾಮಹಾನಿ, ಜೈಮಿನಿ, ಲೋಮಗಾಯಿನ, ಕಂಡ, ಕೌಲಪರೆಂಬ ಇವರು ಲಾಂಗಲಮುನಿಯ ಶಿಷ್ಯರೆಂದು ಪ್ರಖ್ಯಾತರಾಗಿರುವರು. ಇವರು ಲಾಂಗಲಿಯ ಶಿಷ್ಯರಾಗಿಯೂ, ಸಂಹಿತಾಪ್ರವರ್ತಕರಾಗಿಯೂ ಇರುವರು.

ತತೋ ಹಿರಣ್ಯನಾಭಸ್ಯ ಕೃತಶಿಷ್ಯೋ ನೃಪಾತ್ಮಜಃ ।
ಸೋಽಕರೋಚ್ಚ ಚತುರ್ವಿಂಶತ್ಸಂಹಿತಾ ದ್ವಿಪದಾಂ ವರಃ ॥
ಪ್ರೋವಾಚ ಚೈವ ಶಿಷ್ಯೇಭ್ಯೋ ಯೇಭ್ಯಸ್ತಾಂಶ್ಚ ನಿಬೋಧತ ॥ ೪೪ ॥

ರಾಡಶ್ಚ ಮಹವೀರ್ಯಶ್ಚ ಪಂಚಮೋ ವಾಹನಸ್ತಥಾ ।
ಕಾಲಕಃ ಪಾಂಡಕಶ್ಚೈವ ಕಾಲಿಕೋ ರಾಜಕಿಸ್ತಥಾ ॥ ೪೫ ॥

ಪೃಷ್ಟಘ್ನಃ ಪರಿಕೃಷ್ಟಶ್ಚ ಉಲೂಕಲಕ ಏವ ಚ ।
ಯವೀಯಸಶ್ಚ ವೈಶಾಲೋ ಅಂಗುಲೀಯಶ್ಚ ಕೌಶಿಕಃ ॥ ೪೬ ॥

ಸಾಲಿಮಂಜರಿಸತ್ಯಶ್ಚ ಕಾಪೀಯಃ ಕಾನಿಕಶ್ಚ ಯಃ ।
ಪರಾಶರಶ್ಚ ಧರ್ಮಾತ್ಮಾ ಇತಿ ಕ್ರಾಂತಾಸ್ತು ಸಾಮಗಾಃ ॥ ೪೭ ॥

ಸಾಮಗಾನಾಂ ತು ಸರ್ವೇಷಾಂ ಶ್ರೇಷ್ಠೌ ದ್ವೌ ತು ಪ್ರಕೀರ್ತಿತೌ ।
ಪೌಷ್ಯಂಜಿಶ್ಚ ಕೃತಿಶ್ಚೈವ ಸಂಹಿತಾನಾಂ ವಿಕಲ್ಪಕೌ ॥ ೪೮ ॥

---

೪೪. ತರುವಾಯ ಹಿರಣ್ಯನಾಭನ ಶಿಷ್ಯನೂ, ನರವರನೂ ಆದ ರಾಜಕುಮಾರನು ದ್ವಿಪಾದಿಗಳಲ್ಲಿ ಅತ್ಯುತ್ತಮಗಳಾದ ಇಪ್ಪತ್ತುನಾಲ್ಕು ಸಂಹಿತೆಗಳನ್ನು ರಚಿಸಿ, ಯಾವ ಯಾವ ಶಿಷ್ಯರಿಗೆ ಉಪದೇಶಮಾಡಿದನೋ ಆಯಾ ಶಿಷ್ಯರನ್ನು ನಾಮನಿರ್ದೇಶ ಪೂರ್ವಕವಾಗಿ ಹೇಳುವೆನು ಕೇಳಿರೆಂದನು.

೪೫–೪೭. ರಾಡ, ಮಹಾವೀರ್ಯ, ಪಂಚಮ, ವಾಹನ, ತಾಲಕ, ಪಾಂಡಕ, ಕಾಲಿಕ, ರಾಜಿಕ, ಗೌತಮ, ಅಜಬಸ, ಸೋಮರಾಜ, ಪೃಷ್ಠಘ್ನ, ಪರಿಕೃಷ್ಟ, ಉಲೂಖಲಕ, ಯವೀಯಸ, ವೈಶಾಲ, ಅಂಗುಲೀಯ, ಕೌಶಿಕ, ಸಾಲಿಮಂಜರಿ, ಸತ್ಯ, ಕಾಪೀಯ, ಕಾನಿಕ, ಪರಾಶರ, ಧರ್ಮಾತ್ಮನಾದ ಕ್ರಾಂತ ಇವರು ಸಾಮವೇದ ಪಾರಂಗತರಾಗಿರುವರು.

೪೮. ಸಾಮವೇದ ಪಾರಂಗತರಲ್ಲಿ ಪೌಷ್ಯಂಜಿ, ಕೃತಂಜಿಯರೆಂಬ ಇಬ್ಬರು ಶಿಷ್ಯರು ಅತ್ಯುತ್ತಮರಾಗಿಯೂ, ಸುಪ್ರಸಿದ್ಧರಾಗಿಯೂ, ಸಂಹಿತಾವಿಕಲ್ಪಕರಾಗಿಯೂ ಇರುವರು.

**ಅಥರ್ವಾಣಂ ದ್ವಿಧಾ ಕೃತ್ವಾ ಸುಮಂತುರದದದ್ವಿಜಾಃ |**
**ಕಬಂಧಾಯ ಪುನಃ ಕೃತ್ಸ್ನಂ ಸ ಚ ವಿದ್ಯಾಮ್ಯಥಾಕ್ರಮಂ || ೨೯ ||**

**ಕಬಂಧಸ್ತು ದ್ವಿಧಾ ಕೃತ್ವಾ ಪಥ್ಯಾಯೈಕಂ ಪುನರ್ದದೌ |**
**ದ್ವಿತೀಯಂ ವೇದಸ್ಪರ್ಶಾಯ ಸ ಚತುರ್ಧಾಕರೋತ್ ಪುನಃ || ೩೦ ||**

**ಮೋದೋ ಬ್ರಹ್ಮಬಲಶ್ಚೈವ ಪಿಪ್ಪಲಾದಸ್ತಥೈವ ಚ |**
**ಶೌಕ್ಲಾಯನಿಶ್ಚ ಧರ್ಮಜ್ಞಶ್ಚತುರ್ಥಸ್ತಪನಃ ಸ್ಮೃತಃ ||**
**ವೇದಸ್ಪರ್ಶಸ್ಯ ಚತ್ವಾರಃ ಶಿಷ್ಯಾಸ್ತ್ವೇತೇ ದೃಢವ್ರತಾಃ || ೩೧ ||**

**ಪುನಶ್ಚ ತ್ರಿವಿಧಂ ವಿದ್ಧಿ ಪಥ್ಯಾನಾಂ ಭೇದಮುತ್ತಮಂ |**
**ಜಾಜಲಿಃ ಕುಮುದಾದಿಶ್ಚ ತೃತೀಯಃ ಶೌನಕಃ ಸ್ಮೃತಃ || ೩೨ ||**

---

೨೯. ಎಲೈ ಮುನಿವರ್ಯರೇ, ಸುಮಂತುಮುನಿಯು ಅಥರ್ವಣವೇದವನ್ನು ಎರಡು ಭಾಗವಮಾಡಿ ಶಿಷ್ಯರಿಗೆ ಉಪದೇಶಮಾಡಿದನು. ಅವರಲ್ಲಿ ಕಬಂಧನು ಮುಖ್ಯ ಶಿಷ್ಯನಾದ ಕಾರಣ ಅವನಿಗೆ ಕ್ರಮವಾಗಿ ಎಲ್ಲವನ್ನೂ ಉಪದೇಶಮಾಡಿದನು.

೩೦. ಆ ಕಬಂಧನೂ ಕೂಡ ಅದನ್ನು ಎರಡು ಭಾಗವಮಾಡಿ ಪಥ್ಯನಿಗೆ ಒಂದು ಭಾಗವನ್ನೂ, ಎರಡನೆಯ ಭಾಗವನ್ನು ವೇದಸ್ಪರ್ಶನಿಗೂ ಉಪದೇಶಮಾಡಿದನು. ಆ ವೇದಸ್ಪರ್ಶನು ತಾನು ತಿಳಿದಿರುವ ವೇದಭಾಗವನ್ನು ಪುನಃ ನಾಲ್ಕು ಭಾಗಗಳನ್ನಾಗಿ ಮಾಡಿದನು.

೩೧. ಆ ವೇದಸ್ಪರ್ಶನು ನಾಲ್ಕು ಭಾಗಗಳನ್ನೂ ಮೊದಲು ಬ್ರಹ್ಮಬಲ, ಪಿಪ್ಪಲಾದ, ಶುಕ್ಲಾಯನನ ಪುತ್ರನೂ, ಧರ್ಮಜ್ಞನೂ, ನಾಲ್ಕನೆಯವನೂ ಆದ ತಪನ ಈ ನಾಲ್ಕು ಜನರಿಗೆ ಉಪದೇಶಿಸಿದನು. ಈ ನಾಲ್ವರು ಶಿಷ್ಯರೂ ದೃಢವಾದ ವ್ರತವುಳ್ಳವರಾಗಿದ್ದರು.

೩೨. ಸುಮಂತುವಿನ ಶಿಷ್ಯನಾದ ಪಥ್ಯನೂ ತಾನು ತಿಳಿದ ಅಥರ್ವಣ ವೇದವನ್ನು ಮೂರು ಭಾಗವಮಾಡಿ ಜಾಜಲಿ, ಕುಮುದಾದಿ, ಶೌನಕರೆಂಬ ಶಿಷ್ಯರಿಗೆ ಉಪದೇಶಮಾಡಿದನು. ಇವರು ಪಥ್ಯನ ಪರಂಪರೆಗೆ ಸೇರಿದವರಾದರು.

ಶೌನಕಸ್ತು ದ್ವಿಧಾ ಕೃತ್ವಾ ದದಾವೇಕಂ ತು ಬಭ್ರವೇ ।
ದ್ವಿತೀಯಾಂ ಸಂಹಿತಾಂ ಧೀಮಾನ್ ಸೈಂಧವಾಯನಸಂಜ್ಞಿತೇ ॥ ೫೩ ॥

ಸೈಂಧವೋ ಮುಂಜಕೇಶಾಯ ಭಿನ್ನಾ ಸಾ ಚ ದ್ವಿಧಾ ಪುನಃ ।
ನಕ್ಷತ್ರಕಲ್ಪೋ ವೈತಾನಸ್ತೃತೀಯಃ ಸಂಹಿತಾವಿಧಿಃ ॥
ಚತುರ್ಥೋಽಂಗಿರಸಃ ಕಲ್ಪೋ ಶಾಂತಿಕಲ್ಪಶ್ಚ ಪಂಚಮಃ ॥ ೫೪ ॥

ಶ್ರೇಷ್ಠಸ್ತ್ವಥರ್ವಣೋ ಹ್ಯೇತೇ ಸಂಹಿತಾನಾಂ ವಿಕಲ್ಪನಾಃ ।
ಷಟ್‌ಶಃ ಕೃತ್ವಾ ಮಯಾಪ್ಯುಕ್ತಂ ಪುರಾಣಮೃಷಿಸತ್ತಮಾಃ ॥ ೫೫ ॥

ಆತ್ರೇಯಃ ಸುಮತಿರ್ಧೀಮಾನ್ ಕಾಶ್ಯಪೋ ಹ್ಯಕೃತವ್ರಣಃ ।
ಭಾರದ್ವಾಜೋಽಗ್ನಿವರ್ಚಾಶ್ಚ ವಸಿಷ್ಠೋ ಮಿತ್ರಯುಶ್ಚ ಯಃ ॥
ಸಾವರ್ಣಿಃ ಸೋಮದತ್ತಿಸ್ತು ಸುಶರ್ಮಾ ಶಾಂಶಪಾಯನಃ ॥ ೫೬ ॥

---

೫೩. ಆ ಶೌನಕನೂ ಕೂಡ ತಾನು ತಿಳಿವ ಭಾಗವನ್ನು ಬಭ್ರುವಿಗೂ, ಮತ್ತೊಂದನ್ನು ದ್ವಿತೀಯ ಸಂಹಿತೆಯನ್ನು ಜ್ಞಾನಿಯಾದ ಸೈಂಧವಾಯನನಿಗೂ, ಉಪದೇಶಿಸಿದನು

೫೪-೫೫. ಆ ಸೈಂಧವನು ಮುಂಜಿಕೇಶನಿಗೆ ಅಥರ್ವಣಸಂಹಿತೆಯನ್ನು ಕಲಿಸಿದನು. ಅವನೂ ಕೂಡ ಅದನ್ನು ಎರಡುಭಾಗ ಮಾಡಿದನು. ಹೀಗೆ ಅಥರ್ವಣ ವೇದದಲ್ಲಿ ಉತ್ತಮರಾದವರು ಅನೇಕರಿದ್ದರು. ಅವರಲ್ಲಿಯೂ ಕೂಡ ನಕ್ಷತ್ರಕಲ್ಪ, ವೈತಾನಕಲ್ಪ. ಸಂಹಿತಾವಿಧಿಕಲ್ಪ, ಅಂಗಿರಸಕಲ್ಪ, ಶಾಂತಿಕಲ್ಪರೆಂಬ ಈ ಐದು ಜನರೂ ಪ್ರಖ್ಯಾತಪುರುಷರಾಗಿದ್ದರು. ಈ ಐದು ಜನರೂ ಅಥರ್ವವೇದದಲ್ಲಿ ಪ್ರಸಿದ್ಧರೂ, ಸಂಹಿತಾಪ್ರವರ್ತಕರೂ, ಆಗಿದ್ದರು. ಅಥವಾ ಅಥರ್ವವೇದದಲ್ಲಿ ಈ ಐದು ಕಲ್ಪಗಳೂ ಮುಖ್ಯವಾಗಿದ್ದುವು. ಎಲೈ ಮುನಿವರ್ಯರೇ, ನಾನೂ ಕೂಡ ಪುರಾಣವನ್ನು ಆರುಭಾಗಮಾಡಿ ಶಿಷ್ಯರಿಗೆ ಉಪದೇಶಮಾಡಿದೆನು.

೫೬-೫೭. ಆತ್ರೇಯ, ಸುಮತಿ, ಜ್ಞಾನಿಯಾದ ಕಾಶ್ಯಪ, ಜಿತೇಂದ್ರಿಯನಾದ ಭಾರದ್ವಾಜ, ಅಗ್ನಿವರ್ಚಸ್ಕನೂ, ಮಿತ್ರಯುನಾಮಕನೂ, ಆದ ವಸಿಷ್ಠ, ಸಾವರ್ಣಿ. ಸೋಮದತ್ತ, ಸುಶರ್ಮಾಣ, ಮತ್ತು ಶಾಂಶಪಾಯನ, ಎಂಬ ಈ ನವ ಶಿಷ್ಯರು

**ಏತೇ ಶಿಷ್ಯಾ ಮಮ ಬ್ರಹ್ಮನ್ ಪುರಾಣೇಷು ದೃಢವ್ರತಾಃ ।**
**ತ್ರಿಭಿಸ್ತ್ರಿಸ್ರಃ ಕೃತಾಸ್ತಿಸ್ರಃ ಸಂಹಿತಾಃ ಪುನರೇವ ಹಿ ॥ ೫೭ ॥**

**ಕಾಶ್ಯಪಃ ಸಂಹಿತಾ ಕರ್ತಾ ಸಾವರ್ಣಿಃ ಶಾಂಶಪಾಯನಃ ।**
**ಸಾಮಿಕಾ ಚ ಚತುರ್ಥೀ ಸ್ಯಾತ್ಸಾ ಚೈಷಾ ಪೂರ್ವಸಂಹಿತಾ ॥ ೫೮ ॥**

**ಸರ್ವಾಸ್ತಾ ಹಿ ಚತುಷ್ಪಾದಾಃ ಸರ್ವಾಶ್ಚೈಕಾರ್ಥವಾಚಿಕಾಃ ।**
**ಪಾಠಾಂತರೇ ಪೃಥಗ್ಭೂತಾ ವೇದಶಾಖಾ ಯಥಾ ತಥಾ ॥ ೫೯ ॥**

**ಲೋಮಹರ್ಷಣಿಕಾ ಮೂಲಾಸ್ತತಃ ಕಾಶ್ಯಪಿಕಾಃ ಪರಾಃ ।**
**ಸಾವರ್ಣಿಕಾಸ್ತೃತೀಯಾಸ್ತಾ ಯಜುರ್ವಾಕ್ಯಾರ್ಥಪಂಡಿತಾಃ ॥ ೬೦ ॥**

---

ಪುರಾಣಗಳಲ್ಲಿ ದೃಢವಾದ ನಂಬಿಕೆಯುಳ್ಳವರಾಗಿರುವರು. ಪುರಾಣಜ್ಞರಾದ ಈ ನನ್ನ ಶಿಷ್ಯರುಗಳಲ್ಲಿ ಮೂವರು ಶಿಷ್ಯರು ಮೂರು ಸಂಹಿತೆಗಳನ್ನೂ ಕೂಡ ರಚಿಸಿರುವರು.

೫೮. ಕಾಶ್ಯಪ, ಸಾವರ್ಣಿ. ಶಾಂಶಪಾಯನ, ಈ ಮೂವರು ಶಿಷ್ಯರು ಪುರಾಣಜ್ಞರೂ, ಸಂಹಿತಾಕರ್ತೃಗಳೂ ಆಗಿರುವರು. ಸಾಮಿಕೆಯೆಂಬುವುದು ನಾಲ್ಕನೆಯ ಸಂಹಿತೆಯಾಗಿದೆ. ಇವಕ್ಕೆ ಪೂರ್ವಸಂಹಿತೆಯೆಂಬ ನಾಮವು ಪ್ರಸಿದ್ಧವಾಗಿದೆ.

೫೯. ಮೇಲೆ ನಿರೂಪಿಸಿರುವ ಸಂಹಿತೆಗಳೆಲ್ಲವೂ ನಾಲ್ಕು ಪಾದಗಳುಳ್ಳವುಗಳಾಗಿಯೂ, ಏಕಾರ್ಥವಾಚಕಗಳಾಗಿಯೂ, ಇರುತ್ತವೆ. ವೇದಶಾಖೆಗಳಂತೆ ಪಾಠಾಂತಯುಕ್ತವಾಗಿಯೂ ಇವೆ. ಶಾಂಶಪಾಯನ ಶಾಖೆಯನ್ನು ಬಿಟ್ಟು ಉಳಿದ ಶಾಖೆಗಳೆಲ್ಲವೂ ನಾಲ್ಕುಸಾವಿರವುಳ್ಳವುಗಳಾಗಿವೆ.

೬೦. ಲೋಮಹರ್ಷಮುನಿಯ ಸಂಹಿತೆಗಳು ಎಲ್ಲಾ ಸಂಹಿತೆಗಳಿಗೂ ಮೂಲವಾಗಿವೆ. ಅದರ ತರುವಾಯ ಕಾಶ್ಯಪಸಂಹಿತೆಗಳು ಉತ್ಕೃಷ್ಟಗಳೂ, ಸುಪ್ರಸಿದ್ಧಗಳೂ, ಆಗಿವೆ. ಸಾವರ್ಣಿಮುನಿಯ ಸಂಹಿತೆಗಳು ಮೂರನೆಯವುಗಳಾಗಿವೆ. ಇವರೆಲ್ಲರೂ ಯಜುರ್ವೇದದ ವಾಕ್ಯಾರ್ಥಗಳಲ್ಲಿ ಪಂಡಿತರಾಗಿರುವರು.

ಶಾಂಶಪಾಯನಿಕಾಶ್ಚಾನ್ಯಾ ನೋದನಾರ್ಥವಿಭೂಷಿತಾಃ ।
ಸಹಸ್ರಾಣಿ ಋಚಾಮಷ್ಟೌ ಷಟ್‌ಶತಾನಿ ತಥೈವ ಚ ॥ ೬೧ ॥

ಏತಾಃ ಪಂಚದಶಾನ್ಯಾಶ್ಚ ದಶಾನ್ಯಾ ದಶಭಿಸ್ತಥಾ ।
ವಾಲಖಿಲ್ಯಾಃ ಸಸುಪ್ರೈಖಾಃ ಸಸಾವರ್ಣಾಃ ಪ್ರಕೀರ್ತಿತಾಃ ॥ ೬೨ ॥

ಅಷ್ಟೌ ಸಾಮಸಹಸ್ರಾಣಿ ಸಾಮಾನಿ ಚ ಚತುರ್ದಶ ।
ಆರಣ್ಯಕಂ ಸಹೋಮಂ ಚ ಏತದ್ಗಾಯಂತಿ ಸಾಮಗಾಃ ॥ ೬೩ ॥

ದ್ವಾದಶೈವ ಸಹಸ್ರಾಣಿ ಛಂದ ಆಧ್ವರ್ಯವಂ ಸ್ಮೃತಂ ।
ಯಜುಷಾಂ ಬ್ರಾಹ್ಮಣಾನಾಂ ಚ ಯಥಾ ವ್ಯಾಸೋ ವ್ಯಕಲ್ಪಯತ್ ॥ ೬೪ ॥

---

೬೧. ಶಾಂಶಪಾಯನ ಸಂಹಿತೆಗಳನ್ನು ಬಿಟ್ಟು ಉಳಿದ ಸಂಹಿತೆಗಳೆಲ್ಲವೂ ವಿಶೇಷಾರ್ಥಗಳಿಂದ ಮಂಡಿತಗಳಾಗಿ ಆ ಸಂಹಿತೆಗಳಲ್ಲಿ ಎಂಟುಸಾವಿರದ ಆರುನೂರು ಋಕ್ಕುಗಳು ಇರುತ್ತವೆ.

೬೨. ಮೇಲೆ ಹೇಳಿದ ಸಂಹಿತೆಗಳಲ್ಲದೇ ಹದಿನೈದು ಶಾಖೆಗಳಿವೆಯೆಂದು ಕೆಲವರು ಹೇಳುವರು. ಮತ್ತೆ ಕೆಲವರು ಹತ್ತು ಶಾಖೆಗಳು ಪ್ರಸಿದ್ಧಗಳಾಗಿವೆ ಎಂದು ಹೇಳುವರು. ಆ ಸಂಹಿತೆಗಳ ಪ್ರವರ್ತಕರು ವಾಲಖಿಲ್ಯರೂ ಸಸುಪ್ರೈಖರೂ ಸಾವರ್ಣಿಗಳೂ ಎಂದು ಪ್ರಖ್ಯಾತರಾಗಿರುವರು.

೬೩. ಸಾಮವೇದಗಳನ್ನು ತಿಳಿದ ಮುನಿಗಳು ಸಾಮವೇದವು ಎಂಟುಸಾವಿರದ ಹದಿನಾಲ್ಕು ಸಾಮಗಳಿಂದ ಸಹಿತವಾಗಿದೆಯೆಂದು ಹೇಳುವರು. ಸಾಮಜ್ಞರು ಅವುಗಳಲ್ಲಿ ಆರಣ್ಯಕ ಸಹೋಮಗಳೆಂಬ ಸಾಮಗಳನ್ನು ವಿಶೇಷವಾಗಿ ಗಾನಮಾಡುವರು.

೬೪. ಅಧ್ವರ್ಯುಸಂಬಂಧಿಯಾದ ಛಂದಸ್ಸು ಹನ್ನೆರಡುಸಹಸ್ರ ಸಂಖ್ಯೆಯಾಗಿದೆಯೆಂದು ಜ್ಞಾನಿಗಳು ಹೇಳುತ್ತಾರೆ. ಯಜುರ್ವೇದವೂ ಬ್ರಾಹ್ಮಣಭಾಗವೂ ಕೂಡ ಅದೇ ರೀತಿಯಲ್ಲಿಯೇ ವ್ಯಸ್ತ್ರಕವಾಗಿವೆ.

**ಸಗ್ರಾಮ್ಯಾರಣ್ಯಕಂತತ್ಸ್ಯಾತ್ಸಮಂತ್ರಕರಣಂ ತಥಾ ।**
**ಅತಃ ಪರಂ ಕಥಾನಾಂ ತು ಪೂರ್ವಾ ಇತಿ ವಿಶೇಷಣಂ || ೬೫ ||**

**ಗ್ರಾಮ್ಯಾರಣ್ಯಂ ಸಮಂತ್ರಂ ಚ ಋಗ್‌ಬ್ರಾಹ್ಮಣಯಜುಃ ಸ್ಮೃತಂ ।**
**ತಥಾ ಹಾರಿದ್ರವೀಯಾಣಾಂ ಖಿಲಾನ್ಯುಪಖಿಲಾನಿ ಚ ॥**
**ತಥೈವ ತೈತ್ತಿರೀಯಾಣಾಂ ಪರಕ್ಷುದ್ರಾ ಇತಿ ಸ್ಮೃತಂ || ೬೬ ||**

**ದ್ವೇ ಸಹಸ್ರೇ ಶತನ್ಯೂನೇ ವೇದೇ ವಾಜಸನೇಯಕೇ ।**
**ಋಗ್ಗಣಃ ಪರಿಸಂಖ್ಯಾತೋ ಬ್ರಾಹ್ಮಣಂ ತು ಚತುರ್ಗಣಂ || ೬೭ ||**

**ಅಷ್ಟೌ ಸಹಸ್ರಾಣಿ ಶತಾನಿ ಚಾಷ್ಟೌ**
**ಅಶೀತಿರನ್ಯಾನ್ಯಧಿಕಶ್ಚ ಪಾದಃ ।**
**ಏತತ್ಪ್ರಮಾಣಂ ಯಜುಷಾಮೃಚಾಂ ಚ**
**ಸಶುಕ್ರಿಯಂ ಸಾಖಿಲಯಾಜ್ಞವಲ್ಕ್ಯಂ || ೬೮ ||**

---

೬೫. ಅವುಗಳಲ್ಲಿ ಸಗ್ರಾಮ್ಯ, ಆರಣ್ಯಕ, ಸಮಂತ್ರಕರಣವೆಂಬ ಭಾಗಗಳು ಇವೆ. ಅವರ ಮುಂದಿನ ಕಥಾಭಾಗಗಳಿಗೆ ಪೂರ್ವಕಥೆಗಳೆಂದು ನಾಮವು ಸಂಭವಿಸಿರುತ್ತವೆ.

೬೬. ಋಕ್ಕು, ಬ್ರಾಹ್ಮಣವೆಂಬ, ಯಜುರ್ವೇದಗಳು, ಗ್ರಾಮ್ಯ, ಅರಣ್ಯ, ಸಮಾತ್ರವೆಂಬುದಾಗಿ ಮೂರು ಪ್ರಭೇದವುಳ್ಳವುಗಳಾಗಿವೆ. ಅದರಂತೆಯೇ ಹಾರಿದ್ರವೀಯಗಳು ಖಿಲ, ಉಪಖಿಲವೆಂಬುದಾಗಿ ಎರಡು ಪ್ರಕಾರಗಳಿವೆ. ಅದರಂತೆ ತೈತ್ತರೀಯವೂ ಸಹ ಪರಕ್ಷುದ್ರವೆಂದು ಪ್ರಖ್ಯಾತವಾಗಿದೆ.

೬೭. ವಾಜಸನೇಯಕ ವೇದಭಾಗವಲ್ಲಿ ಋಕ್ಕುಗಳು ಇನ್ನೂರು ಕಡಿಮೆಯಾದ ಎರಡು ಸಹಸ್ರಗಳಾಗಿವೆ. ಅಂದರೆ ಒಂದು ಸಹಸ್ರದ ಎಂಟುನೂರು ಋಕ್ಕುಗಳಿವೆ. ಬ್ರಾಹ್ಮಣ ಭಾಗವಾದರೋ ಇದಕ್ಕೆ ನಾಲ್ಕರಷ್ಟು ಅಧಿಕವಾಗಿದೆ. ಏಳುಸಾವಿರದ ಇನ್ನೂರು ಋಕ್ಕುಗಳಿವೆ.

೬೮. ಶುಕ್ರಿಯೆಯಿಂದಲೂ ಸಮಸ್ತವಾದ ಯಾಜ್ಞ್ಯವಲ್ಕ್ಯದಿಂದಲೂ, ಸಹಿತವಾದ ಯಜುರ್ವೇದದ ಋಕ್ಕುಗಳ ಪ್ರಮಾಣವು ಎಂಟುಸಾವಿರದ ಎಂಟುನೂರ ಎಂಭತ್ತಾಗಿದೆ.

ತಥಾ ಚರಣವಿದ್ಯಾನಾಂ ಪ್ರಮಾಣಂ ಸಂಹಿತಾಂ ಶೃಣು ।
ಷಟ್ ಸಾಹಸ್ರಮೃಚಾಮುಕ್ತಮೃಚಃ ಷಟ್‌ವಿಂಶತಿಃ ಪುನಃ ॥
ಏತಾವದಧಿಕಂ ತೇಷಾಂ ಯಜುಃ ಕಾಮಂ ವಿವಕ್ಷ್ಯತಿ ॥ ೬೯ ॥

ಏಕಾದಶ ಸಹಸ್ರಾಣಿ ದಶ ಚಾನ್ಯಾ ದಶೋತ್ತರಾಃ ।
ಋಚಾಂ ದಶ ಸಹಸ್ರಾಣಿ ಅಶೀತಿತ್ರಿಶತಾನಿ ಚ ॥ ೭೦ ॥

ಸಹಸ್ರಮೇಕಂ ಮಂತ್ರಾಣಾಮೃಚಾಮುಕ್ತಂ ಪ್ರಮಾಣತಃ ।
ಏತಾವದ್ಭೃಗುವಿಸ್ತಾರಮನ್ಯಚ್ಚಾಥರ್ವಿಕಂ ಬಹು ॥ ೭೧ ॥

ಋಚಾಮಥರ್ವಣಾಂ ಪಂಚ ಸಹಸ್ರಾಣಿ ವಿನಿಶ್ಚಯಃ ।
ಸಹಸ್ರಮನ್ಯದ್ವಿಜ್ಞೇಯಮೃಷಿಭಿರ್ವಿಂಶತಿಂ ವಿನಾ ॥ ೭೨ ॥

---

೬೯. ಎಲೈ ಮುನಿಗಳೇ, ಅದರಂತೆಯೇ ಚರಕವಿದ್ಯೆಯ ಸಂಹಿತಾಪ್ರಮಾಣವನ್ನು ತಿಳಿಸುವೆನು ಕೇಳಿರಿ. ಆ ಚರಕದಲ್ಲಿ ಆರುಸಾವಿರದ ಇಪ್ಪತ್ತಾರು ಋಕ್ಕುಗಳು ಉಪಲಬ್ಧವಾಗಿವೆ. ಇಷ್ಟು ಮಾತ್ರ ಅವುಗಳಲ್ಲಿ ಅಧಿಕವಾಗಿದೆ. ಕೆಲವರು ಯಜುರ್ವೇದವನ್ನು ಸ್ವೇಚ್ಛೆಯಾಗಿ ಹೇಳಲಿಚ್ಛಿಸುತ್ತಾರೆ.

೭೦. ಮತ್ತೆ ಕೆಲವರು ಯಜುರ್ವೇದದಲ್ಲಿ ಹನ್ನೊಂದುಸಾವಿರದ ಇಪ್ಪತ್ತು ಋಕ್ಕುಗಳಿವೆಯೆಂದು ಹೇಳುವರು. ಇತರರು ಹತ್ತುಸಾವಿರದ ಮುನ್ನೂರ ಎಂಭತ್ತು ಋಕ್ಕುಗಳಿವೆ ಎಂದು ಹೇಳುವರು. ಹೀಗೆ ಮತಭೇದಗಳಿವೆ.

೭೧. ಯಜುರ್ವೇದದಲ್ಲಿ ಮಂತ್ರಗಳು ಒಂದು ಸಹಸ್ರಗಳಿವೆ. ಋಕ್ಕುಗಳೂ ಕೂಡ ಪ್ರಮಾಣದಲ್ಲಿ ಒಂದೇ ವಿಧವಾಗಿವೆ. ಈ ವಿಷಯಗಳು ಭೃಗುಮುನಿಯ ಮತಾನುಸಾರವಾಗಿ ವಿವರಿಸಿರುತ್ತವೆ. ಅಥರ್ವ ವಿದ್ಯೆಯಾದರೋ ಬಹು ವಿಸ್ತಾರವಾಗಿದೆಯೆಂದು ಮಹಾತ್ಮರು ಹೇಳುವರು.

೭೨. ಅಥರ್ವಣ ವೇದದಲ್ಲಿ ಐದುಸಾವಿರ ಋಕ್ಕುಗಳಿವೆಯೆಂದು ಜ್ಞಾನಿಗಳ ನಿಶ್ಚಯವಾದ ವಿಷಯವಾಗಿದೆ. ಮತ್ತೆ ಕೆಲವರು ಆರುಸಾವಿರಕ್ಕೆ ಇಪ್ಪತ್ತು ಕಡಿಮೆ ಎಂದು ಹೇಳುವರು. ಅವರ ಮತದಲ್ಲಿ ಐದುಸಾವಿರದ ಒಂಭೈನ್ನೂರ ಎಂಭತ್ತು ಋಕ್ಕುಗಳಿವೆ ಎಂದು ಹೇಳುವರು.

ಏತದಂಗಿರಸಾ ಪ್ರೋಕ್ತಂ ತೇಷಾಮಾರಣ್ಯಕಂ ಪುನಃ ।
ಇತಿ ಸಂಖ್ಯಾ ಪ್ರಸಂಖ್ಯಾತಾ ಶಾಖಭೇದಾಸ್ತಥೈವ ಚ ॥ ೬೩ ॥

ಕರ್ತಾರಶ್ಚೈವ ಶಾಖಾನಾಂ ಭೇದೇ ಹೇತುಸ್ತಥೈವ ಚ ।
ಸರ್ವಮನ್ವಂತರೇಷ್ವೇವಂ ಶಾಖಭೇದಾಃ ಸಮಾಃ ಸ್ಮೃತಾಃ ॥ ೬೪ ॥

ಪ್ರಾಜಾಪತ್ಯಾ ಶ್ರುತಿರ್ನಿತ್ಯಾ ತ ದ್ವಿಕಲ್ಪಾಸ್ತ್ವಿಮೇ ಸ್ಮೃತಾಃ ।
ಅನಿತ್ಯಭಾವಾದ್ದೇವಾನಾಂ ಮಂತ್ರೋತ್ಪತ್ತಿಃ ಪುನಃ ಪುನಃ ॥ ೬೫ ॥

ಮನ್ವಂತರಾಣಾಂ ಕ್ರಿಯತೇ ಸುರಾಣಾಂ ನಾಮನಿಶ್ಚಯಃ ।
ದ್ವಾಪರೇಷು ಪುನರ್ಭೇದಾಃ ಶ್ರುತಾನಾಂ ಪರಿಕೀರ್ತಿತಾಃ ॥ ೬೬ ॥

---

೬೩-೬೪. ಅಂಗಿರಸಮಹರ್ಷಿಗಳು ಈ ಸಂಖ್ಯೆಯನ್ನು ಹೇಳಿರುವರು. ಆರಣ್ಯಕಭಾಗವೂ ಸಹ ಇದೇ ರೀತಿಯಾಗಿಯೇ ಇರುತ್ತದೆ. ಹೀಗೆ ಸಂಖ್ಯೆಯು, ಪ್ರಸಂಖ್ಯೆಯೂ, ಶಾಖಾಭೇದಗಳೂ ಸಹ ವರ್ಣಿತವಾಗಿವೆ. ಇದೇ ಕ್ರಮದಲ್ಲಿಯೇ ಶಾಖಾಕರ್ತೃಗಳನ್ನೂ ಶಾಖಾಭೇದಗಳು ಆಗಲು ಕಾರಣಗಳನ್ನೂ ಸಹ ನಿರೂಪಿಸಿರುತ್ತೇನೆ. ಈ ವರ್ತಮಾನಮನ್ವಂತರದಂತೆ ಅತೀತಾನಾಗತಮನ್ವಂತರಗಳಲ್ಲಿಯೂ ಕೂಡ ಮತಭೇದಗಳೂ, ಶಾಖಾಭೇದಗಳೂ ಸಹ ಇರುತ್ತವೆ.

೬೫. ಬ್ರಹ್ಮದೇವನಿಂದ ವ್ಯಕ್ತವಾದ ಶ್ರುತಿಯು ನಿತ್ಯವಾಗಿರುವುದು. ಹೀಗೆ ನಿತ್ಯವಾದ ಶ್ರುತಿಯ ವಿಕಲ್ಪಗಳು ಮೇಲೆ ನಿರೂಪಿಸಿರುವ ಕ್ರಮವಾಗಿವೆ. ದೇವತೆಗಳು ಅನಿತ್ಯರಾದ ಕಾರಣ ತದ್ವಿಷಯಕವಾದಮಂತ್ರಗಳು ಅರ್ಥತಃ ಏಕರೂಪವಾದರೂ ಆನುಪೂರ್ವಿಯಲ್ಲಿ ಅನಿತ್ಯವಾಗಿರುವುವು.

೬೬. ಆಯಾ ಮನ್ವಂತರಗಳಲ್ಲಿ ದೇವತೆಗಳ ನಾಮನಿರ್ಣಯಗಳಾಗುತ್ತವೆ. ಅದರಲ್ಲಿಯೂ ದ್ವಾಪರಯುಗದಲ್ಲಿ ಶ್ರುತವಾದ ಮಂತ್ರಗಳ ಪ್ರಭೇದಗಳು ವಿಶೇಷವಾಗಿ ಉಂಟಾಗುವುವು.

ಏವಂ ವೇದಂತದಾನ್ಯಸ್ಯ ಭಗವಾನೃಷಿಸತ್ತಮಃ ।
ಶಿಷ್ಯೇಭ್ಯಶ್ಚ ಪುನರ್ದತ್ವಾ ತಪಸ್ತಪ್ತುಂ ಗತೋ ವನಂ ॥
ತಸ್ಯ ಶಿಷ್ಯಪ್ರಶಿಷ್ಯೈಸ್ತು ಶಾಖಾಭೇದಾಸ್ತ್ವಿಮೇ ಕೃತಾಃ ॥ ೭೭ ॥

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಸ್ತ್ವೇತಾಶ್ಚತುರ್ದಶ ॥ ೭೮ ॥

ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೈವ ತೇ ತ್ರಯಃ ।
ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾಸ್ತ್ವಷ್ಟಾದಶೈವ ತು ॥ ೭೯ ॥

ಜ್ಞೇಯಾ ಬ್ರಹ್ಮರ್ಷಯಃ ಪೂರ್ವಂ ತೇಭ್ಯೋ ದೇವರ್ಷಯಃ ಪುನಃ ।
ರಾಜರ್ಷಯಃ ಪುನಸ್ತೇಭ್ಯ ಋಷಿಪ್ರಕೃತಯಸ್ತ್ರಯಃ ॥
ತೇಭ್ಯ ಋಷಿಪ್ರಕೃತಯೋ ಮುನಿಭಿಃ ಶಂಸಿತವ್ರತೈಃ ॥ ೮೦ ॥

---

೭೭. ಹೀಗೆ ಋಷ್ಯುತ್ತಮರೂ, ಪೂಜ್ಯರೂ ಆದ ವೇದವ್ಯಾಸರು ವೇದಗಳನ್ನೂ ಅವನಾ ಶಿಷ್ಯರಿಗೆ ಉಪದೇಶಮಾಡಿ ತಪಶ್ಚರಣೆಗಾಗಿ ಬದರಿಕಾಶ್ರಮವನ್ನು ಹೊಂದಿದರು. ಆ ವೇದವ್ಯಾಸರ ವೇದದ ಶಿಷ್ಯಪ್ರಶಿಷ್ಯರು ಹೀಗೆ ಶಾಖಾಭೇದಗಳನ್ನು ಏರ್ಪಡಿಸಿದರು.

೭೮. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂದು ನಾಲ್ಕು ವೇದಗಳು, ವ್ಯಾಕರಣಾದಿ ಆರು ಅಂಗಗಳು, ಮೀಮಾಂಸಶಾಸ್ತ್ರ, ನ್ಯಾಯ ಶಾಸ್ತ್ರ, ಧರ್ಮಶಾಸ್ತ್ರ ಮತ್ತು ಪುರಾಣ ಇವೆಲ್ಲವೂ ಕೂಡಿದರೆ ವಿದ್ಯೆಯು ಹದಿನಾಲ್ಕು ವಿಧವಾಗುವುದು.

೭೯. ಮೇಲೆ ಹೇಳಿದ ಹದಿನಾಲ್ಕು ವಿದ್ಯೆಗಳ ಜೊತೆಯಲ್ಲಿ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ ಇವು ನಾಲ್ಕೂ ಸೇರಿದರೆ ಹದಿನೆಂಟು ವಿದ್ಯೆಗಳಾಗುತ್ತವೆಯೆಂದು ಹೇಳುವರು.

೮೦. ಆದಿಯಲ್ಲಿ ಬ್ರಹ್ಮರ್ಷಿಗಳಿದ್ದರು. ಅನಂತರ ಅವರಿಂದ ದೇವರ್ಷಿಗಳೂ ಅವರಿಂದ ರಾಜರ್ಷಿಗಳೂ ಪ್ರಾದುರ್ಭೂತರಾದರು. ಹೀಗೆ ಮಹರ್ಷಿಗಳು ಮೂರು ವಿಧರಾಗಿರುವರು. ಅವರಿಂದ ಋಷಿಪ್ರಕೃತಿಗಳೂ, ಪ್ರಖ್ಯಾತವಾದ ವ್ರತವುಳ್ಳ ಮುನಿಗಳೂ ಉತ್ಪನ್ನರಾದರು.

ಕಶ್ಯಪೇಷು ವಸಿಷ್ಠೇಷು ತಥಾ ಭೃಗ್ವಂಗಿರೋ ತ್ರಿಷು ।
ಪಂಚಸ್ವೇತೇಷು ಜಾಯಂತೇ ಗೋತ್ರೇಷು ಬ್ರಹ್ಮವಾದಿನಃ ॥
ಯಸ್ಮಾದೃಷಂತಿ ಬ್ರಹ್ಮಾಣಂ ತೇನ ಬ್ರಹ್ಮರ್ಷಯಃ ಸ್ಮೃತಾಃ ॥ ೮೧ ॥

ಧರ್ಮಸ್ಯಾಥ ಪುಲಸ್ತ್ಯಸ್ಯ ಕ್ರತೋಶ್ಚ ಪುಲಹಸ್ಯ ಚ ।
ಪ್ರತ್ಯೂಷಸ್ಯ ಪ್ರಭಾಸಸ್ಯ ಕಶ್ಯಪಸ್ಯ ತಥಾ ಪುನಃ ॥ ೮೨ ॥

ದೇವರ್ಷಯಃ ಸುತಾಸ್ತೇಷಾಂ ನಾಮತಸ್ತಾನ್ನಿಬೋಧತ ।
ದೇವರ್ಷೀ ಧರ್ಮಪುತ್ರೌ ತು ನರನಾರಾಯಣಾವುಭೌ ॥ ೮೩ ॥

ವಾಲಖಿಲ್ಯಾಃ ಕ್ರತೋಃ ಪುತ್ರಾಃ ಕರ್ದಮಃ ಪುಲಹಸ್ಯ ತು ।
ಕುಬೇರಶ್ಚೈವ ಪೌಲಸ್ತ್ಯಃ ಪ್ರತ್ಯೂಷಸ್ಯಾಚಲಃ ಸ್ಮೃತಃ ॥ ೮೪ ॥

ಪರ್ವತೋ ನಾರದಶ್ಚೈವ ಕಶ್ಯಪಸ್ಯಾತ್ಮಜಾವುಭೌ ।
ಋಷಂತಿ ದೇವಾನ್ ಯಸ್ಮಾತ್ತೇ ತಸ್ಮಾದ್ದೇವರ್ಷಯಃ ಸ್ಮೃತಾಃ ॥ ೮೫ ॥

---

೮೧. ಕಶ್ಯಪ, ಅತ್ರಿ, ವಸಿಷ್ಠ, ಭೃಗು, ಅಂಗಿರಸ ಈ ಐವರು ಮಹರ್ಷಿಗಳೂ ಬ್ರಹ್ಮರ್ಷಿಗಳು. ಮತ್ತು ಈ ಐದುಜನ ಬ್ರಹ್ಮರ್ಷಿಗಳ ವಂಶದಲ್ಲಿ ಹುಟ್ಟಿದ ಋಷಿಗಳೆಲ್ಲರೂ ಬ್ರಹ್ಮರ್ಷಿಗಳಾಗಿರುವರು. ಯಾರು ತಮ್ಮ ದಿವ್ಯಜ್ಞಾನದಿಂದ ಬ್ರಹ್ಮನನ್ನು ಹೊಂದುವ ಯೋಗ್ಯತೆಯನ್ನು ಪಡೆಯುತ್ತಾರೆಯೋ ಅವರೇ ಬ್ರಹ್ಮರ್ಷಿಗಳಾಗಿರುವರೆಂದು ಮಹಾತ್ಮರು ಹೇಳುತ್ತಾರೆ.

೮೨-೮೩. ಧರ್ಮ, ಪುಲಸ್ತ್ಯ, ಕ್ರತು, ಪುಲಹ, ಪ್ರತ್ಯೂಷ, ಪ್ರಭಾಸ ಮತ್ತು ಕಾಶ್ಯಪ ಇವರೂ, ಇವರ ವಂಶದಲ್ಲಿ ಹುಟ್ಟಿದವರೆಲ್ಲರೂ ದೇವರ್ಷಿಗಳಾಗಿರುವರು. ಅವರನ್ನು ನಾಮನಿರ್ದೇಶಪೂರ್ವಕವಾಗಿ ತಿಳಿಸುವೆನು ಕೇಳಿರೆಂದನು. ಧರ್ಮದೇವನ ಪುತ್ರರಾದ ನರನಾರಾಯಣರಿಬ್ಬರೂ ದೇವರ್ಷಿಗಳಾಗಿರುವರು.

೮೪-೮೫. ಕ್ರತುಪುತ್ರರಾದ ವಾಲಿಖಿಲ್ಯರೂ, ಪುಲಹನ ಕುವರನಾದ ಕರ್ದಮನೂ, ಪುಲಸ್ತ್ಯನಸುತನಾದ ಕುಬೇರನೂ, ಪ್ರತ್ಯೂಷನ ಮಗನಾದ ಚಲನು, ಕಶ್ಯಪನ ಆತ್ಮಜರಾದ ಪರ್ವತನಾರದರಿಬ್ಬರು ಇವರು ದೇವರ್ಷಿಗಳಾಗಿರುವರು. ಯಾರು ಜ್ಞಾನಾದಿಗಳಿಂದ ದೇವತೆಗಳನ್ನು ಹೊಂದುವರೋ ಅವರು ದೇವರ್ಷಿಗಳಾಗಿರುವರು.

ಮಾನವೇ ವೈಷಯೇ ವಂಶೇ ಐಲವಂಶೇ ಚ ಯೇ ನೃಪಾಃ ।
ಐಲಾ ಐಕ್ಷ್ವಾಕನಾಭಾಗಾ ಜ್ಞೇಯಾ ರಾಜರ್ಷಯಸ್ತು ತೇ ॥ ೮೬ ॥

ಋಷಂತಿ ರಂಜನಾದ್ಯಸ್ಮಾತ್ಪ್ರಜಾ ರಾಜರ್ಷಯಸ್ತತಃ ।
ಬ್ರಹ್ಮಲೋಕಪ್ರತಿಷ್ಠಾಸ್ತು ಸ್ಮೃತಾ ಬ್ರಹ್ಮರ್ಷಯೋ ಮತಾಃ ॥ ೮೭ ॥

ದೇವಲೋಕಪ್ರತಿಷ್ಠಾಶ್ಚ ಜ್ಞೇಯಾ ದೇವರ್ಷಯಃ ಶುಭಾಃ ।
ಇಂದ್ರಲೋಕಪ್ರತಿಷ್ಠಾಸ್ತು ಸರ್ವೇ ರಾಜರ್ಷಯೋ ಮತಾಃ ॥ ೮೮ ॥

ಅಭಿಜಾತ್ಯಾ ಚ ತಪಸಾ ಮಂತ್ರವ್ಯಾಹರಣೈಸ್ತಥಾ ।
ಏವಂ ಬ್ರಹ್ಮರ್ಷಯಃ ಪ್ರೋಕ್ತಾ ದಿವ್ಯಾ ರಾಜರ್ಷಯಸ್ತು ಯೇ ॥ ೮೯ ॥

---

೮೬. ಮನುವಂಶೋತ್ಪನ್ನರಾದ ರಾಜರೂ ವೈಷಯವಂಶಜನ್ಯರಾದ ನೃಪರೂ ಐಲವಂಶೋದ್ಭೂತರಾದ ನೃಪತಿಗಳೂ, ಐಲನಾಮಕರಾದ ರಾಜರೂ, ಇಕ್ಷ್ವಾಕು ಕುಲಸಂಭೂತರಾದ ಪ್ರಭುಗಳೂ ಇವರು ರಾಜರ್ಷಿಗಳಾಗಿರುವರು.

೮೭-೮೮. ಈ ರಾಜರು ಧರ್ಮಾದಿಗಳಿಂದ ಪ್ರಜೆಗಳನ್ನು ರಂಜನಮಾಡುವುದರಿಂದ ರಾಜರ್ಷಿಗಳಾಗಿರುವರು. ಯಾವ ಋಷಿಗಳು ತಮ್ಮ ದಿವ್ಯಶಕ್ತಿಯಿಂದ ಬ್ರಹ್ಮಲೋಕಪ್ರತಿಷ್ಠಾಪಕರಾಗಿರುವರೋ ಅವರು ಬ್ರಹ್ಮರ್ಷಿಗಳಾಗಿರುವರು. ಇದರಂತೆಯೇ ದೇವಲೋಕಸ್ಥಾಪಕರು ದೇವರ್ಷಿಗಳಾಗಿಯೂ, ಇಂದ್ರಲೋಕಸ್ಥಾಪಕರಾದವರು ರಾಜರ್ಷಿಗಳಾಗಿಯೂ ಇರುವರೆಂದು ಜ್ಞಾನಿಗಳು ಹೇಳುವರು.

೮೯. ಸತ್ಕುಲಪ್ರಸೂತತೆ, ತಪಸ್ಸು, ಮಂತ್ರವ್ಯವಹಾರ ಇವುಗಳಿಂದ ಬ್ರಹ್ಮರ್ಷಿತನವೂ, ದೇವರ್ಷಿತ್ವವೂ, ರಾಜರ್ಷಿತನವೂ ಉಂಟಾಗುವುವೆಂದು ಹೇಳುವರು. ಸತ್ಕುಲಜನನ, ತಪಸ್ಸು, ಮಂತ್ರಗಳು ಸರ್ವ ಋಷಿಗಳಲ್ಲಿಯೂ ಇರಬೇಕಾದ ಮುಖ್ಯ ಧರ್ಮಗಳಾಗಿವೆ.

ದೇವರ್ಷಯಸ್ತಥಾನ್ಯೇ ಚ ತೇಷಾಂ ವಕ್ಷ್ಯಾಮಿ ಲಕ್ಷಣಂ ।
ಭೂತಭವ್ಯಭವಜ್ಞಾನಂ ಸತ್ಯಾಭಿವ್ಯಾಹೃತಂ ತಥಾ ॥ ೯೦ ॥

ಸಂಬುದ್ಧಾಸ್ತು ಸ್ವಯಂ ಯೇ ತು ಸಂಬುದ್ಧಾ ಯೇ ಚ ವೈ ಸ್ವಯಂ ।
ತಪಸೇಹ ಪ್ರಸಿದ್ಧಾ ಯೇ ಗರ್ಭೇ ಯೈಶ್ಚ ಪ್ರಣೋದಿತಂ ॥ ೯೧ ॥

ಮಂತ್ರವ್ಯಾಹಾರಿಣೋ ಯೇ ಚ ಐಶ್ವರ್ಯಾತ್ಸರ್ವಗಾಶ್ಚ ಯೇ ।
ಇತ್ಯೇತೇ ಋಷಿಭಿರ್ಯುಕ್ತಾ ದೇವದ್ವಿಜನೃಪಾಸ್ತು ಯೇ ॥ ೯೨ ॥

ಏತಾನ್ ಭಾವಾನಧೀಯಾನಾ ಯೇ ಚೈತ ಋಷಯೋ ಮತಾಃ ।
ಸಪ್ತೈತೇ ಸಪ್ತಭಿಶ್ಚೈವ ಗುಣೈಃ ಸಪ್ತರ್ಷಯಃ ಸ್ಮೃತಾಃ ॥ ೯೩ ॥

ದೀರ್ಘಾಯುಷೋ ಮಂತ್ರಕೃತ ಈಶ್ವರಾ ದಿವ್ಯಚಕ್ಷುಷಃ ।
ಬುದ್ಧಾಃ ಪ್ರತ್ಯಕ್ಷಧರ್ಮಾಣೋ ಗೋತ್ರಪ್ರವರ್ತಕಾಶ್ಚ ಯೇ ॥ ೯೪ ॥

---

೯೦-೯೨ ಈಗ ದೇವರ್ಷಿಗಳೇ ಮೊದಲಾದ ಋಷಿಗಳ ಲಕ್ಷಣವನ್ನು ಹೇಳುವೆನು ಕೇಳಿರಿ. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ನಡೆಯುವ ಕಾರ್ಯಜ್ಞಾನವು, ಸತ್ಯವ್ಯವಹಾರವು, ತನ್ನ ಪರರ ಸ್ವರೂಪಜ್ಞಾನವು, ತಪಃಪ್ರಸಿದ್ಧಿಯು, ಗರ್ಭವಾಸದುಃಖಾಭಾವವು, ಮಂತ್ರಸಿದ್ಧಿ ಮತ್ತು ಪರಮಶಕ್ತಿಯಿಂದ ಸರ್ವತ್ರ ಸಂಚಾರ ಈ ಸಪ್ತಗುಣಗಳೇ ಋಷಿತನದ ಪರಮಲಕ್ಷಣಗಳಾಗಿವೆ. ಈ ಋಷಿತನಕ್ಕೆ ದೇವಬ್ರಾಹ್ಮಣರಾಜರ ವಂಶಜನನವೂ ಕೂಡ ಮುಖ್ಯಕಾರಣವಾಗಿರುತ್ತದೆ.

೯೩. ಈ ಭಾವಗಳನ್ನು ಯಾರು ಸಂಪೂರ್ಣವಾಗಿ ತಿಳಿದಿರುವರೋ ಅವರೇ ಋಷಿಗಳೆಂದು ಹೇಳುವರು. ತ್ರಿಕಾಲಜ್ಞಾನವೇ ಮೊದಲಾದವುಗಳ ಮೇಲೆ ನಿರೂಪಿಸಿರುವ ಸಪ್ತಗುಣಗಳು ಯಾರಲ್ಲಿರುತ್ತವೆಯೋ ಅವರು ಸಪ್ತರ್ಷಿಗಳಾಗಿರುವರು.

೯೪-೯೫. ದೀರ್ಘಾಯುಷ್ಕರೂ, ಮಂತ್ರದ್ರಷ್ಟೃಗಳೂ, ಸ್ವತಂತ್ರರೂ, ದಿವ್ಯಜ್ಞಾನಿಗಳೂ, ತತ್ವವಿವೇಕಿಗಳೂ, ಪ್ರತ್ಯಕ್ಷಧರ್ಮಪ್ರವರ್ತಕರೂ, ವಂಶಪ್ರವರ್ತಕರೂ,

ಷಟ್ಕರ್ಮಾಭಿರತಾ ನಿತ್ಯಂ ಶಾಲಿನೋ ಗೃಹಮೇಧಿನಃ ।
ತುಲ್ಯೈರ್ವ್ಯವಹರಂತಿ ಸ್ಮ ಅದೃಷ್ಟೈಃ ಕರ್ಮಹೇತುಭಿಃ ॥ ೯೫ ॥

ಅಗ್ರಾಮ್ಯೈರ್ವರ್ತಯಂತಿ ಸ್ಮ ರಸೈಶ್ಚೈವ ಸ್ವಯಂ ಕೃತೈಃ ।
ಕುಟುಂಬಿನ ಋದ್ಧಿಮಂತೋ ಬಾಹ್ಯಾಂತರನಿವಾಸಿನಃ ॥ ೯೬ ॥

ಕೃತಾದಿಷು ಯುಗಾಖ್ಯೇಷು ಸರ್ವೇಷ್ವೇವ ಪುನಃ ಪುನಃ ।
ವರ್ಣಾಶ್ರಮವ್ಯವಸ್ಥಾನಂ ಕ್ರಿಯಂತೇ ಪ್ರಥಮಂ ತು ವೈ ॥ ೯೭ ॥

ಪ್ರಾಪ್ತೇ ತ್ರೇತಾಯುಗಮುಖೇ ಪುನಃ ಸಪ್ತರ್ಷಯಸ್ತ್ವಿಹ ।
ಪ್ರವರ್ತಯಂತಿ ಯೇ ವರ್ಣಾನಾಶ್ರಮಾಂಶ್ಚೈವ ಸರ್ವಶಃ ॥
ತೇಷಾಮೇವಾನ್ವಯೇ ವೀರಾ ಉತ್ಪದ್ಯಂತೇ ಪುನಃ ಪುನಃ ॥ ೯೮ ॥

---

ಷಟ್ಕರ್ಮನಿರತರೂ, ಉತ್ತಮಸ್ವಭಾವವುಳ್ಳವರೂ, ಗೃಹಸ್ಥರೂ ಆದ ಮಹರ್ಷಿಗಳು ತಮಗೆ ಯೋಗ್ಯವೂ, ಉತ್ತಮವೂ, ಫಲದಾಯಕವೂ ಆದ ನಡೆನುಡಿಗಳಿಂದ ಲೋಕಕ್ಕೆ ಆದರ್ಶಪ್ರಾಯರಾಗಿರುವರು.

೯೬. ಅಂತಹ ಮಹರ್ಷಿಗಳು, ಅನಿಂದಿತವೂ, ಫಲಪ್ರದವೂ, ರಸವತ್ತೂ ಆದ ಕರ್ಮಗಳನ್ನು ಮಾಡುವರು. ಅವರು ಕುಟುಂಬಿಗಳೂ, ಶ್ರೀಮಂತರೂ, ಮನಃ ಕಾಯಗಳಲ್ಲಿ ಸಮಾನವಾದ ನಡೆನುಡಿಯುಳ್ಳವರೂ ಆಗಿರುವರು.

೯೭. ಅವರು ಮೊದಲು ಕೃತಯುಗವೇ ಮೊದಲಾದ ಸರ್ವಯುಗಗಳಲ್ಲಿಯೂ ವರ್ಣಾಶ್ರಮಗಳ ಸ್ಥಾಪನೆಯನ್ನು ಮಾಡುವರು. ಮತ್ತು ಅದರಂತೆ ನಡೆಯುವರು.

೯೮. ತ್ರೇತಾಯುಗವು ಪ್ರಾರಂಭವಾಗಲು, ಇಂತಹ ಮಹರ್ಷಿಗಳು ವರ್ಣಾಶ್ರಮಧರ್ಮಗಳನ್ನು ಸಂಪೂರ್ಣವಾಗಿ, ಸ್ಥಾಪನೆಮಾಡುವರು. ಅವರ ವಂಶಗಳಲ್ಲಿ ವೀರಪುರುಷರು ಜನಿಸಿ, ವರ್ಣಾಶ್ರಮಧರ್ಮಗಳನ್ನು ಆಚರಿಸುವರು.

ಜಾಯಮಾನೇ ಪಿತಾ ಪುತ್ರೇ ಪುತ್ರಃ ಪಿತರಿ ಚೈವ ಹಿ ।
ಏವಂ ಸಮೇತ್ಯಾವಿಚ್ಛೇದಾದ್ವರ್ತಯಂತ್ಯಾಯುಗಕ್ಷಯಾತ್ ॥
ಅಷ್ಟಾಶೀತಿಸಹಸ್ರಾಣಿ ಪ್ರೋಕ್ತಾನಿ ಗೃಹಮೇಧಿನಾಂ ॥ ೯೯ ॥

ಅರ್ಯಮ್ಣೋ ದಕ್ಷಿಣಾ ಯೇ ತು ಪಿತೃಯಾಣಂ ಸಮಾಶ್ರಿತಾಃ ।
ದಾರಾಗ್ನಿಹೋತ್ರಿಣಸ್ತೇ ವೈ ಯೇ ಪ್ರಜಾಹೇತವಃ ಸ್ಮೃತಾಃ ॥ ೧೦೦ ॥

ಗೃಹಮೇಧಿನಾಂ ಚ ಸಂಖ್ಯೇಯಾಃ ಶ್ಮಶಾನಾನ್ಯಾಶ್ರಯಂತಿ ತೇ ।
ಅಷ್ಟಾಶೀತಿಸಹಸ್ರಾಣಿ ನಿಹಿತಾ ಉತ್ತರಾಯಣೇ ॥ ೧೦೧ ॥

ಯೇ ಶ್ರೂಯಂತೇ ದಿವಂ ಪ್ರಾಪ್ತ ಋಷಯೋ ಹ್ಯೂರ್ಧ್ವರೇತಸಃ ।
ಮಂತ್ರಬ್ರಾಹ್ಮಣಕರ್ತಾರೋ ಜಾಯಂತೇ ಹ ಯುಗಕ್ಷಯೇ ॥ ೧೦೨ ॥

---

೯೯. ಪುತ್ರನು ಹುಟ್ಟಲಾಗಿ ತಂದೆಯು ಅವನಿಗೆ ಪುತ್ರನಾಗಿ ಜನಿಸುವನು. ತಂದೆಯು ಪುತ್ರನಾಗಿ ಹುಟ್ಟಲು ಪುತ್ರನು ಮೊಮ್ಮಗನಾಗಿ ಜನಿಸುವನು. ಈ ರೀತಿಯಾಗಿ ಪ್ರಳಯದವರೆಗೂ ಆ ಸಂತತಿಯು ಅವಿಚ್ಛಿನ್ನವಾಗಿ ಬೆಳೆದುಹೋಗುವುದು. ಹೀಗೆ ಗೃಹಸ್ಥರಾದ ಮಹರ್ಷಿಗಳು ಎಂಭತ್ತೆಂಟು ಸಹಸ್ರವರ್ಷಗಳವರೆಗೂ ಅನುವರ್ತಿಸಿಕೊಂಡು ಬರುವರು.

೧೦೦. ಯಾರು ದಕ್ಷಿಣಾಯನದಲ್ಲಿ ಸೂರ್ಯನ ದ್ವಾರಾ ಪಿತೃಯಾನವನ್ನು ಹೊಂದುವರೋ, ಮತ್ತು ಯಾರು ದಾರಾಗ್ನಿಹೋತ್ರಗಳಾಗಿರುವರೋ ಅವರೇ ಪ್ರಜಾಪ್ರವರ್ತಕರಾಗಿದುವರು.

೧೦೧. ಯಾವ ಗೃಹಸ್ಥರು ತಮ್ಮ ಆಯುಷ್ಯವು ಕಳೆಯಲು ಉತ್ತರಾಯಣದಲ್ಲಿ ಶ್ಮಶಾನವನ್ನು ಹೊಂದುವರೋ, ಅಂತಹ ಗೃಹಸ್ಥರು ಉತ್ತಮಗತಿಯನ್ನು ಹೊಂದುವರು. ಅವರು ಎಂಭತ್ತೆಂಟುಸಹಸ್ರ ಸಂಖ್ಯಾಕರಾಗಿರುವರು.

೧೦೨. ಮಂತ್ರಬ್ರಾಹ್ಮಣದ್ರಷ್ಟೃಗಳೂ, ಊರ್ಧ್ವರೇತಸ್ಕರೂ ಆದ ಯಾವ ಮಹರ್ಷಿಗಳು ಸ್ವರ್ಗಲೋಕವನ್ನು ಹೊಂದಿದರೆಂದು ನಾವು ಕೇಳುತ್ತೇವೆಯೋ, ಅವರು ಆ ಯುಗವು ಕಳೆದು ಯುಗಾಂತರವು ಸಂಭವಿಸಿದಾಗ ಪುನಃ ಜನಿಸುವರು.

ಏವಮಾವರ್ತಮಾನಾಸ್ತೇ ದ್ವಾಪರೇಷು ಪುನಃ ಪುನಃ ।
ಕಲ್ಪಾನಾಂ ಭಾಷ್ಯವಿದ್ಯಾನಾಂ ನಾನಾಶಾಸ್ತ್ರಕೃತಃ ಕ್ಷಯೇ ॥ ೧೦೩ ॥

ಭವಿಷ್ಯೇ ದ್ವಾಪರೇ ಚೈವ ದ್ರೋಣಿರ್ದ್ವೈಪಾಯನಃ ಪುನಃ ।
ವೇದವ್ಯಾಸೋ ಹ್ಯತೀತೇಽಸ್ಮಿನ್ ಭವಿತಾ ಸುಮಹಾ ತಪಾಃ ॥ ೧೦೪ ॥

ಭವಿಷ್ಯಂತಿ ಭವಿಷ್ಯೇ ತು ಶಾಖಾಪ್ರಣಯನಾನಿ ತು ।
ತಸ್ಮೈ ತದ್ಬ್ರಹ್ಮಣಾ ಬ್ರಹ್ಮ ತಪಸಾ ಪ್ರಾಪ್ತಮವ್ಯಯಂ ॥ ೧೦೫ ॥

ತಪಸಾ ಕರ್ಮ ಸಂಪ್ರಾಪ್ತಂ ಕರ್ಮಣಾ ಹಿ ತತೋ ಯಶಃ ।
ಯಶಸಾ ಪ್ರಾಪ್ಯ ಸತ್ಯಂ ಹಿ ಸತ್ಯೇನಾಪ್ನೋತಿ ಹಿ ಚಾವ್ಯಯಃ ॥ ೧೦೬ ॥

---

೧೦೩. ಈ ರೀತಿಯಾಗಿ ದ್ವಾಪರಯುಗದಲ್ಲಿ ಪುನಃ ಪುನಃ ಜನನ ಮರಣವನ್ನು ಹೊಂದುವ ಭಾಷ್ಯಕಾರರೂ, ನಾನಾಶಾಸ್ತ್ರಪ್ರವರ್ತಕರೂ ಸಹ ಆ ಯುಗವು ಕ್ಷಯಿಸಲು ತಾವು ಕ್ಷಯಿಸಿ, ಯುಗವು ಪ್ರಾರಂಭವಾದಾಗ ತಾವೂ ಸಹ ಉತ್ತಮವಾದ ಕುಲದಲ್ಲಿ ಜನಿಸಿ ಶಾಸ್ತ್ರಕರ್ತೃಗಳಾಗುವರು.

೧೦೪. ಮುಂದೆ ಬರುವ ದ್ವಾಪರಯುಗದಲ್ಲಿಯೂ ಕೂಡ ದ್ರೋಣಾಚಾರ್ಯರ ಪುತ್ರನಾದ ಅಶ್ವತ್ಥಾಮನೂ, ವೇದವ್ಯಾಸದೇವನೂ ಕೂಡ ಪುನಃ ಜನಿಸುವರು. ಅತೀತವಾದ ಯುಗದಲ್ಲಿ ಯಾವ ವೇದವ್ಯಾಸದೇವನು ಅವತರಿಸಿ ವೇದವನ್ನುದ್ಧರಿಸಿದನೋ, ಅಂತಹ ಮಹಾತಪಸ್ವಿಯೇ ಈ ವರ್ತಮಾನಯುಗದಲ್ಲಿಯೂ ಸಹ ಅವತರಿಸಿ, ಶಾಸ್ತ್ರಗಳನ್ನು ಉದ್ಧರಿಸುವನು.

೧೦೫. ಭವಿಷ್ಯಯುಗದಲ್ಲಿಯೂ ಅಂದರೆ ಮುಂದೆ ಬರುವ ಯುಗಗಳಲ್ಲಿಯೂ ಶಾಖಾಪ್ರವರ್ತಕತೆಯು ಉಂಟಾಗುವುದು. ಮಹರ್ಷಿಗಳು ತಮ್ಮ ತಪಸ್ಸುಗಳಿಂದ ನಾಶರಹಿತನಾದ ಯಾವ ಬ್ರಹ್ಮನನ್ನು ಹೊಂದುವರೋ ಅಂತಹ ಪರಬ್ರಹ್ಮನನ್ನು ಉಪದೇಶಮಾಡುವರು.

೧೦೬. ಅಂತಹ ಮಹಾತ್ಮರು, ತಪಸ್ಸಿನಿಂದ ಉತ್ತಮವಾದ ಕರ್ಮವನ್ನೂ, ಆ ಕರ್ಮದಿಂದ ಮಹತ್ತಾದ ಕೀರ್ತಿಯನ್ನೂ ಆ ಯಶಸ್ಸಿನಿಂದ ನಿಜವಾದ ಸತ್ಯವನ್ನೂ, ಆ ಸತ್ಯದಿಂದ ಶಾಶ್ವತವಾದ ಪರಮಪುರುಷನನ್ನೂ ಹೊಂದುವರು.

ಅವ್ಯಯೊಾದವ್ಯೃತಂ ಶುಕ್ರಮುವ್ಯೃತಾತ್ ಸರ್ವಮೇವ ಹಿ |
ಧ್ರುವಮೇಕಾಕ್ಷರಮಿದಂ ಸ್ವಾತ್ಮನ್ಯೇವ ವ್ಯವಸ್ಥಿತಂ ||
ಬೃಹತ್ವಾದ್ಬ್ರಹ್ಮಣಂ ಚೈವ ತದ್ಬ್ರಹ್ಮೇಂತ್ಯಭಿಧೀಯತೇ || ೧೦೭ ||

ಪ್ರಣವಾವ ಸ್ಥಿತಂ ಭೂಯೋ ಭೂರ್ಭುವಃಸ್ವರಿತಿ ಸ್ಮೃತಂ |
ಋಗ್ಯಜುಃಸಾಮಾಥರ್ವರೂಪಿಣೇ ಬ್ರಹ್ಮಣೇ ನಮಃ || ೧೦೮ ||

ಜಗತಃ ಪ್ರಲಯೋತ್ಪತ್ತೌ ಯತ್ತತ್ಕಾರಣಸಂಜ್ಞಿತಂ |
ಮಹತಃ ಪರಮಂ ಗುಹ್ಯಂ ತಸ್ಮೈ ಸುಬ್ರಹ್ಮಣೇ ನಮಃ || ೧೦೯ ||

ಅಗಾಧಾಪರಮುಕ್ಷಯ್ಯಂ ಜಗತ್ಸಮ್ಮೋಹನಾಲಯಂ |
ಸಪ್ರಕಾಶಪ್ರವೃತ್ತಿಭ್ಯಾಂ ಪುರುಷಾರ್ಥಪ್ರಯೋಜನಂ || ೧೧೦ ||

---

೧೦೭. ಅವ್ಯಯವಾದ ಪರಮಪದವಿಯಿಂದ ಶೋಕರಹಿತನೂ, ಶಾಶ್ವತನೂ, ಸ್ಥಿರನೂ, ಅಕ್ಷರನೂ, ಅಂತರ್ಯಾಮಿಯೂ ಆದ ಪರಬ್ರಹ್ಮನನ್ನು ಹೊಂದುವರು. ಆ ಪರಮಪುರುಷನು ಪೂರ್ಣನಾಗಿಯೂ, ಮಹತ್ಪರಿಮಾಣವಿಶಿಷ್ಟನಾಗಿಯೂ ಇರುವುದರಿಂದ ಪರಬ್ರಹ್ಮನೆಂದು ಹೊಗಳಲ್ಪಡುವನು.

೧೦೮. ಆ ಪರಬ್ರಹ್ಮನ "ಓಂ" ಎಂಬ ಪ್ರಣವಪ್ರತಿಪಾದ್ಯನೂ, ಭೂಃರ್ಭುವಃಸ್ವ ಎಂಬ ವ್ಯಾಹೃತಿಪ್ರತಿಪಾದ್ಯನೂ, ಋಗ್ಯಜುಸ್ಸಾಮಾಥರ್ವವೆಂಬ ಚತುರ್ವೇದಃ ವೇದ್ಯನೂ ಆಗಿರುವನು. ಆದುದರಿಂದ ಅಂತಹ ಪರಬ್ರಹ್ಮನಿಗೆ ನಮಸ್ಕಾರವೆಂದು ಸೂತಮುನಿಯು ಹೇಳಿದನು.

೧೦೯. ಯಾವನು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣಕರ್ತನೋ, ಮಹತ್ತತ್ವಕ್ಕಿಂತಲೂ ಉತ್ತಮನೋ, ಮಹತ್ತತ್ವಪ್ರೇರಕನೋ, ಅತಿ ರಹಸ್ಯನೋ, ಅಂತಹ ಪರಮ ಬ್ರಹ್ಮನಿಗೆ ಅನಂತ ವಂದನೆಗಳೆಂದನು.

೧೧೦-೧೧೨. ಆ ಪರಬ್ರಹ್ಮನು ಲೌಕಿಕವಾದ ಗಾಧಾ ಅವಿಷಯನೂ, ನಾಶ ರಹಿತನೂ, ಜಗನ್ನಾಶಕ್ಕೆ ಕಾರಣನೂ, ಪಾರಮಾರ್ಥಿಕ ವ್ಯಾಪಾರದಿಂದ ಪುರುಷಾರ್ಥ

ಸಾಂಖ್ಯಜ್ಞಾನವತಾಂ ನಿಷ್ಠಾ ಗತಿಃ ಸಂಗದಮಾತ್ಮನಃ ।
ಯತ್ತದವ್ಯಕ್ತಮಮೃತಂ ಪ್ರಕೃತಿರ್ಬ್ರಹ್ಮ ಶಾಶ್ವತಂ ॥ ೧೧೧ ॥

ಪ್ರಧಾನಮಾತ್ಮಯೋನಿಶ್ಚ ಗುಹ್ಯಂ ಸತ್ವಂ ಚ ಶಬ್ದ್ಯತೇ ।
ಅವಿಭಾಗಸ್ತಥಾ ಶುಕ್ರಮಕ್ಷರಂ ಬಹುವಾಚಕಂ ॥
ಪರಮಬ್ರಹ್ಮಣೇ ತಸ್ಮೈ ನಿತ್ಯಮೇವ ನಮೋ ನಮಃ ॥ ೧೧೨ ॥

ಕೃತೇ ಪುನಃ ಕ್ರಿಯಾ ನಾಸ್ತಿ ಕೃತ ಏವಾಕೃತಕ್ರಿಯಾ ।
ಸಕೃದೇವ ಕೃತಂ ಸರ್ವಂ ಯದ್ವೈ ಲೋಕೇ ಕೃತಾಕೃತಂ ॥ ೧೧೩ ॥

ಶ್ರೋತವ್ಯಂ ವೈ ಶ್ರುತಂ ವಾಪಿ ತಥೈವಾ ಸಾಧುಸಾಧುತಾ ।
ಜ್ಞಾತವ್ಯಂ ಚಾಥ ಮಂತವ್ಯಂ ಸ್ಪ್ರಷ್ಟವ್ಯಂ ಭೋಜ್ಯಮೇವ ಚ ॥
ದ್ರಷ್ಟವ್ಯಂ ಚಾಥ ಶ್ರೋತವ್ಯಂ ಜ್ಞಾತವ್ಯಂ ವಾಥ ಕಿಂಚನ ॥ ೧೧೪ ॥

---

ಪ್ರದನೂ, ಸಾಂಖ್ಯಜ್ಞಾನಿಗಳಿಗೆ ಆಶ್ರಯನೂ, ಬ್ರಹ್ಮಜ್ಞಾನಿಯಾದ ಭಕ್ತನಿಗೆ ಗತಿದಾಯಕನೂ, ಅವ್ಯಕ್ತನೂ, ಅಮೃತನೂ, ಪ್ರಕೃತಿನಿಯಾಮಕನೂ, ಪೂರ್ಣನೂ, ಶಾಶ್ವತನೂ, ಪ್ರಧಾನನೂ, ಜೀವಾದಿಕಾರಣನೂ, ಅತಿರಹಸ್ಯನೂ, ಸತ್ವಸ್ವರೂಪಿಯೂ, ವೇದಾದಿ ಶಬ್ದಪ್ರತಿಪಾದ್ಯನೂ, ವಿಭಾಗರಹಿತನೂ, ಶೋಕವರ್ಜಿತನೂ, ನಾಶರಹಿತನೂ, ಅನೇಕ ವೇದವೇದ್ಯನೂ ಆಗಿರುತ್ತಾನೆ. ಅಂತಹ ಪರಬ್ರಹ್ಮನಿಗೆ ನಿತ್ಯವೂ ಅನಂತಾನಂತ ನಮಸ್ಕಾರಗಳು ಎಂದು ಮುನಿಯು ಹೇಳಿದನು.

೧೧೩. ಕೃತಯುಗದಲ್ಲಿ ಯಜ್ಞಯಾಗಾದಿ ಕ್ರಿಯೆಗಳಿಲ್ಲ. ಕ್ರಿಯೆಗಳಿಲ್ಲದವರಿಗೆ ವಿಹಿತನಿಷಿದ್ಧ ಕಾರ್ಯಗಳಿಲ್ಲವು, ಯಾವುದು ಲೋಕದಲ್ಲಿ ಸಕೃತ್ ಕೃತವಾಗಿದೆಯೋ ಅದಕ್ಕೆ ಲೋಕದಲ್ಲಿ ಕೃತಾಕೃತವೆಂದು ನಾಮವು ಸಂಭವಿಸಿರುತ್ತದೆ.

೧೧೪. ಆ ಪರಬ್ರಹ್ಮನು ಶ್ರವಣಾರ್ಹನೂ, ಜ್ಞಾನಿಗಳಿಂದ ಶ್ರುತನೂ, ಅಸಜ್ಜನರಿಗೆ ಅಯೋಗ್ಯನೂ, ಸತ್ಪುರುಷನಿಗೆ ಯೋಗ್ಯನೂ, ತಿಳಿಯಲರ್ಹನೂ, ಮನನಾರ್ಹನೂ, ಪ್ರಶ್ನೆಮಾಡಲು ಅರ್ಹನೂ, ಭೋಜ್ಯಾರ್ಹನೂ, ದರ್ಶನ ಯೋಗ್ಯನೂ, ಶ್ರವಣಕ್ಕೆ ಯೋಗ್ಯನೂ, ತಿಳಿಯಲರ್ಹನೂ ಆಗಿರುವನು.

ದರ್ಶಿತಂ ಯದನೇನೈವ ಜ್ಞಾನಂ ತದ್ವೈ ಸುರರ್ಷಿಣಾಂ ।
ಯದ್ವೈ ದರ್ಶಿತವಾನೇಷ ಕಸ್ತದನ್ವೇಷ್ಟುಮರ್ಹತಿ ॥
ಸರ್ವಾಣಿ ಸರ್ವಾ೯ ಸರ್ವಾಂಶ್ಚ ಭಗವಾನೇವ ಸೋಽಬ್ರವೀತ್ ॥ ೧೧೫ ॥

ಯದಾ ಯತ್ಕ್ರಿಯತೇ ಯೇನ ತದಾ ತತ್ಸೋಽಭಿಮನ್ಯತೇ ।
ಯೇನೇದಂ ಕ್ರಿಯತೇ ಪೂರ್ವಂ ತದನ್ಯೇನ ವಿಭಾವಿತಂ ॥ ೧೧೬ ॥

ಯದಾ ತು ಕ್ರಿಯತೇ ಕಿಂಚಿತ್ಕೇನಚಿದ್ವಾಂಙ್ಮಯಂ ಕ್ವಚಿತ್ ।
ತೇನೈವ ತತ್ಕೃತಂ ಪೂರ್ವಂ ಕರ್ತೄಣಾಂ ಪ್ರತಿಭಾತಿ ವೈ ॥ ೧೧೭ ॥

---

೧೧೫. ಯಾವುದನ್ನು ಭಗವಂತನು ದೇವರ್ಷಿಗಳಿಗೆ ಉಪದೇಶಮಾಡುವನೋ ಅದೇ ಸತ್ಯವಾದ ಜ್ಞಾನವು. ಯಾವ ರೂಪಾದಿಗಳನ್ನು ಈ ಬ್ರಹ್ಮನು ಭಕ್ತನಿಗೆ ತೋರಿಸುವನೋ ಅದನ್ನು ಹುಡುಕಲು ಯಾರಿಂದ ಸಾಧ್ಯವು? ಶ್ರೀಕೃಷ್ಣನು ಭಕ್ತನಾದ ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿದನು. ಆ ವಿಶ್ವರೂಪವನ್ನು ಕಂಡುಹಿಡಿಯುವುದು ಅರ್ಜುನನಿಗೆ ಸಾಧ್ಯವೇ ? ಆದುದರಿಂದ ಆ ಭಗವಂತನು ಸರ್ವ ಜಗತ್ತನ್ನೂ, ಸರ್ವಪುರುಷರನ್ನೂ, ಸರ್ವವಿಷಯಗಳನ್ನೂ ತಿಳಿದಿರುವನು. ಅವನೇ ತಿಳಿಯಲು ಅರ್ಹನು. ಅವನೇ ಹೇಳಲು ಶಕ್ತನು ಎಂದು ಹೇಳಿದನು.

೧೧೬. ಯಾವಾಗ ಯಾವನು ಯಾವ ಕೆಲಸವನ್ನು ಮಾಡುತ್ತಾನೆಯೋ, ಆಗ ಅವನು ಆ ಕೆಲಸವನ್ನು ತಿಳಿಯಲು ಶಕ್ತನಾಗಿರುವನು. ಪೂರ್ವದಲ್ಲಿ ಯಾರು ಈ ಜಗದಾದಿಗಳನ್ನು ಮಾಡಿರುವನೋ, ಆಗ ಇತರರೂ ಸಹ ಪ್ರತ್ಯಕ್ಷವಾದ ಜಗದಾದಿಗಳನ್ನು ತಿಳಿಯಲರ್ಹರಾಗುವರು.

೧೧೭. ಯಾವಾಗ ಒಬ್ಬ ಗ್ರಂಥಕಾರನು, ಕವಿಯು ಒಂದು ಗ್ರಂಥವನ್ನು ರಚಿಸುತ್ತಾನೆಯೋ, ಈ ಗ್ರಂಥವು ಪೂರ್ವದಲ್ಲಿ (ಇಂಥವನಿಂದ) ಇಂತಹ ಪುರುಷನಿಂದ ರಚಿತವಾಗಿದೆಯೆಂದು ಇತರ ಕವಿಗಳು ತಿಳಿಯುತ್ತಾರೆ.

**ವಿರಕ್ತಾಂ ಚಾ ತಿರಿಕ್ತಂ ಚ ಜ್ಞಾನಾಜ್ಞಾನೇ ಪ್ರಿಯಾಪ್ರಿಯೇ ।**
**ಧರ್ಮಾಧರ್ಮೌ ಸುಖಂ ದುಃಖಂ ಮೃತ್ಯುಶ್ಚಾ ಮೃತಮೇವ ಚ ॥**
**ಊರ್ಧ್ವಂ ತಿರ್ಯಗಧೋಭಾಗಸ್ತಸ್ತೈವಾದೃಷ್ಟಕಾರಣಂ ॥ ೧೧೮ ॥**

**ಸ್ವಾಯಂಭುವೋಽಥ ಜ್ಯೇಷ್ಠಸ್ಯ ಬ್ರಹ್ಮಣಃ ಪರಮೇಷ್ಠಿನಃ ।**
**ಪ್ರತ್ಯೇಕವಿದ್ಯಂ ಭವತಿ ತ್ರೇತಾಸ್ವಿಹ ಪುನಃ ಪುನಃ ॥ ೧೧೯ ॥**

**ವ್ಯಸ್ಯತೇ ಹ್ಯೇಕವಿದ್ಯಂ ತದ್ವಾಪರೇಷು ಪುನಃ ಪುನಃ ।**
**ಬ್ರಹ್ಮಾ ಚೈತದುವಾಚಾದೌ ತಸ್ಮಿನ್ ವೈವಸ್ವತೇಂತರೇ ॥ ೧೨೦ ॥**

**ಆವರ್ತಮಾನಾ ಋಷಯೋ ಯುಗಾಖ್ಯಾಸು ಪುನಃ ಪುನಃ ।**
**ಕುರ್ವಂತಿ ಸಂಹಿತಾ ಹ್ಯೇತೇ ಜಾಯಮಾನಾಃ ಪರಸ್ಪರಂ ॥ ೧೨೧ ॥**

---

೧೧೮. ವಿರಕ್ತಿ ಆಸಕ್ತಿಗಳೂ. ಜ್ಞಾನಾಜ್ಞಾನಗಳೂ, ಪ್ರಿಯಾಪ್ರಿಯಗಳೂ, ಧರ್ಮಾಧರ್ಮಗಳೂ, ಸುಖದುಃಖಗಳೂ, ಸ್ವರ್ಗನರಕಗಳೂ ಅಥವಾ ಜನನ ಮರಣಗಳೂ, ಊರ್ಧ್ವಲೋಕ, ಅಧೋಲೋಕ, ಮಧ್ಯಲೋಕಗಳ ಗಮನಾಗಮನ ಇವುಗಳೂ ಆಯಾ ಮನುಷ್ಯರ ಪುಣ್ಯಪಾಪಕರ್ಮಗಳ ಅಧೀನವಾಗಿರುತ್ತವೆ. ಅವರವರ ಕರ್ಮಾನುಗುಣವಾಗಿ ಆಯಾ ಕಾರ್ಯಗಳಾಗುತ್ತವೆ.

೧೧೯. ಸ್ವಾಯಂಭುವಮನ್ವಂತರದ ತ್ರೇತಾಯುಗದಲ್ಲಿ ಹಿರಿಯವನೂ, ಪರಮಪದವಿಯನ್ನು ಹೊಂದಿದವನೂ ಆದ ಬ್ರಹ್ಮದೇವನ ಮೂಲಕ ಪ್ರತ್ಯೇಕವಾದ ವಿದ್ಯೆಗಳು ಪುನಃ ಪುನಃ ವ್ಯಕ್ತವಾಗುತ್ತವೆ.

೧೨೦. ವೈವಸ್ವತಮನ್ವಂತರದ ದ್ವಾಪರಯುಗದ ಆದಿಭಾಗದಲ್ಲಿ ಒಂದೇ ವಿದ್ಯೆಯೇ ಪುನಃ ಪುನಃ ವಿಸ್ತೃತವಾಯಿತು. ಆ ಕಾಲದಲ್ಲಿ ಬ್ರಹ್ಮದೇವನು ಶಿಷ್ಯರಿಗೆ ಆ ವಿದ್ಯೆಯನ್ನು ಉಪದೇಶಮಾಡಿದನು.

೧೨೧. ಯುಗಾನುಸಾರವಾಗಿ ಪ್ರತಿಯೊಂದು ಯುಗದಲ್ಲಿಯೂ ಪದೇ ಪದೇ ಅವತರಿಸುವ ಮುನಿಗಳು ಅನೇಕ ಸಂಹಿತೆಗಳನ್ನು ರಚಿಸಿ ಶಿಷ್ಯರಿಗೆ ಉಪದೇಶ ಮಾಡುವರು.

ಅಷ್ಟಾಶೀತಿಸಹಸ್ರಾಣಿ ಶ್ರುತರ್ಷೀಣಾಂ ಸ್ಮೃತಾನಿ ವೈ ।
ತಾ ಏವ ಸಂಹಿತಾ ಹ್ಯೇತೇ ಆವರ್ತಂತೇ ಪುನಃ ಪುನಃ ॥ ೧೨೨ ॥

ಶ್ರಿತಾ ದಕ್ಷಿಣಪಂಥಾನಂ ಯೇ ಶ್ಮಶಾನಾನಿ ಭೇಜಿರೇ ।
ಯುಗೇ ಯುಗೇ ತು ತಾಃ ಶಾಖಾ ವ್ಯಸ್ಯಸ್ತೇ ತೈಃ ಪುನಃ ಪುನಃ ॥ ೧೨೩ ॥

ದ್ವಾಪರೇಷ್ವಿಹ ಸರ್ವೇಷು ಸಂಹಿತಾಶ್ಚ ಶ್ರುತರ್ಷಿಭಿಃ ।
ತೇಷಾಂ ಗೋತ್ರೇಷ್ವಿಮಾಃ ಶಾಖಾ ಭವಂತೀಹ ಪುನಃ ಪುನಃ ॥
ತಾಃ ಶಾಖಾಸ್ತತ್ರ ಕರ್ತಾರೋ ಭವಂತೀಹ ಯುಗಕ್ಷಯಾತ್ ॥ ೧೨೪ ॥

ಏವಮೇವ ತು ವಿಜ್ಞೇಯಂ ವ್ಯತೀತಾನಾಗತೇಷ್ವಿಹ ।
ಮನ್ವಂತರೇಷು ಸರ್ವೇಷು ಶಾಖಾಪ್ರಣಯನಾನಿ ವೈ ॥ ೧೨೫ ॥

---

೧೨೨. ಜ್ಞಾನಿಗಳಾದ ಮಹರ್ಷಿಗಳ ಸಂಹಿತೆಗಳು ಎಂಭತ್ತೆಂಟುಸಹಸ್ರ ಸಂಖ್ಯಾಕವಾಗಿವೆಯೆಂದು ವ್ಯಕ್ತವಾಗಿದೆ. ಆ ಸಂಹಿತೆಗಳೇ ಪ್ರತಿ ಯುಗದಲ್ಲಿಯೂ ಪುನಃ ಪುನಃ ಆವೃತ್ತಿಯಾಗುತ್ತವೆ. ಈಗ ಇರುವ ಸಂಹಿತೆಗಳೂ ಹಿಂದಿನವೇ ಆಗಿವೆ.

೧೨೩. ಯಾವ ಋಷಿಗಳು ದಕ್ಷಿಣಮಾರ್ಗವನ್ನು ಹೊಂದಿ ಶ್ಮಶಾನವನ್ನು ಆಶ್ರಯಿಸಿರುವರೋ, ಅಂದರೆ ದಕ್ಷಿಣಾಯನದಲ್ಲಿ ಮೃತರಾಗುವರೋ, ಅವರು ಪ್ರತಿಯೊಂದು ಯುಗದಲ್ಲಿಯೂ ಪುನಃ ಪುನಃ ಜನಿಸಿ, ಹಿಂದೆ ಇದ್ದ ಸಂಹಿತೆಗಳನ್ನೇ ರಚಿಸುವರು.

೧೨೪. ಸಮಸ್ತವಾದ ದ್ವಾಪರಯುಗಗಳಲ್ಲಿ ಯಾವ ಮಹರ್ಷಿಗಳು ಯಾವ ಸಂಹಿತೆಗಳನ್ನು ರಚಿಸಿರುವರೋ, ಅವರ ಗೋತ್ರದಲ್ಲಿ ಹುಟ್ಟಿದ ಋಷಿಗಳೇ ಆಯಾ ಶಾಖೆಗಳನ್ನು ಬೇರೆ ಯುಗದಲ್ಲಿ ರಚಿಸುವರು. ಹೀಗೆ ಪ್ರತಿಯುಗದಲ್ಲಿಯೂ ಪ್ರಲಯದ ವರೆಗೂ ಋಷಿಗಳೂ ಶಾಖೆಗಳೂ ಆವೃತ್ತವಾಗುವುವು.

೧೨೫. ಇದೇ ಕ್ರಮದಲ್ಲಿಯೇ ವರ್ತಮಾನಕಾಲದಲ್ಲಿರುವಂತೆಯೇ ಭೂತ ಭವಿಷ್ಯತ್ಕಾಲಗಳಲ್ಲಿಯೂ, ಸಕಲ ಮನ್ವಂತರಗಳಲ್ಲಿಯೂ, ಶಾಖಾಪ್ರವರ್ತಕರು ಪುನಃ ಪುನಃ ಜನಿಸಿ ಆಯಾ ಶಾಖೆಗಳನ್ನು ರಚಿಸುವರು.

ಅತೀತೇಷು ಅತೀತಾನಿ ವರ್ತಂತೇ ಸಾಂಪ್ರತೇಷು ಚ |
ಭವಿಷ್ಯಾಣಿ ಚ ಯಾನಿ ಸ್ಯುರ್ವರ್ಣ್ಯಂತೇಽನಾಗತೇಷ್ವಿಹ || ೧೨೬ ||

ಪೂರ್ವೇಣ ಪಶ್ಚಿಮಂ ಜ್ಞೇಯಂ ವರ್ತಮಾನೇನ ಚೋಭಯಂ |
ಏತೇನ ಕ್ರಮಯೋಗೇನ ಮನ್ವಂತರವಿನಿಶ್ಚಯಃ || ೧೨೭ ||

ಏವಂ ದೇವಾಶ್ಚ ಪಿತರ ಋಷಯೋ ಮನವಶ್ಚ ಯೇ |
ಮಂತ್ರೈಃ ಸಹೋರ್ಧ್ವಂ ಗಚ್ಛಂತಿ ಹ್ಯಾವರ್ತಂತೇ ಚ ತೈಃ ಸಹ || ೧೨೮ ||

ಜನಲೋಕಾತ್ಪರಾಃ ಸರ್ವೇ ಪಶುಕಲ್ಪಾತ್ಪನಃ ಪುನಃ |
ಪರ್ಯಾಪ್ತಕಾಲೇ ಸಂಪ್ರಾಪ್ತೇ ಸಂಭೂತಾ ನೈವ ನಸ್ಯ ತು || ೧೨೯ ||

---

೧೨೬. ಅತೀತಕಾಲವಲ್ಲಿ ಅತೀತರಾದ ಋಷಿಗಳೂ, ಸಂಹಿತೆಗಳೂ ಇದ್ದುವು. ವರ್ತಮಾನಕಾಲವಲ್ಲಿ ವರ್ತಮಾನಋಷಿಗಳೂ, ಸಂಹಿತೆಗಳೂ ಇರುತ್ತವೆ. ಅನಾಗತವಾದ ಭವಿಷ್ಯತ್ಕಾಲದಲ್ಲಿಯೂ ಸಹ ಮುಂದಿನ ಋಷಿಗಳೂ, ದೇವತೆಗಳೂ, ಮಂತ್ರಗಳೂ ಸಹ ಉಂಟಾಗುವುವು.

೧೨೭. ಪೂರ್ವಕಾಲವ ಋಷಿಗಳು ದೇವತೆಗಳಿಂದ ಭವಿಷ್ಯತ್ಕಾಲದ ದೇವಾದಿಗಳನ್ನೂ, ವರ್ತಮಾನಕಾಲದ ದೇವಾದಿಗಳಿಂದ ಭೂತಭವಿಷ್ಯತ್ಕಾಲಗಳ ವಿಷಯಗಳನ್ನೂ ತಿಳಿಯಬೇಕು. ಇದೇ ರೀತಿಯಲ್ಲೇ ಸಕಲ ಮನ್ವಂತರ ವಿಷಯಗಳನ್ನೂ ತಿಳಿದು ಊಹಿಸಿಕೊಳ್ಳಬೇಕು.

೧೨೮. ಇದೇ ಕ್ರಮದಲ್ಲಿಯೇ ದೇವತೆಗಳು, ಪಿತೃಗಳು, ಋಷಿಗಳು, ಮನುಗಳು ಮತ್ತು ಮಂತ್ರಗಳು ಇವು ಆಯಾ ಯುಗಗಳಲ್ಲಿ ಊರ್ಧ್ವಲೋಕಗಳಿಗೆ ಹೋಗುತ್ತವೆ. ಪುನಃ ಸೃಷ್ಟಿಯಾಗಲು ಎಲ್ಲವೂ ಪುನಃ ಸಹಿತವಾಗಿಯೇ ಹುಟ್ಟುವುವು.

೧೨೯. ಸಮಸ್ತರಾದ ದೇವತೆಗಳು ಪಶುಪ್ರಾಯವಾದ ಈ ಮನುಷ್ಯಲೋಕದಿಂದ ಕಾಲಾನುಗುಣವಾಗಿ ಜನಿಸಿ, ಸ್ವಕಾರ್ಯಗಳನ್ನು ನೆರವೇರಿಸಿ, ಪುನಃ ತಮ್ಮ ಲೋಕಗಳಿಗೆ ಹೊರಡುವರು.

**ಅವಶ್ಯಂಭಾವಿನಾರ್ಥೇನ ಸಂಬಧ್ಯಂತೇ ತದಾ ತು ತೇ ।**
**ತತಸ್ತೇ ದೋಷವಜ್ಜನ್ಮ ಪಶ್ಯಂತೇ ರಾಗಪೂರ್ವಕಂ ॥ ೧೩೦ ॥**

**ನಿವರ್ತತೇ ತದಾ ವೃತ್ತಿಸ್ತೇಷಾಮಾದೋಷದರ್ಶನಾತ್ ।**
**ಏವಂ ದೇವ ಯುಗಾನೀಹ ದಶ ಕೃತ್ವಾ ನಿವರ್ತತೇ ॥ ೧೩೧ ॥**

**ಜನಲೋಕಾತ್ತಪೋಲೋಕಂ ಗಚ್ಛಂತೀಹಾನಿವರ್ತನಂ ।**
**ಏವಂ ದೇವ ಯುಗಾನೀಹ ವ್ಯತೀತಾನಿ ಸಹಸ್ರಶಃ ॥**
**ನಿಧನಂ ಬ್ರಹ್ಮಲೋಕೇ ವೈ ಗತಾನಿ ಮುನಿಭಿಸ್ಸಹ ॥ ೧೩೨ ॥**

---

೧೩೦. ಆ ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ಆವಶ್ಯಕವಾಗಿ ಮಾಡಬೇಕಾದ ವಿಷಯಗಳಿಗೆ ಸಂಬಂಧಿಸಿದ ಕೆಲಸವನ್ನು ಮಾಡುವರು. ಅವರೂ ಸಹ ರಾಗದ್ವೇಷಾದಿಗಳಿಗೆ ವಶರಾಗಿಯೇ ಸ್ವಕಾರ್ಯಗಳನ್ನು ಸಾಧಿಸುವರು.

೧೩೧. ಆ ದೇವತೆಗಳು ಸ್ವಕಾರ್ಯಗಳನ್ನು ಸಾಧಿಸಿಕೊಳ್ಳುವಾಗ ದೋಷಗಳೇನಾದರೂ ಕಂಡುಬಂದರೆ ಆ ಕಾರ್ಯವನ್ನೂ ಮಾಡದೇ ನಿವರ್ತರಾಗುವರು. ಹೀಗೆ ದೇವಯುಗಗಳು ಹತ್ತಾರು ಕಳೆದುಹೋಗುವುವು. ಅಂದರೆ ಒಂದು ಕಲ್ಪವು ಕಳೆದರೆ ದೇವತೆಗಳು ಮೇಲಿನ ಲೋಕಕ್ಕೆ ಹೋಗುವರು. ಒಂದು ಲೋಕದಿಂದ ಮತ್ತೊಂದು ಲೋಕಕ್ಕೆ ಹೋಗುವುದೇ ಅವರ ನಿವರ್ತನವು. ಅಂದರೆ ಅವರು ಹಿಂದಕ್ಕೆ ಬರದೇ ಮುಂದಕ್ಕೆ ಹೋಗುವರು.

೧೩೨. ಆ ದೇವತೆಗಳು ಆಯಾ ಅವಾಂತರಕಲ್ಪಗಳು ಕಳೆದರೆ ಜನಲೋಕದಿಂದ ತಪೋಲೋಕಕ್ಕೂ, ಅಲ್ಲಿಂದ ಬ್ರಹ್ಮದೇವನ ಸತ್ಯಲೋಕಕ್ಕೂ ಹೋಗುವರು. ಹೀಗೆ ಮುಂದಿನ ಲೋಕಗಳಿಗೆ ಹೋಗುವರೇ ಹೊರತು ಹಿಂದಿನ ಲೋಕಕ್ಕೆ ಎಂದಿಗೂ ಹೋಗುವುದಿಲ್ಲ. ಹೀಗೆ ದೇವತೆಗಳ ಯುಗಗಳು ಸಾವಿರಾರುಸಲ ಕಳೆದುಹೋಗುವುವು. ಆ ದೇವತೆಗಳು ಬ್ರಹ್ಮದೇವನ ಸತ್ಯಲೋಕದಲ್ಲಿ ಮುನಿಗಳ ಸಂಗಡ ಆ ಶರೀರವನ್ನು ಬಿಟ್ಟು ಮುಕ್ತರಾಗುವರು.

ನ ಶಕ್ಯಮಾನುಪೂರ್ವ್ಯೇಣ ತೇಷಾಂ ವಕ್ತುಂ ಸವಿಸ್ತರಂ |
ಅನಾದಿತ್ವಾಚ್ಚ ಕಾಲಸ್ಯ ಅಸಂಖ್ಯಾನಾಂ ಚ ಸರ್ವಶಃ ||
ಮನ್ವಂತರಾಣ್ಯತೀತಾನಿ ಯಾನಿ ಕಲ್ಪೈಃ ಪುರಾ ಸಹ || ೧೩೩ ||

ಪಿತೃಭಿರ್ಮುನಿಭಿರ್ದೇವೈಃ ಸಾರ್ಧಂ ಸಪ್ತರ್ಷಿಭಿಶ್ಚ ವೈ |
ಕಾಲೇನ ಪ್ರತಿಸೃಷ್ಟಾನಾಂ ಯುಗಾನಾಂ ಚ ನಿವರ್ತನಂ || ೧೩೪ ||

ಏತೇನ ಕ್ರಮಯೋಗೇನ ಕಲ್ಪಮನ್ವಂತರಾಣಿ ತು |
ಸಪ್ರಜಾನಿ ವ್ಯತೀತಾನಿ ಶತಶೋಽಥ ಸಹಸ್ರಶಃ || ೧೩೫ ||

ಮನ್ವಂತರಾಂತೇ ಸಂಹಾರಃ ಸಂಹಾರಾಂತೇ ಚ ಸಂಭವಃ |
ದೇವತಾನಾಮೃಷೀಣಾಂ ಚ ಮನೋಃ ಪಿತೃಗಣಸ್ಯ ಚ || ೧೩೬ ||

---

೧೩೩. ಹೀಗೆ ಆ ಋಷ್ಯಾದಿಗಳ ವಿಚಾರಗಳನ್ನು ವಿಸ್ತಾರವಾಗಿ ಹೇಳುವುದು ಅಸಾಧ್ಯವಾಗಿರುವುದು. ಏಕೆಂದರೆ ಕಾಲವು ಅನಾದಿಯಾಗಿರುವುದರಿಂದ ಋಷ್ಯಾದಿಗಳನ್ನು ಸಂಪೂರ್ಣವಾಗಿ ಹೇಳುವುದು ಅಸಾಧ್ಯವಾಗಿರುವುದು. ಹೀಗೆ ಮನ್ವಂತರಗಳೂ, ಕಲ್ಪಗಳೂ ಕೂಡ ಅನೇಕವಾಗಿ ಕಳೆದಿರುವುದರಿಂದ ಅವುಗಳನ್ನು ಹೇಳುವುದು ಅಸಾಧ್ಯವಾಗಿರುವುದು.

೧೩೪. ಕೃತತ್ರೇತಾದಿಯುಗಗಳು ಕಳೆಯುವಾಗ ಆ ಕಾಲದ ಸಂಗಡ ಆ ಜನಿಸಿದ ಪಿತೃಗಳು, ಮುನಿಗಳು, ದೇವತೆಗಳು, ಸಪ್ತರ್ಷಿಗಳು ಇವರೆಲ್ಲರೂ ಅತೀತರಾಗುವರು.

೧೩೫. ಈ ಕ್ರಮದಿಂದ ಕಲ್ಪಗಳೂ, ಮನ್ವಂತರಗಳೂ ಆಗ ಜನಿಸಿದ ಪ್ರಜೆಗಳೂ ಇವರು ನೂರಾರು ಆವೃತ್ತಿ ಅಥವಾ ಸಹಸ್ರಾರುಸಲ ಅತೀತರಾಗಿರುವರು.

೧೩೬. ಪ್ರತಿ ಮನ್ವಂತರಗಳ ಕೊನೆಯಲ್ಲಿಯೂ ದೇವತೆಗಳು, ಋಷಿಗಳು, ಮನುಗಳು, ಪಿತೃಗಣ ಇವುಗಳ ಸಂಹಾರವೂ, ಅನಂತರ ಜನನವೂ ಆಗುವುವು. ಪ್ರತಿ ಮನ್ವಂತರದಲ್ಲಿಯೂ ದೇವಾದಿಗಳ ಜನನಮರಣಗಳಾಗುವುವು.

ನ ಶಕ್ಯಮಾನುಪೂರ್ವ್ಯೇಣ ವಕ್ತುಂ ವರ್ಷಶತೈರಪಿ ।
ವಿಸ್ತರಸ್ತು ನಿಸರ್ಗಸ್ಯ ಸಂಹಾರಸ್ಯ ಚ ಸರ್ವಶಃ ॥
ಮನ್ವಂತರಸ್ಯ ಸಂಖ್ಯಾಂ ತು ಮಾನುಷೇಣ ನಿಬೋಧತ ॥ ೧೩೭ ॥

ದೇವತಾನಾಮೃಷೀಣಾಂ ಚ ಸಂಖ್ಯಾನಾರ್ಥವಿಶಾರದೈಃ ।
ತ್ರಿಂಶತ್ಕೋಟ್ಯಸ್ತು ಸಂಪೂರ್ಣಾಃ ಸಂಖ್ಯಾತಾಃ ಸಂಖ್ಯಯಾ ದ್ವಿಜೈಃ ॥ ೧೩೮ ॥

ಸಪ್ತಷಷ್ಟಿಸ್ತಥಾನ್ಯಾನಿ ನಿಯುತಾನಿ ಚ ಸಂಖ್ಯಯಾ ।
ವಿಂಶತಿಶ್ಚ ಸಹಸ್ರಾಣಿ ಕಾಲೋಽಯಂ ಸೋಽಧಿಕಾ ವಿನಾ ॥ ೧೩೯ ॥

ಮನ್ವಂತರಸ್ಯ ಸಂಖ್ಯೈಷಾ ಮಾನುಷೇಣ ಪ್ರಕೀರ್ತಿತಾ ।
ವತ್ಸರೇಣೈವ ದಿವ್ಯೇನ ಪ್ರವಕ್ಷ್ಯಾಮ್ಯಂತರಮ್ಮನೋಃ ॥ ೧೪೦ ॥

---

೧೩೭. ದೇವಾದಿಗಳ ಸೃಷ್ಟಿಸಂಹಾರವಿಷಯಗಳನ್ನು ಕ್ರಮವಾಗಿ ನಿರೂಪಿಸಲು ಸಹಸ್ರಾರು ವರ್ಷಗಳೂ ಸಾಲದು. ನೂರಾರು ವರ್ಷಗಳಿಂದಲೂ ವರ್ಣಿಸಲಸಾಧ್ಯವಾಗಿದೆ. ಹೀಗಿರಲು ವಿಸ್ತಾರವಾಗಿ ವರ್ಣಿಸುವುದು ಹೇಗೆ ಸಾಧ್ಯವು? ಈಗ ಮನ್ವಂತರದ ಸಂಖ್ಯೆಯನ್ನು ಮಾನುಷಪ್ರಮಾಣಾನುಸಾರವಾಗಿ ತಿಳಿಸುವೆನು ಕೇಳಿರೆಂದನು.

೧೩೮. ದೇವತೆಗಳು, ಋಷಿಗಳು ಇವರ ಸಂಖ್ಯೆಯ ಗಣನೆಯಲ್ಲಿ ನಿಪುಣರಾದ ಬ್ರಾಹ್ಮಣೋತ್ತಮರೂ, ಮೂವತ್ತು ಕೋಟಿ ದೇವತೆಗಳೂ, ಮೂವತ್ತು ಕೋಟಿ ಋಷಿಗಳೂ ಇರುವರೆಂದು ಹೇಳುವರು.

೧೩೯. ಮನುಷ್ಯಮಾನದಲ್ಲಿ ಒಂದು ಮನ್ವಂತರದ ಸಂಖ್ಯೆಯು (ಮೂವತ್ತು ಕೋಟಿಯು) ಅರವತ್ತೇಳುಲಕ್ಷದ ಇಪ್ಪತ್ತು ಸಾವಿರವರ್ಷಗಳೆಂದು ಕಾಲಜ್ಞರಾದ ಮಹಾತ್ಮರು ಲೋಕೋಪಕಾರಕ್ಕಾಗಿ ತಿಳಿಸಿರುವರು. ಇದಕ್ಕೆ ನ್ಯೂನಾಧಿಕಗಳಿಲ್ಲ.

೧೪೦. ಮೇಲೆ ನಿರೂಪಿಸಿರುವ ಸಂಖ್ಯೆಯು ಮಾನುಷ ಪ್ರಮಾಣಾನುಸಾರವಾಗಿದೆಯೆಂದು ತಿಳಿಯಬೇಕು. ಈಗ ದೇವಮಾನರೀತಿಯಿಂದ ಮನ್ವಂತರಪ್ರಮಾಣವನ್ನು ತಿಳಿಸುವೆನು ಕೇಳಿರೆಂದು ಸೂತಮುನಿಯು ತಿಳಿಸಿದನು.

ಅಷ್ಟೌ ಶತಸಹಸ್ರಾಣಿ ದಿವ್ಯಯಾ ಸಂಖ್ಯಯಾ ಸ್ಮೃತಂ |
ದ್ವಿಪಂಚಾಶತ್ತಥಾನ್ಯಾನ್ಯಸಹಸ್ರಾಣ್ಯಧಿಕಾನಿ ತು || ೧೪೧ ||

ಚತುರ್ದಶಗುಣೋ ಹ್ಯೇಷ ಕಾಲ ಆಹೂತಸಂಪ್ಲವಃ |
ಪೂರ್ಣಂ ಯುಗಸಹಸ್ರಂ ಸ್ಯಾತ್ತದಹರ್ಬ್ರಹ್ಮಣಃ ಸ್ಮೃತಃ || ೧೪೨ ||

ತತ್ರ ಸರ್ವಾಣಿ ಭೂತಾನಿ ದಗ್ಧಾನ್ಯಾದಿತ್ಯರಶ್ಮಿಭಿಃ |
ಬ್ರಹ್ಮಾಣಮಗ್ರತಃ ಕೃತ್ವಾ ಸಹ ದೇವರ್ಷಿದಾನವೈಃ ||
ಪ್ರವಿಶಂತಿ ಸುರಶ್ರೇಷ್ಠಂ ದೇವದೇವಂ ಮಹೇಶ್ವರಂ || ೧೪೩ ||

ಸ ಸೃಷ್ಟ್ವಾ ಸರ್ವಭೂತಾನಿ ಕಲ್ಪಾದಿಷು ಪುನಃ ಪುನಃ |
ಇತ್ಯೇಷ ಸ್ಥಿತಿಕಾಲೋ ವೈ ಮನೋರ್ದೇವರ್ಷಭಿಃ ಸಹ || ೧೪೪ ||

---

೧೪೧. ದೇವಮಾನಕ್ರಮದಲ್ಲಿ ಮನ್ವಂತರದ ಕಾಲವು ಎಂಟುಲಕ್ಷದ ಐವತ್ತೆರಡುಸಾವಿರ ವರ್ಷಗಳಾಗಿವೆ. ಅಂದರೆ ಎಂಟುಲಕ್ಷದ ಐವತ್ತೆರಡುಸಾವಿರ ವರ್ಷಗಳಾದರೆ ಒಬ್ಬ ಮನುವಿನ ಕಾಲವು ಕಳೆಯುವುದು.

೧೪೨. ಹೀಗೆ ಹದಿನಾಲ್ಕುಮನುಗಳ ಕಾಲವು ಕಳೆದರೆ ಅವಾಂತರಪ್ರಲಯ ವಾಗುವುದು. ಇಂತಹ ಯುಗಗಳು ಸಹಸ್ರಗಳಾದರೆ ಬ್ರಹ್ಮದೇವನಿಗೆ ಒಂದು ಹಗ ಲಾಗುವುದು. ಬ್ರಹ್ಮದೇವನ ಒಂದು ಹಗಲಲ್ಲಿ ಹದಿನಾಲ್ಕುಜನ ಮನುಗಳೂ ಕಳೆದು ಹೋಗುವರು.

೧೪೩. ಆ ಪ್ರಲಯ ಕಾಲದಲ್ಲಿ ಸಮಸ್ತ ಭೂತಗಳೂ ಸೂರ್ಯರಶ್ಮಿಗಳಿಂದ ದಗ್ಧವಾಗುವುವು. ಆಗ ಸಮಸ್ತರಾದ ದೇವತೆಗಳೂ, ಋಷಿಗಳೂ, ದಾನವರೂ ಕೂಡ ಬ್ರಹ್ಮದೇವನನ್ನು ಮುಂದುಮಾಡಿಕೊಂಡು ಸುರೋತ್ತಮನೂ ದೇವೋತ್ತಮನೂ ಆದ ಪರಮೇಶ್ವರನ ಬಳಿಗೆ ಹೋಗುವರು.

೧೪೪. ಆ ಬ್ರಹ್ಮದೇವನು ಕಲ್ಪಾದಿಗಳಲ್ಲಿ ಪದೇ ಪದೇ ಮನುಗಳು ದೇವತೆಗಳು ಋಷಿಗಳು ಮತ್ತು ಸಮಸ್ತ ಭೂತಗಳು ಇವುಗಳನ್ನು ಸೃಷ್ಟಿಮಾಡುವನು. ಹೀಗೆ ಮನ್ವಾದಿಗಳೊಡನೆ ಸರ್ವಭೂತಗಳ ಸೃಷ್ಟಿಯೇ ಸ್ಥಿತಿಕಾಲವಾಗಿರುವುದು.

ಸರ್ವಮನ್ವಂತರಾಣಾಂ ವೈ ಪ್ರತಿಸಂಧಿ ನಿಬೋಧತ ।
ಯುಗಾಖ್ಯಾ ಸಮುದ್ದಿಷ್ಟಾ ಪ್ರಾಗೇವಾಸ್ಮಿ ಮಯಾ ತವ || ೧೪೫ ||

ಕೃತತ್ರೇತಾದಿಸಂಯುಕ್ತಂ ಚತುರ್ಯುಗಮಿತಿ ಸ್ಮೃತಂ ।
ತದೇಕಸಪ್ತತಿಗುಣಂ ಪರಿವೃತ್ತಂ ತು ಸಾಧಿಕಂ ||
ಮನೋರೇಕಮಧೀಕಾರಂ ಪ್ರೋವಾಚ ಭಗವಾನ್ ಪ್ರಭುಃ || ೧೪೬ ||

ಏವಂ ಮನ್ವಂತರಾಣಾಂ ತು ಸರ್ವೇಷಾಮೇವ ಲಕ್ಷಣಂ ।
ಅತೀತಾನಾಗತಾನಾಂ ವೈ ವರ್ತಮಾನೇನ ಕೀರ್ತಿತಂ || ೧೪೭ ||

ಇತ್ಯೇಷ ಕೀರ್ತಿತಃ ಸರ್ಗೋ ಮನೋಃ ಸ್ವಾಯಂಭುವಸ್ಯ ಹ ।
ಪ್ರತಿಸಂಧಿಂ ತು ವಕ್ಷ್ಯಾಮಿ ತಸ್ಯ ವೈ ಚಾಪರಸ್ಯ ತು || ೧೪೮ ||

---

೧೪೫. ಎಲೈ ವಿಪ್ರವರ್ಯರೇ, ಸರ್ವಮನ್ವಂತರಗಳ ಉಪರಮವನ್ನು (ಸಂಬಂಧವನ್ನು) ನಿರೂಪಿಸುವೆನು ಕೇಳಿರಿ. ಪೂರ್ವದಲ್ಲಿ ನಾನು ನಿಮಗೆ ಯುಗಗಳ ಸ್ವರೂಪಗಳನ್ನು ತಿಳಿಸಿರುವೆನು. ಅವುಗಳ ವಿಷಯವನ್ನು ಪುನಃ ತಿಳಿಸುವೆನು ಕೇಳಿರಿ.

೧೪೬. ಕೃತ, ತ್ರೇತಾ, ದ್ವಾಪರ, ಕಲಿಯುಗಗಳ ಗುಂಪಿಗೆ ಚತುರ್ಯುಗ ವೆಂದು ನಾಮವು ಪ್ರಾಪ್ತವಾಗಿದೆ. ಇಂತಹ ಎಪ್ಪತ್ತೊಂದು ಚತುರ್ಯುಗಗಳಾದರೆ ಒಬ್ಬ ಮನುವಿನ ಅಧಿಕಾರವು ಮುಗಿಯುವುದೆಂದು ಸರ್ವಶಕ್ತನಾದ ಭಗವಂತನು ಹೇಳಿರುವನು. ಒಬ್ಬ ಮನುಚಕ್ರವರ್ತಿಯು ಎಪ್ಪತ್ತೊಂದು ಚತುರ್ಯುಗಗಳವರೆಗೂ ರಾಜ್ಯಭಾರವನ್ನು ಮಾಡುವನು.

೧೪೭. ಮೇಲೆ ಹೇಳಿದ ಲಕ್ಷಣಗಳೇ ಸಕಲ ಮನ್ವಂತರಗಳಲ್ಲಿಯೂ ಇರುತ್ತವೆ ಯೆಂದು ತಿಳಿಯಬೇಕು. ಈಗ ನಡೆಯುವ ವರ್ತಮಾನಕಾಲದ ಯುಗಾನುಸಾರವಾಗಿ ಭೂತಭವಿಷ್ಯದ್ಯುಗಗಳ ಲಕ್ಷಣಗಳನ್ನೂ ಊಹಿಸಿಕೊಳ್ಳಬೇಕು.

೧೪೮. ಹೀಗೆ ಸ್ವಾಯಂಭುವಮನುವಿನ ಲಕ್ಷಣವನ್ನು ಸಂಪೂರ್ಣವಾಗಿ ನಿರೂಪಿಸಿರುವೆನು. ಅಂತಹ ಮನ್ವಂತರಕ್ಕೂ ಬೇರೊಂದು ಮನ್ವಂತರಕ್ಕೂ ಇರುವ ಸಂಧಿಸ್ವರೂಪವನ್ನು ತಿಳಿಸುವೆನು ಕೇಳಿರೆಂದನು.

ಮನ್ವಂತರಂ ಯಥಾ ಪೂರ್ವಮೃಷಿಭಿರ್ದೇವತೈಃ ಸಹ |
ಅವಶ್ಯಂ ಭಾವಿನಾರ್ಥೇನ ಯಥಾ ತದ್ವೈ ನಿವರ್ತತೇ | || ೧೪೯ ||

ಅಸ್ಮಿನ್ ಮನ್ವಂತರೇ ಪೂರ್ವಂ ತ್ರೈಲೋಕ್ಯಸ್ಯೇಶ್ವರಾಸ್ತು ಯೇ |
ಸಪ್ತರ್ಷಯಶ್ಚ ದೇವಾಸ್ತೇ ಪಿತರೋ ಮನವಸ್ತಥಾ ||
ಮನ್ವಂತರಸ್ಯ ಕಾಲೇ ತು ಸಂಪೂರ್ಣೇ ಸಾಧಕಸ್ತಥಾ || ೧೫೦ ||

ಕ್ಷೀಣಾಧಿಕಾರಾಃ ಸಂವೃತ್ತಾ ಬುದ್ಧ್ವಾ ಪರ್ಯಾಯಮಾತ್ಮನಃ |
ಮಹರ್ಲೋಕಾಯ ತೇ ಸರ್ವೇ ಉನ್ಮುಖಾ ಧಧಿರೇ ಗತಿಂ || ೧೫೧ ||

ತತೋ ಮನ್ವಂತರೇ ತಸ್ಮಿನ್ ಪಕ್ಷೀಣಾ ದೇವತಾಸ್ತುತಾಃ |
ಸಂಪೂರ್ಣೇ ಸ್ಥಿತಿಕಾಲೇ ತು ತಿಷ್ಠಂತ್ಯೇಕಂ ಕೃತಂ ಯುಗಂ || ೧೫೨ ||

---

೧೪೯. ಮೊದಲನೆಯ ಮನ್ವಂತರದಲ್ಲಿ ಯಾವ ದೇವತೆಗಳೂ, ಮುನಿಗಳೂ, ದಾನವರೂ ಇವರೇ ಮೊದಲಾದವರೂ, ಆವಶ್ಯಕವಾಗಿ ನಡೆಯಬೇಕಾದ ಕಾರ್ಯಗಳೂ ಇರುತ್ತವೆಯೋ ಅವೇ ಸಕಲ ಮನ್ವಂತರಗಳಲ್ಲಿಯೂ ನಡೆಯುವುವು.

೧೫೦. ಪೂರ್ವದ ಮನ್ವಂತರಗಳಲ್ಲಿ ಮೂರು ಲೋಕಗಳಿಗೂ ಯಾರು ಯಾರು ಅಧಿಕಾರಿಗಳಾಗಿರುವರೋ ಮತ್ತು ಯಾವ ಸಪ್ತರ್ಷಿಗಳೂ, ದೇವತೆಗಳೂ, ಪಿತೃಗಳೂ, ಮನುಗಳೂ ಇವರೇ ಮೊದಲಾದವರು ಇರುವರೋ ಮತ್ತು ಸಂಪೂರ್ಣಾಧಿಕಾರ ಗಳನ್ನು ಪಡೆದಿರುವರೋ ಅವರೇ ಇತರ ಮನ್ವಂತರಗಳಿಗೂ ಅಧಿಕಾರಿಗಳಾಗಿರುವರು.

೧೫೧. ಅಂತಹ ದೇವಾದಿಗಳು ಕ್ರಮವಾಗಿ ಕ್ಷೀಣಾಧಿಕಾರಿಗಳಾಗಲಾಗಿ ತಮ್ಮ ಅಧಿಕಾರವು ನಷ್ಟವಾಯಿತೆಂದು ತಿಳಿದ ಕೂಡಲೇ ಅವರು ಆ ಜನಲೋಕವನ್ನು ಬಿಟ್ಟು ಮಹರ್ಲೋಕಕ್ಕೆ ಹೋಗಲು ಸಿದ್ಧರಾಗುವರು.

೧೫೨. ಅನಂತರ ದೇವಾದಿಗಳು ಆ ಮಹರ್ಲೋಕದಲ್ಲಿ ಅಧಿಕಾರಹೀನರಾಗಿ ಸಂಪೂರ್ಣ ಸ್ಥಿತಿಕಾಲ ಬರುವವರೆಗೂ, ಒಂದು ಕೃತಯುಗದವರೆಗೂ ಇರುವರು.

ಉತ್ಪದ್ಯಂತೇ ಭವಿಷ್ಯಾಶ್ಚ ಯಾವನ್ಮನ್ವಂತರೇಶ್ವರಾಃ ।
ದೇವತಾಃ ಪಿತರಶ್ಚೈವ ಋಷಯೋ ಮನುರೇವ ಚ ॥ ೧೫೩ ॥

ಮನ್ವಂತರೇ ತು ಸಂಪೂರ್ಣೇ ಯದ್ಯನ್ಯದ್ವೈ ಕಲೌ ಯುಗೇ ।
ಸಂಪದ್ಯತೇ ಕೃತಂ ತೇಷು ಕಲಿಶಿಷ್ಟೇಷು ವೈ ತದಾ ॥ ೧೫೪ ॥

ಯಥಾ ಕೃತಸ್ಯ ಸಂತಾನಃ ಕಲಿಪೂರ್ವಃ ಸ್ಮೃತೋ ಬುಧೈಃ ।
ತಥಾ ಮನ್ವಂತರಾಂತೇಷು ಆದಿರ್ಮನ್ವಂತರಸ್ಯ ಚ ॥ ೧೫೫ ॥

ಕ್ಷೀಣೇ ಮನ್ವಂತರೇ ಪೂರ್ವೇ ಪ್ರವೃತ್ತೇ ಚಾಪರೇ ಪುನಃ ।
ಮುಖೇ ಕೃತಯುಗಸ್ಯಾಥ ತೇಷಾಂ ಶಿಷ್ಟಾಸ್ತು ಯೇ ತದಾ ॥ ೧೫೬ ॥

ಸಪ್ತರ್ಷಯೋ ಮನುಶ್ಚೈವ ಕಾಲಾವೇಕ್ಷಾಸು ಯೇ ಸ್ಥಿತಾಃ ।
ಮನ್ವಂತರಂ ಪ್ರತೀಕ್ಷಂತೇ ಕ್ಷೇಯಂತೇ ತಪಸಿ ಸ್ಥಿತಾಃ ॥ ೧೫೭ ॥

---

೧೫೩-೧೫೪. ಭಾವಿಯುಗದಲ್ಲಿ ಹುಟ್ಟಬೇಕಾಗಿರುವ ಮನ್ವಂತರೇಶ್ವರರು, ದೇವತೆಗಳು, ಪಿತೃಗಳು, ಋಷಿಗಳು, ಮನುಗಳು ಇವರು ಆ ಮನ್ವಂತರವು ಕಳೆಯಲು ಕಲಿಯುಗದವರೆಗೂ ಇರುವರು. ಆ ಕಲಿಯುಗವು ಕಳೆದು ಪುನಃ ಕೃತಯುಗವು ಬರಲು ಕಲಿಯುಗದಲ್ಲಿ ಅವಶಿಷ್ಟರಾದ ದೇವಾದಿಗಳು ಪುನಃ ಜನಿಸುವರು.

೧೫೫. ಕಲಿಯುಗದಲ್ಲಿ ಅವಶಿಷ್ಟರಾದ ದೇವಾದಿಗಳು ಹೇಗೆ ಕೃತಯುಗದಲ್ಲಿ ಹುಟ್ಟುವರೆಂದು ಜ್ಞಾನಿಗಳು ಹೇಳುವರೋ, ಅಂದರೆ ಕಲಿಯುಗವು ಕಳೆದ ಕೂಡಲೇ ಕೃತಯುಗವು ಹೇಗೆ ಬರುವುದೋ ಹಾಗೆಯೇ ಒಂದು ಮನ್ವಂತರವು ಮತ್ತೊಂದು ಮನ್ವಂತರಕ್ಕೆ ಕಾರಣವಾಗಿರುವುದು ಎಂದೂ ಪಂಡಿತರೇ ಹೇಳುತ್ತಾರೆ.

೧೫೬-೧೫೭. ಪೂರ್ವದ ಮನ್ವಂತರವು ಕಳೆದು ಬೇರೊಂದು ಮನ್ವಂತರವು ಪುನಃ ಬರಲಾಗಿ ಕೃತಯುಗದ ಆದಿಭಾಗದಲ್ಲಿ ಯಾರು ಉಳಿದಿರುವರೋ ಮತ್ತು ಯಾವ ಸಪ್ತರ್ಷಿಗಳು, ಮನುಗಳು ಕಾಲವನ್ನು ನಿರೀಕ್ಷಿಸುತ್ತಾ ಇರುವರೋ, ಅವರೆಲ್ಲರೂ ಮತ್ತೊಂದು ಮನ್ವಂತರವನ್ನು ನಿರೀಕ್ಷಿಸುತ್ತಾ ತಪಸ್ಸಿನಲ್ಲಿ ಆಸಕ್ತರಾಗಿ ಕಾಲಯಾಪನೆ ಮಾಡುವರು.

ಮನ್ವಂತರವ್ಯವಸ್ಥಾರ್ಥಂ ಸಂತತ್ಯರ್ಥಶ್ಚ ಸರ್ವಶಃ ।
ಪೂರ್ವವತ್ ಸಂಪ್ರವರ್ತಂತೇ ಪ್ರವೃತ್ತೇ ವೃಷ್ಟಿಸರ್ಜನೇ ॥ ೧೫೮ ॥

ದ್ವಂದ್ವೇಷು ಸಂಪ್ರವೃತ್ತೇಷು ಉತ್ಪನ್ನಾಸ್ವೌಷಧೀಷು ಚ ।
ಪ್ರಜಾಸು ಚ ನಿಕೇತಾಸು ಸಂಸ್ಥಿತಾಸು ಕ್ವಚಿತ್ ಕ್ವಚಿತ್ ॥ ೧೫೯ ॥

ವಾರ್ತಾಯಾಂ ತು ಪ್ರವೃತ್ತಾಯಾಂ ಸದ್ಧರ್ಮೇ ಋಷಿಭಾವಿತೇ ।
ನಿರಾನಂದೇ ಗತೇ ಲೋಕೇ ನಷ್ಟೇ ಸ್ಥಾವರಜಂಗಮೇ ॥ ೧೬೦ ॥

ಅಗ್ರಾಮನಗರೇ ಚೈವ ವರ್ಣಾಶ್ರಮವಿವರ್ಜಿತೇ ।
ಪೂರ್ವಮನ್ವಂತರೇ ಶಿಷ್ಟೇ ಯೇ ಭವಂತೀಹ ಧಾರ್ಮಿಕಾಃ ॥
ಸಪ್ತರ್ಷಯೋ ಮನುಶ್ಚೈವ ಸಂತಾನಾರ್ಥಂ ವ್ಯವಸ್ಥಿತಾಃ ॥ ೧೬೧ ॥

---

೧೫೮. ಆ ಮಹಾತ್ಮರು ಮನ್ವಂತರವನ್ನು ವ್ಯವಸ್ಥೆ ಮಾಡುವುದಕ್ಕಾಗಿಯೂ, ಸಂಪೂರ್ಣವಾದ ಪ್ರಜಾಸೃಷ್ಟಿಗಾಗಿಯೂ, ಜನನಮರಣಕ್ಕಾಗಿಯೂ ಪೂರ್ವದಂತೆ ಪ್ರಯತ್ನಿಸುವರು.

೧೫೯. ಶಿತೋಷ್ಣಾದಿದ್ವಂದ್ವಗಳು ಉಂಟಾಗಲು ಔಷಧಾದಿಗಳು ಉತ್ಪನ್ನವಾಗುವುವು. ಅಲ್ಲಲ್ಲಿ ಪ್ರಜೆಗಳೂ, ಅವರ ಮನೆಮಠಗಳೂ ಅಲ್ಲಲ್ಲಿ ಏರ್ಪಡುವುವು.

೧೬೦. ಅನಂತರ ಪ್ರಜೆಗಳ ವ್ಯಕ್ತಿಜೀವನಗಳು ಉಂಟಾಗುವುವು. ಅದರಂತೆ ಋಷಿಪೂಜಿತವಾದ ಧರ್ಮಗಳು ಪ್ರವೃತ್ತವಾಗುವುವು. ಅನಂತರ ಕೊನೆಯ ಪ್ರಲಯ ಕಾಲವು ಒದಗಲು ಲೋಕದಲ್ಲಿ ಆನಂದವು ನಷ್ಟವಾಗಿ ಸ್ಥಾವರಜಂಗಮಗಳಾದ ಜಗತ್ತೆಲ್ಲವೂ ನಾಶವಾಗುವುವು.

೧೬೧. ಆಗ ಗ್ರಾಮನಗರಾದಿಗಳೂ, ವರ್ಣಾಶ್ರಮಧರ್ಮಗಳೂ ನಷ್ಟವಾಗಿ ಪೂರ್ವಮನ್ವಂತರಗಳಲ್ಲಿ ನಷ್ಟವಾಗದೆಯೇ ಉಳಿದಿರುವ ಧಾರ್ಮಿಕರಾದ ಸಪ್ತರ್ಷಿಗಳೂ ಮತ್ತು ಮುನಿಗಳೂ ಸಂತಾನಕ್ಕಾಗಿ ಸಿದ್ಧರಾಗುವರು.

ಪ್ರಜಾರ್ಥಂ ತಪತಾಂ ತೇಷಾಂ ತಪಃ ಪರಮದುಶ್ಚರಂ ।
ಉತ್ಪದ್ಯಂತೀಹ ಸರ್ವೇಷಾಂ ನಿಧನೇಷ್ವಿಹ ಸರ್ವಶಃ ॥ ೧೬೨ ॥

ದೇವಾಸುರಾಃ ಪಿತೃಗಣಾ ಮುನಯೋ ಮನವಸ್ತಥಾ ।
ಸರ್ಪಾ ಭೂತಾಃ ಪಿಶಾಚಾಶ್ಚ ಗಂಧರ್ವಾ ಯಕ್ಷರಾಕ್ಷಸಾಃ ॥ ೧೬೩ ॥

ತತಸ್ತೇಷಾಂ ತು ಯೇ ಶಿಷ್ಟಾಃ ಶಿಷ್ಟಾಚಾರಾ ಪ್ರಚಕ್ಷತೇ ।
ಸಪ್ತರ್ಷಯೋ ಮನುಶ್ಚೈವ ಆದೌ ಮನ್ವಂತರಸ್ಯ ಹ ॥
ಪ್ರಾರಂಭಂತೇ ಚ ಕರ್ಮಾಣಿ ಮನುಷ್ಯಾ ದೈವತೈಃ ಸಹ ॥ ೧೬೪ ॥

ಮನ್ವಂತರಾದೌ ಪ್ರಾಗೇವ ತ್ರೇತಾಯುಗಮುಖೇ ತತಃ ।
ಪೂರ್ವಂ ದೇವಾಸ್ತತಸ್ತೇ ವೈ ಸ್ಥಿತೇ ಧರ್ಮೇ ತು ಸರ್ವಶಃ ॥ ೧೬೫ ॥

---

೧೬೨. ಅವರು ಪ್ರಜಾಸೃಷ್ಟಿಗಾಗಿ ಅತಿಭಯಂಕರವಾದ ತಪಸ್ಸನ್ನು ಮಾಡುವರು. ಆ ಪ್ರಲಯದಲ್ಲಿ ಪ್ರಜೆಗಳು ಸಂಪೂರ್ಣವಾಗಿ ನಾಶವಾಗಲು ಪುನಃ ಈ ಲೋಕದಲ್ಲಿ ಸೃಷ್ಟಿಗಾಗಿ ಅವರು ಉತ್ಪನ್ನರಾಗುವರು.

೧೬೩ ಪೂರ್ವಯುಗದಲ್ಲಿದ್ದ ದೇವಾಸುರರೂ, ಪಿತೃಗಣಗಳೂ, ಮುನಿಗಳೂ, ಮನುಗಳೂ, ಸರ್ಪಗಳೂ, ಭೂತಪ್ರೇತಪಿಶಾಚಗಳೂ, ಗಂಧರ್ವಯಕ್ಷರಾಕ್ಷಸರೂ ಕೂಡ ನಷ್ಟರಾಗಿ ಪುನಃ ಸೃಷ್ಟಿಗೆ ಸಿದ್ಧರಾಗುವರು.

೧೬೪. ಅನಂತರ ಅದರಲ್ಲಿ ಯಾರು ಅತ್ಯಂತ ಶಿಷ್ಟಾಚಾರಿಗಳಾಗಿರುವರೋ ಅಂತಹ ಸಪ್ತರ್ಷಿಗಳೂ ಮನುಗಳೂ ಆ ಮನ್ವಂತರದ ಆದಿಯಲ್ಲಿ ಮನುಷ್ಯರು ಮತ್ತು ದೇವತೆಗಳು ಇವರ ಸಂಗಡ ವರ್ಣಾಶ್ರಮಾಚಾರಗಳನ್ನು ಸ್ಥಾಪಿಸುವರು.

೧೬೫. ಮನ್ವಂತರವು ಆರಂಭಿಸುವುದಕ್ಕೆ ಮೊದಲೇ ತ್ರೇತಾಯುಗದ ಆದಿ ಭಾಗದಲ್ಲಿ ಮೊದಲು ದೇವತೆಗಳು ಧರ್ಮದಲ್ಲಿ ಪ್ರವರ್ತಕರಾಗುವರು. ಅನಂತರ ಋಷಿಗಳು ರಾಜರುಗಳು ಧರ್ಮಗಳನ್ನು ಸ್ಥಾಪಿಸುವರು.

ಋಷೀಣಾಂ ಬ್ರಹ್ಮಚರ್ಯೇಣ ಗತ್ವಾನೃಣ್ಯಂ ತು ವೈ ತತಃ ।
ಪಿತೄಣಾಂ ಪ್ರಜಯಾ ಚೈವ ದೇವಾನಾಮಿಜ್ಯಯಾ ತಥಾ ॥ ೧೬೬ ॥

ಶತಂ ವರ್ಷಸಹಸ್ರಾಣಿ ಧರ್ಮೇ ವರ್ಣಾತ್ಮಕೇ ಸ್ಥಿತಾಃ ।
ತ್ರಯೀಂ ವಾರ್ತಾಂ ದಂಡನೀತಿಂ ಧರ್ಮಾನ್ ವರ್ಣಾಶ್ರಮಾಂಸ್ತಥಾ ।
ಸ್ಥಾಪಯಿತ್ವಾಶ್ರಮಾಂಶ್ಚೈವ ಸ್ವರ್ಗಾಯ ದಧಿರೇ ಮತೀಃ ॥ ೧೬೭ ॥

ಪೂರ್ವಂ ದೇವೇಷು ತೇಷ್ವೇವ ಸ್ವರ್ಗಾಯ ಪ್ರಮುಖೇಷು ಚ ।
ಪೂರ್ವಂ ದೇವಾಸ್ತತಸ್ತೇ ವೈ ಸ್ಥಿತಾ ಧರ್ಮೇಣ ಕೃತ್ಸ್ನಶಃ ॥ ೧೬೮ ॥

ಮನ್ವಂತರೇ ಪರಾವೃತ್ತೇ ಸ್ಥಾನಾನ್ಯುತ್ಸೃಜ್ಯ ಸರ್ವಶಃ ।
ಮಂತ್ರೈಃ ಸಹೋರ್ಧ್ವಂ ಗಚ್ಛಂತಿ ಮಹರ್ಲೋಕಮನಾಮಯಂ ॥ ೧೬೯ ॥

---

೧೬೬. ಆಗ ಪ್ರಜೆಗಳು ಬ್ರಹ್ಮಚರ್ಯ ಬ್ರಹ್ಮಯಜ್ಞಾದಿಗಳಿಂದ ಋಷಿಗಳ ಋಣಗಳನ್ನೂ, ಸಂತಾನದಿಂದ ಪಿತೃಗಳ ಋಣಗಳನ್ನೂ, ಯಜ್ಞಯಾಗಾದಿಗಳಿಂದ ದೇವಋಣವನ್ನೂ ಪರಿಹರಿಸಿಕೊಳ್ಳುತ್ತಿದ್ದರು.

೧೬೭. ಹೀಗೆ ಮಹಾತ್ಮರು ಸಹಸ್ರಾರು ವರ್ಷಗಳು ವರ್ಣಾಶ್ರಮಧರ್ಮಗಳಲ್ಲಿ ಆಸಕ್ತರಾಗಿ ಶ್ರುತಿಸ್ಮೃತ್ಯಾದಿಗಳನ್ನೂ, ವ್ಯಾಪಾರವನ್ನೂ, ದಂಡನೀತಿಯನ್ನೂ, ವರ್ಣಾಶ್ರಮಗಳನ್ನೂ, ಧರ್ಮಗಳನ್ನೂ ಸ್ಥಾಪಿಸಿ, ಸ್ವರ್ಗಾದಿಲೋಕಗಳಿಗೆ ಹೋಗಲು ಬಯಸುವರು.

೧೬೮. ಪೂರ್ವದಲ್ಲಿ ದೇವಾದಿಗಳು ಧರ್ಮಾದಿಗಳನ್ನು ಲೋಕದಲ್ಲಿ ಸ್ಥಾಪಿಸಿ ಸ್ವರ್ಗಾದಿಲೋಕಗಳಿಗೆ ಹೋಗುತ್ತಿದ್ದರು. ಅನಂತರ ಮಹರ್ಷಿಗಳೇ ಮೊದಲಾದವರು ತಾವು ಆ ಸದಾಚಾರಗಳನ್ನು ಆಚರಿಸುತ್ತಾ ಇತರರಿಗೆ ಆದರ್ಶಪ್ರಾಯರಾಗಿರುವರು. ಮತ್ತು ಧರ್ಮಸ್ಥಾಪಕರೂ ಆಗುವರೆಂದು ಹೇಳಿದನು.

೧೬೯. ತರುವಾಯ ಆ ಮನ್ವಂತರವು ಕಳೆಯಲು ಆ ದೇವಋಷ್ಯಾದಿಗಳು ಸಂಪೂರ್ಣವಾಗಿ ತಮ್ಮ ತಮ್ಮ ಸ್ಥಾನಾಧಿಕಾರಾದಿಗಳನ್ನು ಬಿಟ್ಟು ಮಂತ್ರಗಳ ಸಂಗಡ ಊರ್ಧ್ವಗತವೂ ದೋಷರಹಿತವೂ ಆದ ಮಹರ್ಲೋಕವನ್ನು ಹೊಂದುವರು.

ವಿನಿವೃತ್ತವಿಕಾರಾಸ್ತೇ ಮಾನಸೀಂ ಸಿದ್ಧಿಮಾಸ್ಥಿತಾಃ ।
ಅವೇಕ್ಷಮಾಣಾ ವಶಿನಸ್ತಿಷ್ಠಂತ್ಯಾಭೂತಸಂಪ್ಲವಂ ॥ ೧೭೦ ॥

ತತಸ್ತೇಷು ವ್ಯತೀತೇಷು ಸರ್ವೇಷ್ವೇತೇಷು ಸರ್ವದಾ ।
ಶೂನ್ಯೇಷು ದೇವಸ್ಥಾನೇಷು ತ್ರೈಲೋಕ್ಯೇ ತೇಷು ಸರ್ವಶಃ ॥
ಉಪಸ್ಥಿತಾ ಇಹೈವಾನ್ಯೇ ದೇವಾ ಯೇ ಸ್ವರ್ಗವಾಸಿನಃ ॥ ೧೭೧ ॥

ತತಸ್ತೇ ತಪಸಾ ಯುಕ್ತಾ ಸ್ಥಾನಾನ್ಯಾಪೂರಯಂತಿ ವೈ ।
ಸತ್ಯೇನ ಬ್ರಹ್ಮಚರ್ಯೇಣ ಶ್ರುತೇನ ಚ ಸಮನ್ವಿತಾಃ ॥ ೧೭೨ ॥

ಸಪ್ತರ್ಷೀಣಾಂ ಮನೋಶ್ಚೈವ ದೇವಾನಾಂ ಪಿತೃಭಿಃ ಸಹ ।
ನಿಧನಾನೀಹ ಪೂರ್ವೇಷಾಮಾದಿನಾ ಚ ಭವಿಷ್ಯತಾ ॥ ೧೭೩ ॥

---

೧೭೦. ದೇವಋಷ್ಯಾದಿಗಳು ಮಹಾಪ್ರಲಯಕಾಲದವರೆಗೂ ನಿರ್ವಿಕಾರರೂ ಸ್ವತಂತ್ರರೂ ಆಗಿ ಮಾನಸಿಕ ಮಹಾಸಿದ್ಧಿಯನ್ನು ಹೊಂದಿ ಪ್ರಲಯವನ್ನು ಎದುರು ನೋಡುತ್ತಾ ಇರುವರು.

೧೭೧. ಅನಂತರ ಆ ಯುಗಗಳು ಕಳೆದುಹೋಗಲಾಗಿ ಆ ದೇವತೆಗಳೆಲ್ಲರೂ ಲೋಕಾಂತರವನ್ನು ಹೊಂದುವರು. ಮೂರು ಲೋಕಗಳಲ್ಲಿರುವ ದೇವಸ್ಥಾನಗಳು ದೇವತೆಗಳಿಲ್ಲದೇ ಶೂನ್ಯವಾಗಲು ಸ್ವರ್ಗವಾಸಿಗಳಾದ ಇತರ ದೇವತೆಗಳು ಈ ಲೋಕದಲ್ಲಿ ಅವತರಿಸುವರು.

೧೭೨. ಅನಂತರ ಅವರು ತಪಸ್ಸಿನಿಂದ ಯುಕ್ತರಾಗಿ ಸಮಸ್ತ ಸ್ಥಾನಗಳನ್ನೂ ಪೂರ್ಣಗೊಳಿಸುವರು. ಮತ್ತು ಅವರು ಬ್ರಹ್ಮಚರ್ಯ ಶಾಸ್ತ್ರಶ್ರವಣ ಇವುಗಳಿಂದ ಯುಕ್ತರಾಗಿ ಸ್ಥಾನಗಳನ್ನು ಪೂರ್ಣಮಾಡುವರು.

೧೭೩. ಸಪ್ತರ್ಷಿಗಳು, ಮನುಗಳು, ದೇವತೆಗಳು, ಪಿತೃಗಳು, ಇವರು ಮೊದಲೇ ಸತ್ಯಲೋಕಕ್ಕೆ ಹೋಗಿರತಕ್ಕ ದೇವತೆಗಳು ಮತ್ತು ಮುಂದೆ ಬರುವ ದೇವಋಷ್ಯಾದಿಗಳ ಸಂಗಡ ಪರಮಪದವಾದ ಕೈವಲ್ಯವನ್ನು ಹೊಂದುವರು.

ತೇಷಾಮತ್ಯಂತವಿಚ್ಛೇದ ಇಹ ಮನ್ವಂತರ ಕ್ಷಯಾತ್ ।
ಏವಂ ಪೂರ್ವಾನುಪೂರ್ವೇಣ ಸ್ಥಿತಿರೇಷಾನವಸ್ಥಿತಾ ॥
ಮನ್ವಂತರೇಷು ಸರ್ವೇಷು ಯಾವದಾಭೂತಸಂಪ್ಲವಂ ॥ ೧೭೪ ॥

ಏವಂ ಮನ್ವಂತರಾಣಾಂ ತು ಪ್ರತಿಸಂಧಾನಲಕ್ಷಣಂ ।
ಅತೀತಾನಾಗತಾನಾಂ ತು ಪ್ರೋಕ್ತಂ ಸ್ವಾಯಂಭುವೇನ ತು ॥ ೧೭೫ ॥

ಮನ್ವಂತರೇಷ್ವತೀತೇಷು ಭವಿಷ್ಯಾಣಾಂ ತು ಸಾಧನಂ ।
ಏವಮತ್ಯಂತವಿಚ್ಛಿನ್ನಂ ಭವತ್ಯಾಭೂತಸಂಪ್ಲವಾತ್ ॥ ೧೭೬ ॥

ಮನ್ವಂತರಾಣಾಂ ಪರಿವರ್ತನಾನಿ
ಏಕಾಂತತಸ್ತಾನಿ ಮಹರ್ಗತಾನಿ ।

---

೧೭೪. ಒಂದು ಮನ್ವಂತರವು ಕಳೆಯುವಾಗ ಆ ಮನ್ವಂತರದಲ್ಲಿದ್ದ ದೇವತೆಗಳೆಲ್ಲರೂ ಆ ಮನ್ವಂತರವು ಕಳೆದೊಡನೆಯೇ ಮುಂದಿನ ಲೋಕಗಳಿಗೆ ಹೋಗಿ ಮಹಾಪ್ರಳಯದವರೆಗೂ ಬ್ರಹ್ಮಲೋಕದಲ್ಲಿರುವರು. ಹೀಗೆಯೇ ಸರ್ವಮನ್ವಂತರಗಳಲ್ಲಿರುವ ದೇವಾದಿಗಳು ಆಯಾ ಮನ್ವಂತರಗಳೊಡನೇ ಸ್ವರ್ಲೋಕಕ್ಕೆ ಹೋಗುವರು. ಅಲ್ಲಿ ಪಂಚಭೂತಗಳು ಪ್ರಲಯವಾಗುವವರೆಗೂ ಇರುವರು.

೧೭೫. ಈಗ ನಡೆಯುವ ವರ್ತಮಾನ ಸ್ವಾಯಂಭುವ ಮನ್ವಂತರದಲ್ಲಿ ಕಾರ್ಯಗಳು ಹೇಗೆ ನಡೆಯುತ್ತವೆಯೋ, ಹಾಗೆಯೇ ಅತೀತಾನಾಗತವಾದ ಸಕಲ ಮನ್ವಂತರಗಳಲ್ಲಿಯೂ ಕಾರ್ಯಕ್ರಮಗಳು ನಡೆಯುತ್ತವೆ.

೧೭೬. ಹಿಂದೆ ಅತೀತವಾದ ಮನ್ವಂತರಗಳಲ್ಲಿ ನಡೆದ ಕಾರ್ಯಗಳೇ ಪ್ರಾಯಕವಾಗಿ ಮುಂದಿನ ಮನ್ವಂತರಗಳಲ್ಲಿಯೂ ನಡೆಯುವುವು. ಹೀಗೆಯೇ ಪ್ರಲಯಕಾಲದವರೆಗೂ ಅವಿಚ್ಛಿನ್ನವಾಗಿ ನಡೆಯುವುವು.

ಮಹರ್ಜನಂ ಚೈವ ಜನಂ ತಪಶ್ಚ
ಏಕಾಂತಗಾನಿ ಸ್ಮ ಭವಂತಿ ಸತ್ಯೇ ॥ ೧೭೭ ॥

ತದ್ಭಾವಿನಾಂ ತತ್ರ ತು ದರ್ಶನೇನ
ನಾನಾತ್ವದೃಷ್ಟೇನ ಚ ಪ್ರತ್ಯಯೇನ ।
ಸತ್ಯೇ ಸ್ಥಿತಾನೀಹ ತದಾ ತು ತಾನಿ
ಪ್ರಾಪ್ತೇ ವಿಕಾರೇ ಪ್ರತಿಸರ್ಗಕಾಲೇ ॥ ೧೭೮ ॥

ಮನ್ವಂತರಾಣಾಂ ಪರಿವರ್ತನಾನಿ
ಮುಂಚಂತಿ ಸತ್ಯಂ ತು ತತೋಪರಾಂತೇ ।
ತತೋಭಿಯೋಗಾದ್ವಿಷಮಪ್ರಮಾಣಂ
ವಿಶಂತಿ ನಾರಾಯಣಮೇವ ದೇವಂ ॥ ೧೭೯ ॥

---

೧೭೭. ಮನ್ವಂತರದಲ್ಲಿರತಕ್ಕ ದೇವಋಷ್ಯಾದಿಗಳು ಆ ಮನ್ವಂತರವು ಪರಿವರ್ತಿಸುವಾಗ ಅಂದರೆ ಕಳೆದುಹೋದಾಗ ತಮ್ಮ ಸ್ಥಾನಗಳನ್ನು ಬಿಟ್ಟು ಮಹ ರ್ಲೋಕಕ್ಕೂ, ಅಲ್ಲಿಂದ ಜನಲೋಕಕ್ಕೂ, ಅಲ್ಲಿಂದ ತಪೋಲೋಕಕ್ಕೂ, ಆ ತಪೋ ಲೋಕದಿಂದ ಅತ್ಯಂತ ಏಕಾಂತವೂ ರಹಸ್ಯವೂ ಆದ ಸತ್ಯಲೋಕಕ್ಕೂ ಹೋಗುವರು.

೧೭೮. ಪರಮಶ್ರೇಷ್ಠವಾದ ಸತ್ಯಲೋಕವನ್ನು ಹೊಂದಿದ ದೇವಾದಿಗಳು ಆ ಪವಿತ್ರವಾದ ಸತ್ಯಲೋಕದರ್ಶನದಿಂದ ಪರಮಸಂತುಷ್ಟರೂ ಉತ್ತಮರಾದ ಬ್ರಹ್ಮಾದಿದೇವತೆಗಳೇ ಮೊದಲಾದವರು ಇರುವರೆಂದು ಭೇದಜ್ಞಾನದಿಂದ ಸಹಿತರೂ ಆಗಿ ತೃಪ್ತಿಯನ್ನು ಹೊಂದಿರುವರು. ವಿಕಾರಕ್ಕೆ ಕಾರಣವಾದ ಅವಾಂತರ ಪ್ರಲಯಾದಿ ಗಳು ಬಂದರೂ ವಿಕಾರಹೊಂದದೆಯೇ ನಿತ್ಯತೃಪ್ತರಾಗಿರುವರು.

೧೭೯. ಮನ್ವಂತರಗಳು ಪರಿವರ್ತನೆಗಳಾಗುವಾಗ ಆ ಮನ್ವಂತರಗಳಲ್ಲಿರತಕ್ಕ ದೇವಾದಿಗಳು ಸ್ವರ್ಗಲೋಕಾದಿಗಳನ್ನು ಬಿಟ್ಟು ಬ್ರಹ್ಮದೇವನ ಸತ್ಯಲೋಕಕ್ಕೆ ಹೋಗುವರು. ಮಹಾಪ್ರಲಯವು ಪ್ರಾಪ್ತವಾಗಲು ದೇವತೆಗಳು ಬ್ರಹ್ಮದೇವನ ಸಂಗಡ ಪ್ರಮಾಣಾತೀತನೂ, ದೇವೋತ್ತಮನೂ ಆದ ಶ್ರೀಮನ್ನಾರಾಯಣನನ್ನು ಹೊಂದಿ ಶಾಶ್ವತವಾದ ಪರಮಸುಖ (ಕಲ್ಯಾಣವನ್ನು) ಪಡೆಯುವರು.

ಮನ್ವಂತರಾಣಾಂ ಪರಿವರ್ತನೇಷು
ಚಿರಪ್ರವೃತ್ತೇಷು ವಿಧಿಸ್ಸ್ವಭಾವಾತ್ ।
ಕ್ಷಣಂ ರಸಂ ತಿಷ್ಠತಿ ಜೀವಲೋಕಃ
ಕ್ಷಯೋದಯಾಭ್ಯಾಂ ಪರಿವಂದಮಾನಃ ॥ ೧೮೦ ॥

ಇತ್ಯುತ್ತರಾಣ್ಯೇವಮೃಷಿಸ್ತುತಾನಾಂ
ಧರ್ಮಾತ್ಮನಾಂ ದಿವ್ಯದೃಶಾಂ ಮುನೂನಾಂ ।
ವಾಯುಪ್ರಣೀತಾನುಪಲಭ್ಯ ದೃಶ್ಯಂ
ದಿವ್ಯೌಜಸಾ ವ್ಯಾಸಸಮಾಸಯೋಗ್ಯೈಃ ॥ ೧೮೧ ॥

ಸರ್ವಾಣಿ ರಾಜರ್ಷಿಸುರರ್ಷಿಮಂತಿ ।
ಬ್ರಹ್ಮರ್ಷಿದೇವೋರಗವಂತಿ ಚೈವ ॥
ಸುರೇಶಸಪ್ತರ್ಷಿ ಪಿತೃಪ್ರಜೇಶೈಃ
ಯುಕ್ತಾನಿ ಸಂಯ್ಯಕ್ ಪರಿವರ್ತನಾನಿ ॥ ೧೮೨ ॥

---

೧೮೦. ಹೀಗೆ ಮನ್ವಂತರಗಳು ಬಹುಕಾಲದವರೆಗೂ ನಡೆದು ದೈವವಶದಿಂದ ಕಳೆಯಲಾಗಿ ಜೀವರಾಶಿಗಳು ಸ್ವಲ್ಪಕಾಲ ಸುಖಭೋಗಾದಿಗಳನ್ನು ಅನುಭವಿಸಿ ಸೃಷ್ಟಿಸಂಹಾರಗಳಿಗೆ ಸಿಲುಕಿ ನಾನಾ ಜನ್ಮಗಳನ್ನು ಹೊಂದುವರು. ಹೀಗೆ ಸೃಷ್ಟಿ, ಸ್ಥಿತಿ ಸಂಹಾರಾದಿಗಳು ನಡೆಯುವುವು.

೧೮೧. ನೈಮಿಷಾರಣ್ಯವಾಸಿಗಳಾದ ಮುನಿಗಳು ವಾಯುಪ್ರೋಕ್ತವೂ, ಧರ್ಮಾತ್ಮರೂ, ದಿವ್ಯಜ್ಞಾನಿಗಳೂ, ಮಹರ್ಷಿವಂಶಸಂಭೂತರೂ ಮನ್ವಾದಿಗಳ ವಿಷಯಕವಾದ ಈ (ಇತಿಹಾಸವನ್ನು) ಪುರಾಣವನ್ನು ಸೂತಪುರಾಣೀಕನಿಂದ ಸಂಕ್ಷೇಪ ವಿಸ್ತಾರಗಳಿಂದ ಕೇಳಿ ದಿವ್ಯಜ್ಞಾನವನ್ನೂ ಸಂತೋಷವನ್ನೂ ಹೊಂದಿದರು.

೧೮೨. ಸಮಸ್ತ ಮನ್ವಂತರಗಳು, ರಾಜರ್ಷಿಗಳು, ಮಹರ್ಷಿಗಳು, ದೇವರ್ಷಿಗಳು, ದೇವತೆಗಳು, ಉರಗಗಳು, ಸುರೇಶರು, ಸಪ್ತರ್ಷಿಗಳು, ಪಿತೃಗಳು ಪ್ರಜೇಶರು ಇವರ ಸ್ಥಿತಿಗತಿಗಳನ್ನೂ ಪರಿವರ್ತನೆಗಳನ್ನೂ ಹೊಂದಿರುತ್ತವೆ.

ಉದಾರವಂಶಾಭಿಜನದ್ಯುತೀನಾಂ
ಪ್ರಕೃಷ್ಟಮೇಧಾಭಿರನ್ವಿತಾನಾಂ ।
ಕೀರ್ತಿದ್ಯುತಿಖ್ಯಾತಿಭಿರನ್ವಿತಾನಾಂ
ಪುಣ್ಯಂ ಹಿ ವಿಖ್ಯಾಪನಮೀಶ್ವರಾಣಾಂ ॥ ೧೮೩ ॥

ಸ್ವರ್ಗೀಯಮೇತತ್ ಪರಮಂ ಪವಿತ್ರಂ
ಪುತ್ರೀಯಮೇತಚ್ಚ ಪರಂ ರಹಸ್ಯಂ ।
ಜಪ್ಯಂ ಮಹತ್ಪರ್ವಸು ಚೈತದಗ್ರ್ಯಂ
ದುಃಸ್ವಪ್ನಶಾಂತಿಃ ಪರಮಾಯುಷೇಯಂ ॥ ೧೮೪ ॥

ಪ್ರಜೇಶದೇವರ್ಷಿಮನುಪ್ರಧಾನಾಂ
ಪುಣ್ಯಪ್ರಸೂತಿಂ ಪ್ರಥಿತಾಮಜಸ್ಯ ।
ಮಮಾಪಿ ವಿಖ್ಯಾಪನಸಂಯಮಾಯ
ಸಿದ್ಧಿಂ ಜಪಧ್ವಂ ಸುಮಹೇಶ ತತ್ವಂ ॥ ೧೮೫ ॥

---

೧೮೩. ಈ ಪುರಾಣವು ಉದಾರವಂಶೀಕರೂ, ಸತ್ಕುಲಪ್ರಸೂತರೂ, ಉತ್ಕೃಷ್ಟ ಜ್ಞಾನದಿಂದ ಪ್ರಖ್ಯಾತರೂ, ಮೇಧಾವಿಗಳೂ, ಕೀರ್ತಿ, ಕಾಂತಿ, ಪ್ರಖ್ಯಾತಿ ಇವುಗಳಿಂದ ಪ್ರಸಿದ್ಧರೂ ಆದ ಮಹಾರಾಜರ ಚರಿತ್ರೆಗಳನ್ನು ಪ್ರತಿಪಾದಿಸುವುದರಿಂದ ಪುಣ್ಯಕರವೂ ಮಂಗಳಪ್ರದವೂ ಆಗಿದೆ.

೧೮೪. ಹೀಗೆ ಮಹಾತ್ಮರ ಗುಣಗಾನರೂಪವಾದ ಈ ವಾಯುಮಹಾ ಪುರಾಣವು ಸ್ವರ್ಗಪ್ರದವೂ, ಅತ್ಯಂತಪವಿತ್ರವೂ, ಪುತ್ರದಾಯಕವೂ, ಅತ್ಯಂತ ರಹಸ್ಯವೂ, ಮಹಾಪರ್ವಕಾಲದಲ್ಲಿ ಪಠನಾರ್ಹವೂ, ಅತ್ಯುತ್ತಮವೂ, ದುಃಸ್ವಪ್ನ ನಾಶಕವೂ, ಪರಮಾಯುಷ್ಕರವೂ ಆಗಿದೆ.

೧೮೫. ಈ ವಾಯುಪುರಾಣವು ರಾಜರ್ಷಿಗಳು, ದೇವರ್ಷಿಗಳು, ಮನುಗಳು, ಬ್ರಹ್ಮದೇವ ಇವರ ಮಹಾಮಹಿಮೆಗಳನ್ನು ವರ್ಣಿಸುವುದರಿಂದ ಅತ್ಯಂತ ಪವಿತ್ರವಾಗಿರುವುದು. ಇದನ್ನು ಹೇಳುವುದರಿಂದ ನನಗೂ, ಪರಮಾತ್ಮನ ಮಹಾತತ್ತ್ವಗಳನ್ನು ಕೇಳುವುದರಿಂದ ನಿಮಗೂ ಪರಮಸಿದ್ಧಿಯು ಅಂದರೆ ಪರಮಕಲ್ಯಾಣವು ಪ್ರಾಪ್ತವಾಗುವುದು.

**ಇತ್ಯೇತದಂತರಂ ಪ್ರೋಕ್ತಂ ಮನೋಃ ಸ್ವಾಯಂಭುವಸ್ಯ ತು |**
**ವಿಸ್ತರೇಣಾನುಪೂರ್ವ್ಯಾಚ ಭೂಯಃ ಕಿಂ ವರ್ಣಯಾಮ್ಯಹಂ || ೧೮೬ ||**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಪ್ರಜಾಪತಿ ವಂಶಾನುಕೀರ್ತನಂ" ನಾಮೈಕಷಷ್ಟಿತಮೋಽಧ್ಯಾಯಃ**

**—: ಸಮಾಪ್ತಮಿದಂ ಪ್ರಥಮಂ ಖಾಂಡಂ :—**

---

೧೮೬. ಎಲೈ ಮುನಿವರ್ಯರೇ, ಹೀಗೆ ಸ್ವಾಯಂಭುವಮನ್ವಂತರದ ವಿಷಯಗಳನ್ನು ನಿಮಗೆ ವಿಸ್ತಾರವಾಗಿಯೂ, ಕ್ರಮವಾಗಿಯೂ ನಿರೂಪಿಸಿರುವೆನು. ಮತ್ತು ಉಳಿದ ಯಾವ ವಿಷಯವು ತಿಳಿಯಬೇಕಾಗಿದೆಯೋ ಅದನ್ನೂ ಕೂಡ ವಿವರಿಸುವೆನೆಂದು ಸೂತಮಹಾಮುನಿಯು ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಪ್ರಜಾಪತಿಗಳ "ವಂಶವರ್ಣನವೆಂಬ" ಅರವತ್ತೊಂದನೆಯ ಅಧ್ಯಾಯವು ಮುಗಿದುದು.

—: ಹೀಗೆ ವಾಯುಮಹಾಪುರಾಣದ ಪ್ರಥಮಖಂಡವು ಮುಗಿದುದು :—

—: ಶ್ರೀಕೃಷ್ಣಾರ್ಪಣಮಸ್ತು :—

# ಅರವತ್ತೊಂದನೆಯ ಅಧ್ಯಾಯದ ಸಾರಾಂಶವು

ಶ್ರೀಮನ್ನಾರಾಯಣನು ವೇದವ್ಯಾಸಮಹರ್ಷಿಯಾಗಿ ಅವತರಿಸಿ ಅಖಂಡವಾದ ವೇದವನ್ನು ನಾಲ್ಕು ಭಾಗಮಾಡಿ ನಾಲ್ಕುಜನ ಶಿಷ್ಯರಿಗೆ ನಾಲ್ಕು ವೇದಗಳನ್ನು ಉಪದೇಶಮಾಡಿದನು. ಆಗ ಪೈಲಮುನಿಯು ಋಗ್ವೇದವನ್ನೂ, ವೈಶಂಪಾಯನನು ಯಜುರ್ವೇದವನ್ನೂ, ಜೈಮಿನಿಯು ಸಾಮವೇದವನ್ನೂ, ಸುಮಂತುವು ಅಥರ್ವಣ ವೇದವನ್ನೂ ಅಧ್ಯಯನಮಾಡಿದರು. ಅವರು ತಮ್ಮ ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಅವರಲ್ಲಿ ಭಾರದ್ವಾಜ, ಯಾಜ್ಞವಲ್ಕ್ಯ, ಗಾಲಕಿ, ಸಾಲಕಿ, ಶತಬಲಾಕ, ನೈಗಮ, ಬಾಷ್ಕಲ, ರಥೀತರ, ಪಸ್ನಗಾರಿ ಮೊದಲಾದವರು ಸಂಹಿತಾಪ್ರವರ್ತಕರಾಗಿದ್ದರು. ವೈಶಂಪಾಯನನ ಶಿಷ್ಯರು ಯಜುರ್ವೇದದಲ್ಲಿ ಎಂಭತ್ತಾರು (೮೬) ಸಂಹಿತೆಗಳನ್ನು ರಚಿಸಿದರು. ಅವರು ಉದೀಚ್ಯರು, ಪ್ರಾಚ್ಯರು ಮಧ್ಯದೇಶಿಯರೆಂದು ಮೂರು ವಿಧವಾಗಿ ಪ್ರಖ್ಯಾತರಾದರು. ಉದೀಚ್ಯರಲ್ಲಿ ಶ್ಯಾಮಾಯನಿಯು ಪ್ರಧಾನನಾಗಿಯೂ, ಮಧ್ಯದೇಶೀಯರಲ್ಲಿ ಆರುಣಿಯು ಮುಖ್ಯನಾಗಿಯೂ, ಪ್ರಾಚ್ಯರಲ್ಲಿ ಆಲಂಬಿಯು ಅಗ್ರೇಸರನಾಗಿಯೂ ಇದ್ದರು. ಇವರು ಚರಕರೆಂದು ಪ್ರಸಿದ್ಧರಾದರು. ಪೂರ್ವದಲ್ಲಿ ಮಹರ್ಷಿಗಳೆಲ್ಲರೂ ಒಂದಾನೊಂದು ಮಹತ್ಕಾರ್ಯಸಾಧನೆಗಾಗಿ ಮೇರುಪರ್ವತಕ್ಕೆ ಹೋಗಬೇಕೆಂದು ಸಂಕೇತಮಾಡಿಕೊಂಡು ಬಾರದವರಿಗೆ ಬ್ರಹ್ಮಹತ್ಯಾದೋಷವು ಬರುವುದೆಂದು ನಿರ್ಣಯಮಾಡಿಕೊಂಡಿದ್ದರು. ಆಗ ವೈಶಂಪಾಯನಮುನಿಯನ್ನು ಬಿಟ್ಟು ಉಳಿದವರು ಹೋಗಿದ್ದರು. ನಿಯಮಾನುಸಾರ ಅವನು ತಮ್ಮ ಶಿಷ್ಯರಿಗೆ ಈ ವಿಧಿಯನ್ನು ಆಚರಿಸುವಂತೆ ತಿಳಿಸಿದನು. ಯಾಜ್ಞವಲ್ಕ್ಯನು ವಿನಾ ಉಳಿದವರು ಅದನ್ನು ಅಂಗೀಕರಿಸಿದರು. ಅವರಿಗೆ ಚರಕರೆಂದು ನಾಮವು ಪ್ರಾಪ್ತವಾಗಿರುವುದು. ಹೀಗೆ ನಾಲ್ಕು ವೇದಗಳೂ ಶಿಷ್ಯಪ್ರಶಿಷ್ಯರ ಮೂಲಕ ಲೋಕದಲ್ಲಿ ಹರಡಿದುವು. ಆಗ ನಾಲ್ಕು ವೇದಗಳೂ, ಷಡಂಗಗಳೂ, ಮೀಮಾಂಸ, ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಮತ್ತು ಪುರಾಣ ಈ ಹದಿನಾಲ್ಕು ವಿದ್ಯೆಗಳೂ ಲೋಕಪ್ರಸಿದ್ಧವಾಗಿದ್ದುವು. ಮತ್ತು ದೇವರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳೂ ಪ್ರಸಿದ್ಧರಾಗಿದರು. ಒಂದು ಮನ್ವಂತರದಲ್ಲಿ ಹುಟ್ಟಿದ ದೇವಋಷ್ಯಾದಿಗಳೇ ಇತರ ಮನ್ವಂತರದಲ್ಲಿಯೂ ಜನಿಸು

ವರು. ಕೃತತ್ರೇತಾದ್ವಾಪರಕಲಿಯುಗಗಳಿಗೆ ಒಂದು ಚತುರ್ಯುಗವೆಂಬ ಸಂಜ್ಞೆಯು. ಎಪ್ಪತ್ತೊಂದು ಚತುರ್ಯುಗಗಳು ಕಳೆದರೆ ಒಂದು ಮನುಕಲ್ಪವಾಗುವುದು. ಇಂತಹ ಹದಿನಾಲ್ಕು ಮನುಗಳು ಕಳೆದರೆ ಪೂರ್ಣವಾದ ಯುಗಸಹಸ್ರವಾಗುವುದು ಅದು ಬ್ರಹ್ಮನ ಒಂದು ಹಗಲು, ಮನುಕಲ್ಪಗಳ ಕೊನೆಯಲ್ಲಿ ದೇವಋಷ್ಯಾದಿಗಳು ಸತ್ಯ ಲೋಕವನ್ನು ಹೊಂದುವರು. ಸತ್ಯಲೋಕದಲ್ಲಿದ್ದ ಸಮಸ್ತ ದೇವಋಷ್ಯಾದಿಗಳು ಕೊನೆಯಲ್ಲಿ ಬ್ರಹ್ಮದೇವನ ಸಂಗಡ ಪರಮಪುರುಷನಾದ ಶ್ರೀಮನ್ನಾರಾಯಣನನ್ನು ಹೊಂದಿ ಶಾಶ್ವತವಾದ ಪರಮಸುಖವನ್ನು ಹೊಂದುವರು. ವಾಯುಪ್ರೋಕ್ತವಾದ ಈ ಮಹಾಪುರಾಣವು ಸಮಸ್ತರಾದ ದೇವಋಷ್ಯಾದಿರಾಜರ ಚರಿತ್ರೆಯನ್ನೂ ವಿವಿಧ ವರ್ಣಾಶ್ರಮಧರ್ಮಗಳನ್ನೂ ಪ್ರತಿಪಾದಿಸುವುದರಿಂದ ಆಯುರಾರೋಗ್ಯಾದಿ ಸಕಲಾ ಭೀಷ್ಟದಾಯಕವಾಗಿರುತ್ತದೆ, ಎಂಬ ವಿಷಯಗಳು ಈ ಅಧ್ಯಾಯದಲ್ಲಿ ಪ್ರತಿಪಾದಿತ ವಾಗಿವೆ.

—: ಪ್ರಥಮಖಂಡವು ಸಮಾಪ್ತವು :—